ಮುಂದಿನ ತಿಂಗಳಿನಿಂದ

## ಗೀತಾ ಸೀತಾರಾಮ್

ರಚಿತ ವಿನೂತನ ಶೈಲಿಯ



# "ಸಪ್ತಸ್ವರ"

ಧಾರಾವಾಹಿಯಾಗಿ ಬರಲಿದೆ.

ಇಂದೇ ನಿಮ್ಮ ಪ್ರತಿಯನ್ನು ಕಾಯ್ದಿರಿಸಿ

ಏಪ್ರಿಲ್ 1992 ವನಿತಾ ಸಂಚಿಕೆಯಲ್ಲಿ ಲೀಲಾ ಎಂ. ಕೆ. ರವರ "ನಮ್ಮ ಪರಿಸರ ಮತ್ತು ಅದರ ರಕ್ಷಣೆ" ಲೇಖನ ಅರ್ಥಪೂರ್ಣವಾಗಿತ್ತು. ನಾಟ್ಯ ಪ್ರವೀಣೆ ಕುಮಾರಿ ನಿರುಪಮಾರವರ ಹಾಗೂ ಈಜುಗಾರ್ತಿ ಶಿಲ್ಪರವರ ಮುಖಪುಟ ಆಕರ್ಷಕವಾಗಿತ್ತು.

ಶ್ರೀಮತಿ ಕೌಸಲ್ಯ ಮೂರ್ತಿಯವರು ಗೃಹಿಣಿಯಾದ ಮೇಲೂ, ಕ್ರೀಡಾ ಕ್ಷೇತ್ರದಲ್ಲಿ ತೋರುತ್ತಿರುವ ಆಸಕ್ತಿ ಮೆಚ್ಚುವಂತಹದು. ಇವರು ವಿದೇಶದಲ್ಲೂ ಪ್ರಶಸ್ತಿಗಳಿಸುವಂತಾಗಲಿ.

**— ಶೋಭಾದೇವಿ, ಕೊಳಂಬೆ, ಉಡುಪಿ**




'ಗೋದಿ ನಾಗರತ್ನ' ಅವರ ಪರಿಚಯ ಮತ್ತು ಅವರ ಸಾಧನೆ ಬಹಳ ಚೆನ್ನಾಗಿ ಬಂದಿವೆ. ಮೈದಾ ಹಿಟ್ಟು ಗೋದಿಯಿಂದ ಮಾಡಿದ ಹಿಟ್ಟಲ್ಲ ಹಾಗೂ ಒಂದು ತರದ ಮರದ ಬೂಷ್ಟಿನಿಂದ ತಯಾರಿಸಿದ್ದು ಎಂದು ತಿಳಿದಿದ್ದೇವೆ. ವಿಜ್ಞಾನ ಪತ್ರಿಕೆಯೊಂದರಲ್ಲಿ ಮೈದಾ ಹಿಟ್ಟಿನಲ್ಲಿ ಪೋಷಕಾಂಶ ಸೊನ್ನೆ ಎಂದು ಬರೆದಿದ್ದಾರೆ. ಈ ಕುರಿತು ವಿವರಣೆ ನೀಡಿದ್ದರೆ ಉತ್ತಮವಾಗಿತ್ತು.

ಗೋದಿ ಹಿಟ್ಟಿನಲ್ಲಿ ಬಂದ ಹೊಟ್ಟನ್ನು ಪೋಷಕಾಂಶ ರಕ್ಷಿಸುವ ಸಲುವಾಗಿ ನಾವೆಲ್ಲ ಇನ್ನೊಮ್ಮೆ ಗೋದಿ ಹಿಟ್ಟು ಮಾಡಿಸುವಾಗ ಹೊಟ್ಟನ್ನು ಕೂಡಿಸಬಹುದು.

ಶ್ರೀಮತಿ ನಾಗರತ್ನ ಅವರು ಅವರ ಕಾರ್ಯವನ್ನು ಪುಸ್ತಕ ರೂಪದಲ್ಲಿ ತಂದರೆ ಎಷ್ಟೋ ಜನಕ್ಕೆ ಅನುಕೂಲವಾಗುವದು.

**— ಉಷಾ ನಾಗರಾಜ, ಹುಬ್ಬಳ್ಳಿ**

ಸಾಕ್ಷರತೆಯಲ್ಲಿ, ಕುಟುಂಬ ಯೋಜನೆಯಲ್ಲಿ ಪ್ರಗತಿಪೂರ್ಣ ರಾಜ್ಯವೆಂದು ಘೋಷಿಸಿಕೊಂಡಿರುವ ಕೇರಳ. ಹೆಣ್ಣು-ಗಂಡೆನ್ನದೆ ಸಮಾನತೆಯನ್ನು ಸಾಧಿಸುತ್ತಿರುವ ಈ ಸಂದರ್ಭದಲ್ಲಿ ವಿದೇಶಿಯರನ್ನು ಆಹ್ವಾನಿಸಿ 'ಪುತ್ರ ಕಾಮೇಷ್ಟಿ' ಯಾಗವನ್ನು ನಡೆಸುತ್ತಿರುವುದು ಆ ರಾಜ್ಯಕ್ಕಷ್ಟೇ ಅಲ್ಲ, ಆಧುನಿಕ ಭಾರತಕ್ಕೇ ಕಳಂಕಪ್ರಾಯವಾಗಿವೆ. ಮೂಢನಂಬಿಕೆಯ ದಾಸರಾದ ಭಾರತೀಯರು ಹಮ್ಮಿಕೊಂಡಿರುವ ಇಂತಹ ಯಾಗದಲ್ಲಿ ವಿದೇಶಿಯರೂ ಪಾಲ್ಗೊಳ್ಳುತ್ತಿರುವುದು ಆಶ್ಚರ್ಯವೇ ಸರಿ.

**— ಹೆಚ್. ಎಂ. ಗೀತಾಕೋಗಲೂರು, ಶಿವಮೊಗ್ಗ**

ಮಾರ್ಚ್ 1992ರ ವನಿತಾ ಸಂಚಿಕೆಯಲ್ಲಿ ಶ್ರೀಮತಿ ಕಾವ್ಯ ಕೌಶಿಕ್, ಮೈಸೂರು ಇವರು ಬರೆದ ಲೇಖನ "ಉದ್ಯೋಗ ಸ್ತ್ರೀಗೆ ವರವೇ? ಶಾಪವೇ?" ಓದಿ ಉದ್ಯೋಗಸ್ಥ ಮಹಿಳೆಯಾದ ನನಗೆ ಒಂದು ಕ್ಷಣ ಈ ಬಗ್ಗೆ ಚಿಂತನ ಮಾಡುವಂತಾಯ್ತು. ಈ ಲೇಖನದಲ್ಲಿ ಲೇಖಕಿಯವರು ಉದ್ಯೋಗಸ್ಥ ಮಹಿಳೆಯರನ್ನು ಮೂರು ವಿಧಗಳಾಗಿ ವಿಂಗಡಿಸಿ, ಸ್ತ್ರೀಯರ ಸಮಸ್ಯೆಗಳನ್ನು ಎಳೆ ಎಳೆಯಾಗಿ ಬಹಳಷ್ಟು ವಿಚಾರ ಮಾಡಿ, ಮನೋಜ್ಞವಾಗಿ ವಿವರಿಸಿದ್ದಾರೆ. ಅವರು ತಿಳಿಸಿರುವಂತೆ, ಸಮಸ್ಯೆಗಳೆಲ್ಲವೂ ನೂರಕ್ಕೆ ನೂರು ಭಾಗ ಸತ್ಯವಾಗಿದೆ ಉದ್ಯೋಗಸ್ಥ ಮಹಿಳೆಯರಿಗೆ.

ನನ್ನ ಬಗ್ಗೆ ಹೇಳುವುದಾದರೆ, ಉದ್ಯೋಗ ನನ್ನ ಪಾಲಿಗೆ ಶೇಕಡಾ 50 ಭಾಗ ವರವಾಗಿದೆ. ಶೇಕಡಾ 50 ಭಾಗ ಶಾಪವೂ ಆಗಿದೆ. ಸಂತೋಷದಿಂದಿರಲು ಹಣ ಮುಖ್ಯವೆನಿಸಿದರೂ, ಹಣವೇ ಸಂತೋಷವಲ್ಲ. ಬೆಳಿಗ್ಗೆ ಏಳುವಾಗಿನಿಂದ ಹಿಡಿದು, ಕಚೇರಿಗೆ ಹೋಗುವವರೆಗೆ ಒಂದೇ ಸಮನೆ ಕೆಲಸಗಳನ್ನು ಮಾಡಿ, ಸಂಜೆ ಬಂದ ನಂತರ ಪುನಃ ರಾತ್ರಿ ಮಲಗುವವರೆಗೆ ದುಡಿಯಬೇಕಾದಾಗ ಈ ಕೆಲಸ ಶಾಪವೆನಿಸುತ್ತದೆ. ಕೆಲಸದಿಂದ ದಣಿದು ಮನೆಗೆ ಬಂದಾಗ ಒಂದು ಲೋಟ ಕಾಫಿಯನ್ನೂ ಕೊಡುವವರು ಇಲ್ಲದಿರುವಾಗ ಈ ಕೆಲಸ ಬೇಡವೇ ಬೇಡ ಎನ್ನುವಂತಾಗುತ್ತದೆ. ಸತಿಗೆ ಸಹಕರಿಸದ ಗಂಡ, ನಿರ್ಲಕ್ಷ್ಯದಿಂದ ಕಾಣುವ ಅತ್ತೆ-ಮಾವ, ಕಿರಿಕಿರಿ ಮಾಡುವ ಮೈದುನ, ನಾದಿನಿಯರಿದ್ದರಂತೂ ಉದ್ಯೋಗದಲ್ಲಿರುವ ಮಹಿಳೆಯ ಪಾಡು ನಾಯಿ ಪಾಡಾಗುತ್ತದೆ. ಹೆಂಡತಿ ದುಡಿಯುವುದರಿಂದ ಸಂಸಾರದ ರಥ ಸುಗಮವಾಗಿ ಸಾಗುತ್ತಿದೆ ಎಂದು ಗಂಡ ತಿಳಿದಾಗ, ಹೆಂಡತಿಯೂ ದುಡಿದು ಬರುತ್ತಾಳೆ. ಅವಳಿಗೆ ನನ್ನ ಕೈಲಾದ ಸಹಕಾರ ನೀಡಬೇಕು ಎಂದು ಗಂಡ ಅರಿತಾಗ, ಅವಳ ದುಡಿಮೆಗೆ ಗೌರವ ಸಿಕ್ಕಾಗ ಮಾತ್ರ ಉದ್ಯೋಗ ಮಹಿಳೆಯ ಪಾಲಿಗೆ ವರವಾಗುವುದಂತೂ ಖಂಡಿತ.

ಹೆಂಡತಿಯ ತವರು ಮನೆಯ ಕಷ್ಟ ಸುಖಗಳಲ್ಲೂ ಭಾಗಿಯಾಗಿ, ತನ್ನ ತಂದೆ-ತಾಯಿಯರನ್ನೂ ಸುಖವಾಗಿ ನೋಡಿಕೊಂಡು, ಹೆಂಡತಿಯನ್ನು ನೆಮ್ಮದಿಯಿಂದ ನೋಡಿಕೊಳ್ಳುವ ಗಂಡ ಸಿಕ್ಕರೆ, ನಿಜಕ್ಕೂ ಅಂತಹ ಉದ್ಯೋಗಸ್ಥ ಮಹಿಳೆಯ ಬಾಳು 'ಸ್ವರ್ಗವೇ' ಆಗುತ್ತದೆ. ಅವಳಿಗೆ ಉದ್ಯೋಗ ವರವಾಗುತ್ತದೆ.

**— ಲೀಲಾ ತುಮಕೂರು**

ಮಿನಿ ಕಥೆಗಳನ್ನೊಳಗೊಂಡ ವನಿತಾ (ಏಪ್ರಿಲ್ 92) ಅತ್ಯಂತ ಸೊಗಸಾಗಿ ಮೂಡಿ ಬಂದಿದೆ. 'ಜನನೀ ಜನ್ಮಭೂಮಿಶ್ಚ', 'ದಾನಿಗಳು', 'ಭಾರ್ಯಾ ರೂಪವತಿ' ಅಚ್ಚುಕಟ್ಟಾಗಿದೆ. ಸುನೀತಿ

## ವನಿತಾಪದ ಸಂಪದ 43 ಫಲಿತಾಂಶಗಳು

ಈ ಬಾರಿಯ ಸ್ಪರ್ಧೆಯಲ್ಲಿ ತುಂಬಾ ಅಭ್ಯರ್ಥಿಗಳು ಗೆದ್ದಿರುವುದರಿಂದ ಲಾಟರಿ ಪದ್ಧತಿಯಲ್ಲಿ 25 ಸ್ಪರ್ಧಿಗಳನ್ನು ಆಯ್ಕೆ ಮಾಡಿ, ಬಹುಮಾನದ ಹಣವನ್ನೂ ಅವರಿಗೆ ಹಂಚಲಾಗುವುದು. ಬಹುಮಾನ ಪಡೆದವರ ಹೆಸರುಗಳನ್ನೂ ಈ ಕೆಳಗೆ ನಮೂದಿಸಲಾಗಿದೆ.

1. ರೂಪಶ್ರೀ ಹೆಚ್. ಸಿ. ಚಿಕ್ಕಮಗಳೂರು
2. ಮಮತಾ ಕೆ. ಎಂ. ಮಡಿಕೇರಿ
3. ಅನಿತಾ ಆರ್. ಕಾಮತ, ಚಿಕಾಲಿಮ್, ಗೋವಾ
4. ಸುನಿತಾ ಎಸ್. ಬೈಪಡಿತ್ತಾಯ, ಮಳವಳ್ಳಿ ತಾಲೂಕು
5. ಸ್ವಪ್ನ ಬ. ಶೀಮಿಕೇರಿ, ಅಥಣಿ
6. ಶ್ರೀದೇವಿ ಅ. ಕುಲಕರ್ಣಿ. ವಿಜಾಪೂರ
7. ಶ್ರೀಮತಿ ವಿಶಾಲಾ ನಟರಾಜ್, ಬೀರೂರು
8. ಮಣಿಕರ್ಣಿಕಾ ಎಸ್., ಊಟಿ
9. ವಿಶಾಲಾಕ್ಷಿ ದೇಶಪಾಂಡೆ, ಶಿರಹಟ್ಟಿ
10. ಲಲಿತಾ ಶ್ರೀಕಂಠಯ್ಯ, ಭದ್ರಾವತಿ
11. ಹೆಚ್. ಎಸ್. ಸೌದಾಮಿನಿ, ಕೆ. ಆರ್. ಸಾಗರ
12. ರೇಖಾ ಎಸ್. ಸಿ. ದಾವಣಗೆರೆ
13. ಶ್ರೀಮತಿ ಶಾಂತಾ ನರಸಿಂಹಮೂರ್ತಿ, ತುಮಕೂರು
14. ಎಂ. ಎಸ್. ತನುಜ, ಚಿತ್ರದುರ್ಗ
15. ಮಂಜುಳ ಮೂರ್ತಿ, ಧಾರವಾಡ
16. ಕುಮುದಾ ದೇಶಪಾಂಡೆ, ಹುಬ್ಬಳ್ಳಿ
17. ಯಶೋದ ನರಸಿಂಹಯ್ಯ, ಬಳ್ಳಾರಿ
18. ಜಯಮ್ಮ ಗೋಪಾಲಕೃಷ್ಣ, ಹಾಸನ
19. ಹೆಚ್. ಶಾರದಾ ಎಸ್. ಭಟ್, ಭದ್ರಾವತಿ
20. ಜಿ. ಎಸ್. ಲೀಲಾವತಿ, ಬೆಂಗಳೂರು
21. ಶ್ರೀಮತಿ ಉಷಾ ವ್ಹಿ. ಮುಧೋಳ, ಗೋಕಾಕ
22. ಕುಮಾರ್ ಎನ್. ಬಿ., ಮೈಸೂರು
23. ಸುಬ್ಬಲಕ್ಷ್ಮಿ ಎಸ್. ರಾವ್, ಬೆಂಗಳೂರು
24. ಜಿ. ವಿ. ರೇಣುಕಾ, ಮೈಸೂರು
25. ವಸುಧ ನಾಗರಾಜ್, ಬೆಂಗಳೂರು

| | | | | | | | | | | |
|---|---|---|---|---|---|---|---|---|---|---|
| ಸ | ಮು | ದ್ರ | ಯಾ | ನ | | ವಿ | ಕ್ರ | ಮ | ರ್ಕ | ಕೆ |
| ಚಿ | | ವ | | ವ | | ಕ್ರ | | ಪಂ | | ಪ್ರ |
| ವ | ರು | ಣ | | ಶಂ | | ಮಾಂ | | ತ | ವ | ರು |
| ಹಂ | | | | ರ | ಮ | ಕ | | | | ಮ |
| ಪ್ರ | | ಮ | ಲ್ಗ | | ರ | | ನಾ | ಕ | | ಲ್ಗಿ |
| ಚ | ಗ | ರು | | ನ | ಕು | ಲ | | ಹ | ಠ | ಗೆ |
| | | ಮ | ಶಿ | | ಬ | | ಕೊಂ | ಬು | | |
| | | ಮು | | ಹಂ | ಕ | ರ | | ದಾ | | |
| ಇ | ರು | ಪೆ | | ಗ | | ನಿ | | ರ | ಸೀ | ದಿ |
| ನಾಂ | | | ಜ | ಪ | | ಕ | ರ | | | ಗಂ |
| ತಿ | ರು | ಪ | ತಿ | | | | ಸ | ನ್ನಿ | ಪಾ | ತ |

ಕೃಷ್ಣಸ್ವಾಮಿ ಅವರ ಹಾಸ್ಯಲೇಖನ 'ನಮ್ಮ ಮಕ್ಕಳು' ಮೆಚ್ಚುಗೆಯಾಯಿತು.

**— ವರಲಕ್ಷ್ಮಿ ಮುಕುಂದರಾವ್,**
**ಬೆಂಗಳೂರು**

ಏಪ್ರಿಲ್ 92 ರ 'ವನಿತಾ' ಸಂಭ್ರಮದ ಯುಗಾದಿ ಹಬ್ಬಕ್ಕೆ ಮೊದಲೇ ಕೈ ಸೇರಿತು. ನೃತ್ಯ ಕಲಾವಿದೆ ಕುಮಾರಿ ನಿರುಪಮಳ ಮುದ್ದಾದ ಮುಖಪುಟ. ಮೊದಲ ಪುಟದಲ್ಲಿಯೇ ಓದುಗರಿಗೆ ಯುಗಾದಿಯ ಶುಭಾಶಯಗಳು. ಶ್ರೀಮತಿ ಗಂಗಮ್ಮನವರು ರಚಿಸಿದ ಬೆಳ್ಳಿ ತೇರಿನ ಕೈಚಳಕ ಮೆಚ್ಚಬೇಕಾದುದು. ಯುಗಾದಿಯೊಡನೆ ಬರುವ ವಸಂತನಾಗಮನ, ಬೇವು ಬೆಲ್ಲದ ವೈಶಿಷ್ಟ್ಯ. ಕವಿಗಳು ಕಂಡ ಯುಗಾದಿ ಹಬ್ಬದ ಬಗ್ಗೆ ಸೋದರಿ ಅನಸೂಯರ ಬರಹ ಮನೋಜ್ಞ ಹಾಗೂ ಅರ್ಥಪೂರ್ಣ. ಮಿನಿಕತೆಗಳು ನಿಜವಾಗಿಯೂ ತೀರ ನಿರಾಶಾದಾಯಕವೇ. ಅಪರೂಪದ ಜೋಡಿ-ಶ್ರೀಶೈಲನ್-ಸರೋಜರ ಬಗ್ಗೆ ಓದಿ ಸಂತೋಷವಾಯ್ತು. ಈ ದಂಪತಿಗಳನ್ನು ಸಂದರ್ಶಿಸಿದವರು ಹೆಸರು ಹೇಳಿಕೊಳ್ಳಲು ನಾಚಿಕೊಂಡಿರುವುದೇಕೋ ಗೊತ್ತಾಗಲಿಲ್ಲ. ಕಡಲ ಕರೆಯ ಕಾರವಾರ ಜಿಲ್ಲೆಯ ಹೊನ್ನಾವರದ ಪ್ರಕೃತಿ ರಮ್ಯ ಸುಂದರವಾದ ವರ್ಣಚಿತ್ರಗಳು ಮನ ಸೆಳೆದವು. ಸುನೀತಿ ಕೃಷ್ಣಸ್ವಾಮಿಯವರ 'ನಮ್ಮ ಮಕ್ಕಳು" ಹಾಸ್ಯಲೇಖನ ಚೆನ್ನಾಗಿತ್ತು. ಅಪರೂಪದ ಅವಳಿಗಳಾದ 'ರೂಪಾ-ದೀಪಾ' ಇವರಿಗೆ ಒಳ್ಳೆಯ ಭವಿಷ್ಯವಿದೆ. ಅವರ ಸಚಿತ್ರ ಪರಿಚಯ ಮಾಡಿಕೊಟ್ಟ ಸೋದರಿ ವಿಜಯಾ-ಶ್ರೀಧರ್ ಇವರಿಗೆ ಕೃತಜ್ಞತೆಗಳು. ಒಂದೇ ಮಾತಿನಲ್ಲಿ ದಾಖಲಿಸಬೇಕೆಂದರೆ ಏಪ್ರಿಲ್ 'ವನಿತಾ' ಸುಂದರ ಉಗಾದಿ ಸಂಚಿಕೆಯೆನ್ನಬಹುದು.

**— ವಿ. ಯಸ್. ಮಂಜುಳಾ, ಶಿಡ್ಲಘಟ್ಟ**

ಏಪ್ರಿಲ್ ತಿಂಗಳ, ಚೈತ್ರದ ವನಿತಾ ರಮಣೀಯವಾಗಿ, "ಯುಗಾದಿ" ಗೆ ಮುಂಚೆಯೇ ನಮ್ಮ ಕೈಗೆ ತಲುಪಿತು. ನಿಮ್ಮ ಶುಭ ಹಾರೈಕೆಗೆ ನಮ್ಮ ನಮನ. ಮಿನಿಕಥೆಗಳಾದ-"ಗಾಸಿಪ್", 'ಬದಲಾಗುವ ಅರ್ಥಗಳು"-ಅದರಲ್ಲೂ "ಚಂಪಕ ಮಾಲಿನಿ" ಯವರ "ಮಗ". ಕಥೆ. ನಿಜ ಜೀವನಕ್ಕೆ ಬಹಳವೇ ಹತ್ತಿರವಾಗಿದ್ದು, ಜೀವನದುದ್ದಕ್ಕೂ, ಹರೆಯದಲ್ಲಿ, ಅತ್ತೆ ಮನೆಯಲ್ಲಿ, ತನ್ನ ಗಂಡ-ಹೆಂಡತಿ-ಹಾಗೂ ಮಕ್ಕಳೇ ಸರ್ವಸ್ವವೆಂದು ತಿಳಿದು ಸಾಕಿ ಸಲುಹಿದ ತಂದೆ-ತಾಯಿಗಳು ಇಳಿವಯಸ್ಸಿನಲ್ಲಿ ಕಣ್ಣೀರು ಸುರಿಸುವಂತೆ, ಮಕ್ಕಳ ಅಟ್ಟಹಾಸಕ್ಕೆ ಸಿಲುಕಿ ಕೊರಗುವುದು ಈಗ ಬಹಳಷ್ಟು ಮನೆಗಳಲ್ಲಿ ನಿತ್ಯ ನೋಟವಾಗಿದೆ. ಮುಂದಿನ ಯುವ ಪೀಳಿಗೆಯವರು ಕಣ್ಣು ತೆರೆಯುವಂತೆ ಕತೆಗಳನ್ನು ಪ್ರಕಟಿಸಿರುವುದು ನಮಗೆ ಸಂತೋಷವನ್ನು ತಂದಿದೆ.

**— ಜಿ. ಕೆ. ಶ್ರೀಮತಿ, ಬೆಂಗಳೂರು**

ಅನೇಕ ಕಂತುಗಳಲ್ಲಿ "ವನಿತಾ"ದಲ್ಲಿ ಪ್ರಕಟವಾದ ಗಂಗಾ ಪಾದೇಕಲ್ ರವರ "ಧಾರಾವಾಹಿ" 'ಇನ್ನೊಂದು ಅಧ್ಯಾಯ"ವು ಅತ್ಯಂತ ವಸ್ತುನಿಷ್ಠವಾಗಿದ್ದು. ಅವ್ಯಾಹತವಾಗಿ ಅತ್ಯಂತ ತಾಳ್ಮೆಯಿಂದ ಸಹಿಸಿಕೊಂಡು ಬಂದ ಶೋಷಣೆಯ ವಿರುದ್ಧ ಕೊನೆಗೂ ಗಟ್ಟಿಗೊಂಡ ಅಂತಿಮ ತೀರ್ಮಾನ ಮೆಚ್ಚುಗೆಯಾಯಿತು. ವಸುಧಾಳ ನೊಂದ ಬಾಳಿಗೆ ಹೊಸ "ತಿರುವು" ನೀಡಿದ ಗಿರೀಶ ಇನ್ನೊಂದು ಹೊಸ ಅಧ್ಯಾಯದ ನಾಂದಿಗೆ ಕಾರಣನಾಗುತ್ತಾನೆ. 2 ವಿಭಿನ್ನ ಮುಖದ ಪುರುಷ ಪಾತ್ರಗಳನ್ನು ಲೇಖಕಿ ಸೊಗಸಾಗಿ ಮೂಡಿಸಿದ್ದಾರೆ. ವಸುಧಾಳ "ದಿಟ್ಟ ನಿಲುವು" ನಿಜವಾಗಿಯೂ ಸ್ವಾಗತಾರ್ಹವಾದುದು. ಈ ರೀತಿಯ ಉತ್ತಮ ಧಾರಾವಾಹಿಗಳು ಹೆಚ್ಚು ಸಂಖ್ಯೆಯಲ್ಲಿ ಪ್ರಕಟವಾಗಲಿ.

**—ಮಹಾಲಕ್ಷ್ಮಿ ಎಸ್. ರಾವ್,**
**ಬೆಂಗಳೂರು**

ಮಾರ್ಚ್ ತಿಂಗಳಿನ ವನಿತಾದಲ್ಲಿ ಪ್ರಕಟವಾದ ಕಾವ್ಯ ಕೌಶಿಕ್ ರವರ ಲೇಖನ 'ಉದ್ಯೋಗ ಸ್ತ್ರೀಗೆ ವರವೇ ಶಾಪವೇ' ಚಿಂತನಾರ್ಹ. ಇಂದಿನ ಪರಿಸ್ಥಿತಿಗನುಗುಣವಾಗಿ ನೋಡಿದರೆ ಮಹಿಳೆಗೆ ಉದ್ಯೋಗ ಒಂದು ವರವೇ ಸರಿ. ಆದರೆ ಅವಳಿಗೆ ಇದು ವರ ಅಥವಾ ಶಾಪವಾಗಿ ಪರಿಣಮಿಸುವುದು ಈ ಸಮಾಜ ಹಾಗೂ ಅವಳ ಕುಟುಂಬದ ಪರಿಸರವನ್ನು ಅವಲಂಬಿಸಿದೆಯೆಂದು ಹೇಳಬೇಕಾಗುತ್ತದೆ.

**— ಪ್ರೇಮಲತಾ ವಿಜಯನಾಥ್,**
**ಬೆಂಗಳೂರು**

* * *



## ಕಿರು ತೆರೆಯ ಬಾನು

ಅತ್ಯಂತ ಹೆಚ್ಚಿನ ಸಂಖ್ಯೆಯಲ್ಲಿ ಅಭಿಮಾನಿಗಳನ್ನು ಪಡೆದಿರುವ ಕನ್ನಡದ ವಾರ್ತೆಗಳನ್ನು ಕಿರು ತೆರೆಯ ಮೇಲೆ ಬಿತ್ತರಿಸುವ ಮೊಟ್ಟ ಮೊದಲ ಮುಸ್ಲಿಂ ಮಹಿಳೆ ಸಬೀಹಾ ಬಾನು. ಈಗಾಗಲೇ ಹಲವಾರು ವರುಷಗಳಿಂದ ಕರ್ನಾಟಕದ ಮೂಲೆ- ಮೂಲೆಗಳಿಗೂ ತಮ್ಮ ಸುಕೋಮಲ ಶಾರೀರದಿಂದ ಕನ್ನಡ ಭಾಷೆಯಲ್ಲಿ ಬಾನುಲಿಯ ಮೂಲಕ ಜನಮನವನ್ನು ತಲುಪಿದ ಕೀರ್ತಿ ಇವರದು.

"ಬೆಳೆಯುವ ಪೈರು-ಮೊಳಕೆಯಲ್ಲೇ" ಎಂಬಂತೆ ಶಾಲಾ ದಿನಗಳಲ್ಲೇ ಪುಟ್ಟ ಬಾನು ಕನ್ನಡದ ದಿನ ಪತ್ರಿಕೆಯ ಸಾರಾಂಶವನ್ನು ಓದಲು ಪಡೆದಿದ್ದ ಅರ್ಹತೆ ಪ್ರಾಯಶಃ ಮುಂದೊಂದು ದಿನ ಬೆಂಗಳೂರು ದೂರದರ್ಶನದ ವಾರ್ತೆಯನ್ನು ಸ್ಪಷ್ಟವಾಗಿ ಉದ್ವೇಗವಿಲ್ಲದೆ, ಮೋಹಕ ನಗುವಿನೊಂದಿಗೆ ಓದಬಲ್ಲ ಶ್ರೀಮತಿ ಸಬೀಹಾ ಬಾನು ಆಗಬಲ್ಲರೆಂಬ ಕಲ್ಪನೆ ಯಾರಿಗೂ ಇದ್ದಿರಲಾರದು.

ಅನೇಕ ಪ್ರಥಮಗಳ ಒಡತಿ ಸಬೀಹಾ ಬಾನು, ಪ್ರಸ್ತುತ ಬೆಂಗಳೂರಿನ ಅಕೌಂಟೆಂಟ್ ಜನರಲ್ ಕಚೇರಿಯಲ್ಲಿ ಮಹಿಳಾ ಅಧಿಕಾರಿಣಿ. ಚಿಕ್ಕ ವಯಸ್ಸಿನಲ್ಲೇ ಮಹಿಳಾ ಅಧಿಕಾರಿಯಾದ ಮೊಟ್ಟಮೊದಲ ಮುಸ್ಲಿಂ ಮಹಿಳೆ—ಸರಳ ಮಾತಿನ ಸ್ನೇಹಮಯಿ. ಖ್ಯಾತಿಯ ಉನ್ನತ ಶಿಖರದಲ್ಲಿದ್ದರೂ ಯಾವ ಹಮ್ಮೂ ತೋರದ ಹೂನಗೆ ಸೂಸುವ ಮಿತಭಾಷಿ. ತಮ್ಮ ವ್ಯಕ್ತಿತ್ವವನ್ನು ರೂಪಿಸಿಕೊಳ್ಳಲು ರೂವಾರಿಯಾದ ತಂದೆ-ತಾಯಿಯವರನ್ನು ಕೃತಜ್ಞತಾಪೂರ್ವಕವಾಗಿ ನೆನಸಿಕೊಳ್ಳುತ್ತಾರೆ.

ಮಾತೃಭಾಷೆ ಉರ್ದುವಾದರೂ ಕನ್ನಡದಲ್ಲಿ ವಾರ್ತೆಗಳನ್ನು ಓದಲು ತಮಗೆ ಸಹಾಯವಾದ ಮೈಸೂರಿನ ಹಿನ್ನೆಲೆಯನ್ನು ಹೇಳುತ್ತಾರೆ. ತಾವು ಓದಿದ ಶಾಲಾ ಕಾಲೇಜಿನ ಹಿನ್ನಲೆ ತಿಳಿಸುತ್ತಾರೆ.

ಚಿಕ್ಕಂದಿನಿಂದಲೂ ಕ್ರೀಡೆಗಳಲ್ಲಿ ಭಾಗವಹಿಸುತ್ತಿದ್ದ ಇವರ ಮುಖ್ಯ ಹವ್ಯಾಸಗಳಲ್ಲಿ ಓದುವುದು ಮತ್ತು ತೋಟಗಾರಿಕೆಯೂ ಸೇರಿಸಿದೆ. ಉದ್ಯೋಗಸ್ಥ ಮಹಿಳೆಯಾಗಿ ಕಚೇರಿಯಲ್ಲೂ, ದೂರದರ್ಶನ ಕಾರ್ಯಾಲಯದಲ್ಲೂ ಹಾಗೂ ತಮ್ಮ ಪುಟ್ಟ ಕೈ ಕೂಸು ಡ್ಯಾನಿಷ್‌ನನ್ನು ಒಳಗೊಂಡ ಸಂಸಾರದಲ್ಲಿ ಸಮಯವನ್ನು ಚತುರತೆಯಿಂದ ಹೊಂದಿಸಿಕೊಳ್ಳಬೇಕಾದಾಗ ಒದಗುವ ಸಮಸ್ಯೆಗಳ ಬಗ್ಗೆ ಕೇಳಿದಾಗ, ಅವರು ಪತಿಯ ಸಹಕಾರವನ್ನು ತುಂಬು ಹೃದಯದಿಂದ ನೆನಸಿಕೊಳ್ಳುತ್ತಾರೆ. ಸ್ವತಃ ಉನ್ನತ ಶ್ರೇಣಿಯ ಕ್ರೀಡಾಪಟುವಾದ ಸಬೀಹಾರವರ ಪತಿ, ಪತ್ನಿಯ ಕಾರ್ಯಕ್ಷೇತ್ರಗಳಲ್ಲಿ ದಕ್ಷತೆ, ಪರಿಪೂರ್ಣತೆಯನ್ನು ತೋರಲು ಸಹಕರಿಸುತ್ತಿದ್ದಾರೆ.

ಸಬೀಹಾ ಬಾನುರವರು ಇಂದಿನ ಉದ್ಯೋಗಸ್ಥ ಮಹಿಳೆಯರಿಗೆ ಆದರ್ಶಪ್ರಾಯವಾಗಿದ್ದಾರೆ. ನಿರಂತರವಾಗಿ ಹಲವಾರು ವರುಷಗಳಿಂದ "ವಾರ್ತೆಗಳಿಗೆ", "ವಿಧಾನ ಸಭೆಯ ಕಾರ್ಯಕಲಾಪ"ಗಳಿಗೆ ಹಾಗೂ "ಚುನಾವಣೆಯ ಸುದ್ದಿ"ಗಳಿಗೆ ಜೀವ ತುಂಬುತ್ತಿರುವ ಈಕೆಗೆ ಹೆಚ್ಚಿನ ಯಶಸ್ಸನ್ನು ಕೋರೋಣ.

**—ಬಿ. ಆರ್. ಸುನಂದ**


**ವನಿತಾ**

**ಮಹಿಳೆಯರ ಮಾಸಪತ್ರಿಕೆ**

**ಸಂಪುಟ : 15 ಸಂಚಿಕೆ : 8**

**ಮೇ 1992**

**ಬಿಡಿ ಪ್ರತಿ : 6-00 ರೂಪಾಯಿ**

**ವಾರ್ಷಿಕ ಚಂದಾ : 72/- ರೂ.**

ವಿಳಾಸ:

**ಡಾಲ್ಟನ್ ಪಬ್ಲಿಕೇಷನ್ಸ್,**
**ಚಂದಮಾಮಾ ಬಿಲ್ಡಿಂಗ್ಸ್,**
**ಮದರಾಸು - 26**

ಬೆಂಗಳೂರು ಕಚೇರಿ ವಿಳಾಸ:

"ವನಿತಾ"
ಕಮಾಂಡರ್ಸ್ ಪ್ಲೇಸ್ (ಮಹಡಿ)
ರಾಜಾರಾಮ್ ಮೋಹನ್ ರಾಯ್ ರಸ್ತೆ,
ಬೆಂಗಳೂರು-560 025
ಫೋನ್ : 220912

# ಪ್ರಪಂಚ ಪ್ರದಕ್ಷಿಣೆ

## ಜನಾಂಗ ಭೇದ ಅಂತ್ಯಕ್ಕೆ ನಾಂದಿ

### ದಕ್ಷಿಣ ಆಫ್ರಿಕದಲ್ಲಿ......

ಶತಮಾನಗಳಿಂದ ಅಲ್ಪ ಸಂಖ್ಯಾತ ಬಿಳಿಯರು ದಕ್ಷಿಣ ಆಫ್ರಿಕದಲ್ಲಿ ಬಹುಸಂಖ್ಯಾತ ಕರಿಯರ ಮೇಲೆ ನಡೆಸುತ್ತಿರುವ ದಬ್ಬಾಳಿಕೆ, ವರ್ಣ ದ್ವೇಷ, ಜನಾಂಗ ಭೇದ ಮುಂತಾದ ಪಿಡುಗುಗಳ ಅಂತ್ಯ ಸನ್ನಿಹಿತವಾಗುತ್ತಿದೆ. ಕರಿಯರ ಮೇಲಿನ ದಬ್ಬಾಳಿಕೆ ವಿರುದ್ಧ ಹೋರಾಟ ನಡೆಸಿದ ಆಫ್ರಿಕನ್ ನ್ಯಾಷನಲ್ ಕಾಂಗ್ರೆಸ್‌ನ ನಾಯಕ ನೆಲ್ಸನ್ ಮಂಡೇಲಾ 25 ವರ್ಷಗಳ ಕಾರಾಗೃಹವಾಸದ ನಂತರ ಕಳೆದ ವರ್ಷ ಬಿಡುಗಡೆಯಾದಾಗ ಇಡೀ ನಾಗರಿಕ ಜಗತ್ತು ನೆಮ್ಮದಿಯ ನಿಟ್ಟುಸಿರು ಬಿಟ್ಟಿತು. ರಾಕ್ಷಸನೆಂದು ಹೆಸರು ಪಡೆದಿದ್ದ ಮಾಜಿ ಅಧ್ಯಕ್ಷ ಬೋಥಾ ನಂತರ ಅಧಿಕಾರಕ್ಕೆ ಬಂದ ಎಫ್. ಡಬ್ಲ್ಯು. ಡಿಕ್ಲರ್ಕ್ ಅವರ ಮುತ್ಸದ್ದಿತನ ದಿಂದಾಗಿ ಈ ಬೆಳವಣಿಗೆ ಸಾಧ್ಯವಾಯಿತು. ಕರಿಯರ ಮೇಲಿನ ಅನೇಕ ನಿಷೇಧಗಳನ್ನು ಅವರು ಒಂದೊಂದಾಗಿ ತೆಗೆದು ಹಾಕುತ್ತಾ ಬಂದಾಗ ಅಲ್ಪ ಸಂಖ್ಯಾತ ಬಿಳಿಯರ ಕೋಪ ಭುಗಿಲೆದ್ದಿತು. ಅಧ್ಯಕ್ಷರ ಮೇಲೆ ನಾನಾ ಬಗೆಯ ಒತ್ತಡಗಳನ್ನು ತರಲಾಯಿತು. ಇದಾವುದಕ್ಕೂ ಸೊಪ್ಪು ಹಾಕದ ಡಿಕ್ಲರ್ಕ್ ಕೊನೆಯದಾಗಿ ಒಂದು ಬಾಣ ಎಸೆದರು. ತಾವು ಆಚರಣೆಗೆ ತರುತ್ತಿರುವ ಸುಧಾರಣೆಗಳನ್ನು ಮುಂದುವರಿಸಬೇಕೇ ಬೇಡವೆ ಎಂಬ ಒಂದು ಅಂಶದ ಮೇಲೆ ಅವರು ಜನಮತ ಸಂಗ್ರಹಣೆಗೆ ಅಜ್ಞೆ ಮಾಡಿದರು. ಮಾರ್ಚ್ ಮೂರನೆಯ ವಾರದಲ್ಲಿ ನಡೆದ ಜನಮತ ಸಂಗ್ರಹಣೆಯಲ್ಲಿ ಕ್ಲರ್ಕ್ ಅವರ ಸುಧಾರಣೆಗಳ ಪರವಾಗಿ ನಿರೀಕ್ಷೆಗಿಂತ ಹೆಚ್ಚು . ಮತಗಳು ದೊರೆತವು. ವಿಚಿತ್ರವೆಂದರೆ ಸುಧಾರಣಾ ವಿರೋಧಿ ಗಳಾದ ಬೋಥಾ ಮತ್ತಿತರ ನಾಯಕರ ಕ್ಷೇತ್ರ ಗಳಲ್ಲೇ ಅತ್ಯಧಿಕ ಸಂಖ್ಯೆಯಲ್ಲಿ ಬಿಳಿಯರೇ ಸುಧಾರಣೆಗಳಿಗೆ ಅನುಮತಿ ನೀಡಿರುವುದು ಒಂದು ಐತಿಹಾಸಿಕ ನಿರ್ಣಯ. ಈ ಜನಮತ 'ಡಿಕ್ಲರ್ಕ್' ಅವರ ಕೈಗಳನ್ನು ಮತ್ತಷ್ಟು ಬಲಪಡಿಸಿವೆ. ಶತಮಾನಗಳಿಂದ ನಡೆದುಕೊಂಡು ಬಂದ ಹೇಯ ನೀತಿಯನ್ನು ಅಂತ್ಯಗೊಳಿಸಲು ಬಿಳಿಯರೂ ಮುಂದಾಗಿರುವುದು ಸ್ವಾಗತಾರ್ಹ.

ಸುಮಾರು ಮೂರು ಕೋಟಿಗಳಷ್ಟಿರುವ ಕರಿಯರ ಆಶೋತ್ತರಗಳು ನನಸಾಗಲು, ಅವರಿಗೆ ಸಮಾನ ರಾಜಕೀಯ ಹಕ್ಕುಗಳನ್ನು ವಿಸ್ತರಿಸಲು ಸಹಾಯಕವಾಗುವಂತೆ ಹೊಸ ಸಂವಿಧಾನ ರಚನೆಗೆ ಹಾದಿ ಸುಗಮವಾಗಿದೆ. ಈ ಬೆಳವಣಿಗೆಗಳನ್ನು ಇಡೀ ಪ್ರಪಂಚ ಬಿಚ್ಚುಮನಸ್ಸಿನಿಂದ ಸ್ವಾಗತಿ ಸುತ್ತದೆ.

### ಲಿಬಿಯಾದಲ್ಲಿ

ಇರಾಕ್‌ನ ನಂತರ ಈಗ ಲಿಬಿಯಾಗೆ ಪಾಠ ಕಲಿಸಲು ಅಮೆರಿಕ ಮುಂದಾಗಿದೆ. ಆದರೆ ಲಿಬಿಯಾ ಇರಾಕ್ ಅಲ್ಲ ಎಂಬುದನ್ನು ಪಾಶ್ಚಾತ್ಯ ರಾಷ್ಟ್ರಗಳು ನೆನಪಿನಲ್ಲಿಡಬೇಕು.

ತೋಳ ಕುರಿಮರಿಯ ಕಥೆಯಂತೆ ಅದಕ್ಕೆ ನೆಪವೊಂದನ್ನು ಅಮೆರಿಕ ಮುಂದಿಟ್ಟಿದೆ. ನಾಲ್ಕು ವರ್ಷಗಳ ಹಿಂದೆ ಅಮೆರಿಕದ ಒಂದು ವಿಮಾನದಲ್ಲಿ ಬಾಂಬ್ ಇಟ್ಟು ಸ್ಫೋಟಿಸಿದ ಆಪಾದನೆಗೆ ಗುರಿ ಯಾಗಿರುವ ಇಬ್ಬರು ಲಿಬಿಯಾದ ಪ್ರಜೆಗಳನ್ನು ತನಗೊಪ್ಪಿಸಬೇಕೆಂಬ ಅಮೆರಿಕದ ಕೋರಿಕೆಯನ್ನು ನಿರಾಕರಿಸಿರುವುದರಿಂದ ಲಿಬಿಯಾ ಮೇಲೆ ಆರ್ಥಿಕ ದಿಗ್ಬಂಧನ ವಿಧಿಸಲು ವಿಶ್ವಸಂಸ್ಥೆಯಲ್ಲಿ ಅಮೆರಿಕ ತನ್ನ ಪ್ರಯತ್ನಗಳನ್ನು ಮಾಡಿತು. ಅಂತೆಯೇ ವಿಶ್ವಸಂಸ್ಥೆಯ ಭದ್ರತಾ ಮಂಡಳಿ ಲಿಬಿಯಾ ವಿರುದ್ಧ ವ್ಯಾಪಾರ ಮತ್ತು ಶಸ್ತ್ರಾಸ್ತ್ರಗಳ ದಿಗ್ಬಂಧ ವಿಧಿಸುವ ನಿರ್ಣಯವನ್ನು ಅನುಮೋದಿ ಸುವಲ್ಲಿ ಅಮೆರಿಕ ಸಫಲವಾಗಿದೆ. ಭಾರತ, ಚೀನಾ, ಜಿಂಬಾಬ್ವೆ ಮತ್ತು ಮೊರಾಕ್ಕೊ ಈ ನಿರ್ಣಯದ ಮತದಾನದಲ್ಲಿ ಭಾಗವಹಿಸಲಿಲ್ಲ. ಇಷ್ಟಕ್ಕೇ ತಾನು ಗೆದ್ದೆನೆಂದು ಅಮೆರಿಕ ಜಂಬ ಕೊಚ್ಚಿಕೊಳ್ಳುವುದರಲ್ಲಿ ಪ್ರಯೋಜನವಿಲ್ಲ. ಇರಾಕ್ ಮೇಲೆ ದಿಗ್ಬಂಧನ ವಿಧಿಸಿದಾಗ ಅದಕ್ಕೆ ಹಲವು ಅರಬ್ ರಾಷ್ಟ್ರಗಳೂ ಸೇರಿದಂತೆ ಅನೇಕ ರಾಷ್ಟ್ರ ಗಳ ಬೆಂಬಲವಿತ್ತು. ಅರಬ್ ಲೀಗ್‌ನ 22 ರಾಷ್ಟ್ರಗಳು ಈ ಕ್ರಮವನ್ನು ವಿರೋಧಿಸಿವೆ. ಎಲ್ಲಕ್ಕಿಂತ ಹೆಚ್ಚಾಗಿ ಅಮೆರಿಕದ ಆಪ್ತ ಹಾಗೂ ಅಚ್ಚುಮೆಚ್ಚಿನ ಈಜಿಪ್ಟ್ ಈ ಕ್ರಮಕ್ಕೆ ವಿರೋಧ ವ್ಯಕ್ತಪಡಿಸಿರುವುದು. ಲಿಬಿಯದ ವಿರುದ್ಧ ಅಮೆರಿಕದ ಆಕ್ರೋಶಕ್ಕೆ ಕಾರಣ ಲಿಬಿಯದ ಅಧ್ಯಕ್ಷ ಗಡಾಫಿ ಅಮೆರಿಕದ ತಾಳಕ್ಕೆ ತಕ್ಕಂತೆ ಕುಣಿಯಲು ಒಪ್ಪದಿರುವುದು. ಈ ವೈಮನಸ್ಯ ಒಂದು ದಶಕಕ್ಕೂ ಹಳೆಯದು. ಹೀಗಾಗಿ ಅಧ್ಯಕ್ಷ ಗಡಾಫಿಯವರಿಗೆ ಪಾಠ ಕಲಿಸಲು ಅಮೆರಿಕ ಹೊಂಚು ಹಾಕಿಕೊಂಡಿತ್ತು. ಈಗ ವಿಶ್ವ ಸಂಸ್ಥೆಯ ಮೂಲಕ ಆರ್ಥಿಕ ಹಾಗೂ ಶಸ್ತ್ರಾಸ್ತ್ರ ದಿಗ್ಬಂಧನ ವಿಧಿಸುವಲ್ಲಿ ಅಮೆರಿಕ ಸಫಲವಾಗಿದೆ ಯಾದರೂ ಅದು ಜಾರಿಗೆ ಬರುವುದು ಸಂದೇ ಹಾಸ್ಪದವಾಗಿದೆ. ಏನೇ ಆಗಲಿ, ಲಿಬಿಯಾ ಇರಾಕ್ ಅಲ್ಲ ಎಂಬುದನ್ನು ಅಮೆರಿಕ ಹಾಗೂ ಅದರ ಮಿತ್ರ ರಾಷ್ಟ್ರಗಳು ನೆನಪಿಡಬೇಕು.

### ರಷ್ಯದಲ್ಲಿ...

ತಮ್ಮ ಸ್ಥಾನವನ್ನು ಬಲಪಡಿಸಿಕೊಳ್ಳುವ ಪ್ರಯತ್ನದಲ್ಲಿ ಹಿಂದಿನ ಸೋವಿಯತ್ ಒಕ್ಕೂಟ ವನ್ನು ವಿಸರ್ಜಿಸುವಲ್ಲಿ ಅತ್ಯಾಸಕ್ತಿ ತಳೆದಿದ್ದ ರಷ್ಯದ ನಾಯಕ ಬೋರಿಸ್ ಎಲ್ಸಿನ್ ಈಗ ತಾನು ಹಾಕಿದ ಗಾಳದಲ್ಲಿ ತಾನೇ ಸಿಕ್ಕುಬಿದ್ದಿದ್ದಾರೆ. ಹಿಂದಿನ ಗಣ ರಾಜ್ಯಗಳ ರಾಷ್ಟ್ರಕೂಟವನ್ನು ಹೆಸರಿ ಗಾದರೂ ಉಳಿಸಿಕೊಳ್ಳಲು ಎಲ್ಸಿನ್ ಹೆಣಗಾಡು ತ್ತಿದ್ದಾರೆ. ಎಷ್ಟೇ ದುರ್ಬಲ ಸ್ವರೂಪದಲ್ಲಿಯಾದರೂ ಸೋವಿಯತ್ ಒಕ್ಕೂಟವನ್ನು ಉಳಿಸಿಕೊಳ್ಳಲು ಮಿಖಾಯಿಲ್ ಗೋರ್ಬಚೆವ್ ಬಯಸಿದ್ದರು. ಈಗ ರಷ್ಯದ ಗಣರಾಜ್ಯಗಳು ಎದುರಿಸುತ್ತಿರುವ ಆರ್ಥಿಕ ಸಂಕಷ್ಟದ ಇದಿರಿನಲ್ಲಿ ಅವು ಒಂದು ರಾಷ್ಟ್ರಕೂಟವಾಗಿ ಸಹ ಉಳಿಯುವುದು ಕಷ್ಟಕರ ವಾಗಿದೆ. ಜತೆಗೆ ಅಣ್ವಸ್ತ್ರಗಳು, ಯುದ್ಧನೌಕೆಗಳು, ನಾಣ್ಯ ಚಲಾವಣೆ ಮುಂತಾದ ವಿಷಯಗಳಲ್ಲಿ ಒಮ್ಮತದ ಅಭಿಪ್ರಾಯಕ್ಕೆ ಬರುವಲ್ಲಿ ಈ ಗಣ-ರಾಜ್ಯಗಳು ವಿಫಲವಾಗಿವೆ. ಒಂದೊಂದಾಗಿ ಗಣ ರಾಜ್ಯಗಳು ಈ ರಾಷ್ಟ್ರಕೂಟದಿಂದ ಸ್ವತಂತ್ರವಾಗಲು ಇಚ್ಛೆಯನ್ನು ವ್ಯಕ್ತಪಡಿಸಿವೆ. ಟಾಟರ್ಸ್ತಾನ್ ನಲ್ಲಿ ಇತ್ತೀಚೆಗೆ ನಡೆದ ಜನ ಮತ ಸಂಗ್ರಹದಲ್ಲಿ ಅದು ಸ್ವತಂತ್ರ ರಾಷ್ಟ್ರವಾಗುವುದಕ್ಕೆ ಬಹುಮತ ವ್ಯಕ್ತವಾಗಿದೆ. ಹೀಗೆ ಒಂದೊಂದೇ ಕೊಂಡಿಗಳು ಕಳಚಿ ಬೀಳುವ ಸಂಭವ ಹೆಚ್ಚಾಗಿ ಕಾಣುತ್ತಿದೆ. ಅಣ್ವಸ್ತ್ರಗಳ ನಾಶಕ್ಕೆ ಎಲ್ಸಿನ್ ಕರೆ ನೀಡಿರುವ ರಾದರೂ ಉಕ್ರೇನ್ ಅವುಗಳನ್ನು ತನ್ನ ನೆಲದಿಂದ ಹೊರಕ್ಕೆ ವರ್ಗಾಯಿಸಲು ಒಪ್ಪುತ್ತಿಲ್ಲ. ಇವುಗಳನ್ನು ನಾಶಪಡಿಸ ಬೇಕಾದರೆ ರಷ್ಯಕ್ಕೆ ವರ್ಗಾಯಿಸಿ ಅಲ್ಲಿ ನಾಶಪಡಿಸಬೇಕು. ಜತೆಗೆ ಇಡೀ ರಾಷ್ಟ್ರಕೂಟಕ್ಕೆ ಸರ್ವಸಮ್ಮತವಾದ ನಾಯಕರಿಲ್ಲ. ಆದರೆ ಈ ಕೂಟದ ಅತಿ ದೊಡ್ಡ ಹಾಗೂ ಪ್ರಬಲವಾದ ರಾಷ್ಟ್ರ ರಷ್ಯಾ. ಅದರ ರಾಷ್ಟ್ರಪತಿ ಆಗಿರುವ ಎಲ್ಸಿನ್ ಕೂಟದ ನಾಯಕರೂ ಆಗಿದ್ದಾರೆ. ಆದ್ದ ರಿಂದಲೇ ರಾಷ್ಟ್ರಕೂಟದಲ್ಲಿನ ಇತ್ತೀಚಿನ ಬೆಳವಣಿಗೆ ಗಳು ಎಲ್ಸಿನ್ ಅವರಿಗೆ ಸವಾಲಾಗಿವೆ. ಸೋವಿ ಯತ್ ನಾಡಿನ ಭವಿಷ್ಯ ಈಗ ರಾಷ್ಟ್ರಕೂಟಗಳ ಒಗ್ಗಟ್ಟಿನಲ್ಲಿದೆ ಎಂಬುದನ್ನು ಎಲ್ಸಿನ್ ಅರಿತಿದ್ದಾರೆ. ಎಂತಲೇ ಈ ವಿಚ್ಛಿದ್ರಕಾರೀ ಬೆಳವಣಿಗೆಗಳು ಅವರಿಗೆ ತೀವ್ರ ಆತಂಕ ಉಂಟುಮಾಡಿದೆ. **




# ಸೌಮ್ಯ ಪೋಷಣೆ.

**4 ತಿಂಗಳ ನಿಮ್ಮ ಮಗುವಿನ ಸಹಜ ಆಹಾರವನ್ನು , ಸುಲಭವಾಗಿ ಜೀರ್ಣವಾಗುವ ಪೌಷ್ಟಿಕ ಸತ್ತ್ವಗಳನ್ನು ಒಳಗೊಂಡ ನೆಸ್ಟಮ್ ನಿಂದ ಸಮೃದ್ಧಗೊಳಿಸಿ.**

ನೆಸ್ಟಮ್, ಹಾಲಿನಿಂದ ತಯಾರಿಸಲಾಗಿದ್ದು , ನಿಮ್ಮಮಗುವಿನ ಮೊದಲ ಘನ ಆಹಾರವಾಗಲು ತೀರ ಯೋಗ್ಯವಾಗಿದೆ. ಇದು, ಪೌಷ್ಟಿಕ ಸತ್ತ್ವಗಳಿಂದ ಸಮೃದ್ಧವಾದ, ಸಮತೂಲಿತ ಆಹಾರವಾಗಿದೆ. ನೀವು ನಿಮ್ಮ ಮಗುವಿಗೆ ಕೊಡುವ ಯಾವುದೇ ಆಹಾರದಲ್ಲಾಗಲಿ ಬೇಯಿಸಿದ ಹಣ್ಣು, ಬೇಯಿಸಿ-ಜಜ್ಜಿದ ತರಕಾರಿಗಳು, ತೊವ್ವೆಯಲ್ಲಿ-ನಸ್ಟಮ್ ಅನ್ನು ಸೇರಿಸಬಹುದಾಗಿದೆ.

ನೆಸ್ಟಮ್-ಅನ್ನು ,-ಅಕ್ಕಿಯಿಂದ ತಯಾರಿಸಲಾಗಿದ್ದು , ಸುಲಭವಾಗಿ ಜೀರ್ಣವಾಗುತ್ತದೆ. ಆದ್ದರಿಂದ, ಇದು ನಿಮ್ಮ ಮಗುವಿನ ಪೋಷಣೆಗೆ ತಕ್ಕುದಾದ ಧಾನ್ಯಾಹಾರವಾಗಿದೆ. ನೆಸ್ಟಮ್, ಡಾಕ್ಟರ್‌ರು ನಿಮ್ಮ ಮಗುವಿಗಾಗಿ ಶಿಫಾರಸುಮಾಡುವ ಹಲವು ಪೌಷ್ಟಿಕ ಸ್ತ್ವತಗಳನ್ನು-ಗಟ್ಟಿಯಾದ ಹಲ್ಲು ಮತ್ತು ಎಲುಬಿಗಾಗಿ-ಕ್ಯಾಲ್ಶಿಯಂ, ಆರೋಗ್ಯವಾದ ರಕ್ತಕ್ಕಾಗಿ ಕಬ್ಬಿಣಾಂಶ, ಚರ್ಮದ ಕಾಂತಿಗಾಗಿ,ಹೊಳೆಯುವ ಕಣ್ಣುಗಳಿಗಾಗಿ ವಿಟಮಿನ್‌ಗಳು ಮತ್ತು ರೋಗ ನಿರೋಧಕ ಗುಣಗಳನ್ನು ಹೊಂದಿದೆ.

ನಿಮ್ಮ , ಮಗು ನೆಸ್ಟಮ್-ನ ಜೊತೆ ಹೇಗೆ ಬೆಳೆಯುತ್ತದೆಯೊ ನೋಡಿ.

Nestlé

ಮಗುವಿನ ಸುಲಭವಾಗಿ ಜೀರ್ಣವಾಗುವ ಧಾನ್ಯಾಹಾ

## ನೆಸ್ಟಮ್

**ಮುಖ್ಯಸೂಚನೆ: ಎದೆ ಹಾಲು ನಿಮ್ಮ ಮಗುವಿಗೆ ಅತ್ಯುತ್ತಮ. 4 ಮಾಸ ತುಂಬಿದಾಗ, ತಾಯಿ ಹಾಲಿನ ಜೊತೆಗೆ ಧಾನ್ಯಾಹಾರವನ್ನು ಕೊಡಿ.**

ಬಸವ ಜಯಂತಿ ಪ್ರಯುಕ್ತ (ಮೇ ೫)

— ಅನಸೂಯ

# ಸ್ತ್ರೀ ಸ್ವಾತಂತ್ರ್ಯದ ಪ್ರತೀಕ ಅಣ್ಣ ಬಸವಣ್ಣ



12 ನೇ ಶತಮಾನದ ಕಾಲ. ಮನುಸಂಹಿತೆಯನ್ನು ಚಾಚೂ ತಪ್ಪದಂತೆ ಪಾಲಿಸಿಕೊಂಡು ಬರುತ್ತಿದ್ದ ದಿನಗಳವು. ಮೇಲು-ಕೀಳೆಂಬ ಭಾವನೆ ಇಡೀ ಮನುಕುಲವನ್ನೇ ದಹಿಸುತ್ತಿತ್ತು. ಹೆಣ್ಣಿನ ಮೇಲೆ ಪುರುಷ ಪ್ರಧಾನ ಸಮಾಜದ ಸವಾರಿ ಅಬಾಧಿತವಾಗಿ ಮುನ್ನಡೆದಿತ್ತು. ನಾಲ್ಕು ಗೋಡೆಗಳ ಮಧ್ಯದ ಸ್ಥಳವೇ ಹೆಣ್ಣಿನ ಜಗತ್ತಾಗಿತ್ತು. ಅವಳು ಮಾನವೀಯತೆಯಿಂದ ಸಂಪೂರ್ಣವಾಗಿ ವಂಚಿತಳಾಗಿದ್ದಳು. ಗಂಡಸಿನ ದೃಷ್ಟಿಯಲ್ಲಿ ಅವಳು ಪಶುವಿನ ಸಮಾನಳಾಗಿದ್ದಳು. ಗಂಡಿನಾಶೆಯನ್ನು ಪೂರೈಸುವ ಕಾಮದ ಬೊಂಬೆಯಾಗಿದ್ದಳು. ಮನು ಮಹಾಶಯನ ಶಾಪದಿಂದ ಅವಳು ಕಲ್ಲಾಗಿ ಹೋಗಿದ್ದಳು. ತನ್ನನ್ನು ಉದ್ಧರಿಸುವ ರಾಮನ ಪ್ರತೀಕ್ಷೆಯಲ್ಲಿದ್ದಳು. ಅವಳ ನಿರೀಕ್ಷೆ ಹುಸಿಯಾಗಲಿಲ್ಲ. ಸಮಾಜದ ಇಂಥ ಹೀನಾಯವಾದ ಅವಸ್ಥೆಯಲ್ಲಿಯೇ ದೇವಪುರುಷರೊಬ್ಬರ ಉದಯವಾಯಿತು. ಅವರೇ ಜಗಜ್ಯೋತಿ, ಕ್ರಾಂತಿ ಪುರುಷ ಬಸವಣ್ಣನವರು.

ಬಸವೇಶ್ವರರ ಮಾನವೀಯ ಅನುಕಂಪ ಅತ್ಯಂತ ದೊಡ್ಡದು. ಭಾರತದ ಇತಿಹಾಸದಲ್ಲಿಯೇ ಅದ್ವಿತೀಯ ಪುರುಷರಾದ ಅವರು ಹುಟ್ಟಿದ್ದು, ಸಂಪ್ರದಾಯಪ್ರಿಯ ಬ್ರಾಹ್ಮಣ ಕುಟುಂಬದಲ್ಲಿ. ಆದರೆ ಬ್ರಾಹ್ಮಣ್ಯ ತನಗೆ ಮನುಷ್ಯತ್ವ ದೊರಕಿಸಿಕೊಡಲಾರದೆಂದು ಅದರಿಂದ ಹೊರಬಂದರು. ಕೆಳಗಿನ ವರ್ಗದ ಜನರಿಗಾಗಿ, ಸ್ತ್ರೀ ಸಮಾನತೆಗಾಗಿ ಟೊಂಕ ಕಟ್ಟಿದರು. ಇವರಷ್ಟು ಸ್ಪಷ್ಟವಾಗಿ ಮತ್ತು ಕಟುವಾಗಿ ಸಮಾಜದ ಹೀನ ಸಂಪ್ರದಾಯಗಳನ್ನು ಖಂಡಿಸಿದವರು ಭಾರತೀಯ ಇತಿಹಾಸದಲ್ಲಿ ಹಲವರಿರಲಾರರು. ಇಂದಿನ ನಾಗರಿಕ-ಹಾಗೂ ಪ್ರಜಾಪ್ರಭುತ್ವ ಯುಗದಲ್ಲೂ ನಾವು ಸ್ತ್ರೀ-ಪುರುಷ ಸಮಾನತೆಯನ್ನು ಸಾಧಿಸಲು ಅಸಹಾಯಕ ಪರಿಸ್ಥಿತಿಯನ್ನು ಎದುರಿಸುತ್ತಲಿದ್ದೇವೆ. ಆದರೆ ಅಣ್ಣ ಬಸವಣ್ಣನವರು 12 ನೇ ಶತಮಾನದಲ್ಲಿಯೇ ಸ್ತ್ರೀ-ಪುರುಷ ಸಮಾನತೆಯನ್ನು ಸಾಧಿಸಿದ್ದರು ಎಂದರೆ ಯಾರಿಗಾದರೂ ಪವಾಡವೆಂದೆನಿಸೀತು. ಆದರೆ ಇದು ಐತಿಹಾಸಿಕ ಸತ್ಯ.

ಪುರುಷರಷ್ಟೇ ಸ್ತ್ರೀಯರೂ ಸಮಾನರು ಎಂದ ಬಸವಣ್ಣನವರು ಮಹಿಳಾ ಸ್ವಾತಂತ್ರ್ಯಕ್ಕೆ ಕರೆ ನೀಡಿದರು. ಲಿಂಗವನ್ನು 'ಪತಿ' ಸ್ಥಾನದಲ್ಲಿರಿಸಿ ತಾವು 'ಸತಿ' ಸ್ಥಾನದಲ್ಲಿ ನಿಂತುಕೊಂಡ ಶರಣ ಬಸವೇಶ್ವರರು ಹೆಣ್ಣನ್ನು ಕೀಳಾಗಿ ಹೇಗೆ ಕಂಡಾರು. ಮಹಿಳೆಯರನ್ನು ಪ್ರೋತ್ಸಾಹಿಸುತ್ತ ಬಸವಣ್ಣನವರು "ಹೆಣ್ಣು ಗಂಡಿನ ಪಾಲಿಗೆ ಕೇವಲ ಕಾಮದ ಗೊಂಬೆಯಲ್ಲ. ಹೆಣ್ಣು ಸಹಧರ್ಮಿಣಿ. ಅವಳು ಪುರುಷನ ಬದುಕಿನಲ್ಲಿ ಬೌದ್ಧಿಕವಾಗಿ ಭಾಗವಹಿಸುವ 'ವಿಚಾರ ಪತ್ನಿ' ಯೂ ಹೌದು" ಎಂದು ಸಾರಿದರು.

ಬಸವಣ್ಣನವರೆಂದೂ ಸಂಸಾರ ತ್ಯಾಗವನ್ನು ಬೋಧಿಸಲಿಲ್ಲ. ಸಂಸಾರದಲ್ಲಿದ್ದುಕೊಂಡೇ ಧರ್ಮವನ್ನಾಚರಿಸಿ ಆತ್ಮಸಾಕ್ಷಾತ್ಕಾರ ಮಾಡಿಕೊಳ್ಳಬಹುದು. ದೇವರನ್ನೂ ಮೆಚ್ಚಿಸಬಹುದು ಎಂಬುದು ಅವರ ನಿಲುವಾಗಿತ್ತು. ದೈಹಿಕ, ಮಾನಸಿಕ, ಆಧ್ಯಾತ್ಮಿಕ ಕ್ಷೇಮ ಸಿದ್ಧಿಸಬೇಕಾದರೆ ಬದುಕಿನಲ್ಲಿ ಹೆಣ್ಣಿನ ಸಹಭಾಗಿತನದ ಅವಶ್ಯಕತೆಯಿರುವುದನ್ನು ಬಸವೇಶ್ವರರು ಒತ್ತಿಹೇಳಿದರು. ಇದಕ್ಕೆ ಇಬ್ಬರು ಹೆಂಡಿರನ್ನು ಲಗ್ನವಾದ ಬಸವಣ್ಣನವರೇ ಸಾಕ್ಷಿಯಾಗಿದ್ದರು. ಅವರು ಹೆಣ್ಣನ್ನು ಮಾಯೆ ಎನ್ನಲಿಲ್ಲ. ದೂರೀಕರಿಸಲಿಲ್ಲ. 'ಹೆಣ್ಣು ಸಾಕ್ಷಾತ್ ಕಪಿಲಸಿದ್ಧ ಮಲ್ಲಿಕಾರ್ಜುನ' ಎಂಬ ಸಿದ್ಧರಾಮನ ನುಡಿಗೆ ಬಸವಣ್ಣನವರೇ ಸ್ಫೂರ್ತಿಯಾಗಿದ್ದರು. "ಸತಿ-ಪತಿಗಳೊಂದಾದ ಭಕ್ತಿ ಹಿತವಾಗಿಪ್ಪುದು ಶಿವಂಗೆ" ಎಂದು ಹೇಳಿದ ಹಿರಿಯ ವಚನಕಾರ ದಾಸಿಮಯ್ಯನ ಮಾತನ್ನು ಸರ್ವ ಶರಣರೂ ಜಾರಿಯಲ್ಲಿ ತರಬೇಕೆಂದು ಬಸವಣ್ಣ ಒತ್ತಾಯ ಪಡಿಸಿದ್ದರು. ಗಂಡು-ಹೆಣ್ಣುಗಳ ನಡುವಿನ ವ್ಯತ್ಯಾಸ ಕೇವಲ ಜೈವಿಕವಾದದ್ದೇ ಹೊರತು ಸತ್ವತಃ ಅಲ್ಲ ಎಂಬುದರ ಅರಿವು ಅವರಿಗಿತ್ತು.

ಸರ್ವರಿಂದಲೂ ತಿರಸ್ಕರಿಸಲ್ಪಟ್ಟಿದ್ದ ಶೂದ್ರರು ಹಾಗೂ ಮಹಿಳೆಯರು ಮಾನಸಿಕವಾಗಿ ಮುಂದೆ ಬಂದು ಕ್ರಾಂತಿಯಲ್ಲಿ ಭಾಗವಹಿಸಿದುದು 12 ನೇ ಶತಮಾನದ "ಬಸವ ಕ್ರಾಂತಿ"ಯ ಒಂದು ಮೈಲಿಗಲ್ಲೆಂದೇ ಹೇಳಬೇಕು. ದೊರೆ ಬಿಜ್ಜಳನ ಮಂತ್ರಿಯಾಗಿದ್ದ ಬಸವಣ್ಣನವರು ಮಾಡಿದ ಅತ್ಯಂತ ಅವಶ್ಯಕ ಹಾಗೂ ತುರ್ತಾದ ಕಾರ್ಯವೆಂದರೆ ಮನುಷ್ಯ-ಮನುಷ್ಯರ ನಡುವಿನ ಸಂಬಂಧವನ್ನು ಸುಧಾರಿಸಿದ್ದು. ಈ ಕಾರ್ಯಕ್ಕಾಗಿ ಅವರು ಮೊದಲು ಒತ್ತುಕೊಟ್ಟದ್ದು. ಸ್ತ್ರೀ-ಪುರುಷ ಸಮಾನತೆಗೆ "ಹೆಣ್ಣೂ ಕೂಡ ಒಬ್ಬ ಮನುಷ್ಯಳು ಅವಳಿಗೂ ಯೋಚಿಸುವ ಶಕ್ತಿ ಇದೆ" ಎಂಬುದನ್ನು ಮೊಟ್ಟಮೊದಲ ಬಾರಿಗೆ ಹೆಣ್ಣಿನಲ್ಲೇ ಮೂಡಿಸಲು ಪ್ರಯತ್ನಿಸಿ ಸಫಲರಾದರು. ತಮ್ಮ ಸಮಾಜ ಸುಧಾರಣೆಯ ಕಾರ್ಯಗಳು ಸಫಲವಾಗಬೇಕೆಂದರೆ ಹೆಣ್ಣಿನ ಸಹಕಾರ ಅತ್ಯಗತ್ಯ ಎಂಬುದನ್ನು ಶರಣರಿಗೂ ತಿಳಿ ಹೇಳಿ ತಮ್ಮ ಹೆಂಡಂದಿರಿಗೂ ಹಾಗೂ ಇತರರಿಗೂ ಸ್ವಾತಂತ್ರ್ಯ ನೀಡಲು ಪ್ರೇರೇಪಿಸಿದರು. ಶರಣರ ಹೆಂಡಂದಿರು ಈ ಸ್ವಾತಂತ್ರ್ಯವನ್ನು ಉಪಯೋಗಿಸಿಕೊಂಡು ತಮ್ಮತನ ಮೆರೆದರು. ಪ್ರತಿಭಾಪೂರ್ಣ ವಚನಗಳನ್ನು ರಚಿಸಿದರು. ಬಸವಣ್ಣನ ಪ್ರೇರಣೆಯಿಂದ ಗಂಡಂದಿರ ಸಹಕಾರದಿಂದ, ಅನುಭವ ಮಂಟಪದ ಅನುಭಾವ ಗೋಷ್ಠಿಗಳಿಂದ ಮಹಿಳೆಯರು ಪ್ರಭಾವಿತರಾದರು. ಬಸವಣ್ಣನವರ ನಾಯಕತ್ವದಲ್ಲಿ ಪೂರ್ಣ ಸ್ವಾತಂತ್ರ್ಯವನ್ನು ಅನುಭವಿಸಿದರು.

## ಬನಶಂಕರಿ ಮಹಿಳಾ ಸಮಾಜದಿಂದ ವಿಶ್ವಅಂಗವಿಕಲರ ದಿನ

ಬೆಂಗಳೂರಿನ ಬನಶಂಕರಿ 2 ನೇ ಹಂತದಲ್ಲಿರುವ ಬನಶಂಕರಿ ಮಹಿಳಾ ಸಮಾಜದ ಆಶ್ರಯದಲ್ಲಿ 'ವಿಶ್ವ ಅಂಗವಿಕಲರ ದಿನ'ದ ಅಂಗವಾಗಿ 'ವಿಶೇಷ ಪ್ರತಿಭಾ ಪ್ರೋತ್ಸಾಹ' ಕಾರ್ಯಕ್ರಮ ಮಾರ್ಚ್ 15 ರಂದು ಡಾ॥ ಎಚ್. ನರಸಿಂಹಯ್ಯ ಸಭಾಂಗಣದಲ್ಲಿ ನಡೆಯಿತು.

ಬೆಂಗಳೂರಿನ ರಮಣ ಮಹರ್ಷಿ ಅಂಧರ ಅಕಾಡಮಿಯ ಅಂಥ ವಿದ್ಯಾರ್ಥಿ ವಿದ್ಯಾರ್ಥಿನಿಯರಿಂದ ನಡೆದ ಭರತನಾಟ್ಯ ಪ್ರದರ್ಶನ ಸಮಾರಂಭದ ವಿಶೇಷ ಆಕರ್ಷಣೆಯಾಗಿತ್ತು.

ಮಾಜಿ ಶಾಸಕ ಎಂ. ಶ್ರೀನಿವಾಸ್ ಅಧ್ಯಕ್ಷತೆ ವಹಿಸಿದ್ದರು. ಜೈನ ಯುವಕ ಸಂಘದ ಅಧ್ಯಕ್ಷ ಮಂಗಳಚಂದ್ ಅವರು ವಿಶೇಷ ಮುಖ್ಯ ಅತಿಥಿಯಾಗಿ ಆಗಮಿಸಿದ್ದರು. ಈ ಸಂದರ್ಭದಲ್ಲಿ ಸುಪ್ರಸಿದ್ಧ ನೇತ್ರ ವೈದ್ಯ ಡಾ॥ ಕೆ. ಸುಬ್ರಹ್ಮಣ್ಯಂ ಅವರನ್ನು ಸನ್ಮಾನಿಸಲಾಯಿತು.

ಅಂಥ ಮಕ್ಕಳ ಪ್ರತಿಭೆಯನ್ನು ಕಂಡು ಮೆಚ್ಚಿದ ಉದಾರಿಗಳು ಹಾಗೂ ಸಂಘ ಸಂಸ್ಥೆಗಳು ಅಂಧರಿಗೆ ಉಪಯೋಗವಾಗುವಂಥ ಟೇಪ್‌ರೆಕಾರ್ಡರ್‌ಗಳು, ಬ್ರೈಲ್ ಗಡಿಯಾರಗಳು, ಬಟ್ಟೆ ಮತ್ತಿತರ ವಸ್ತುಗಳನ್ನು ದಾನಮಾಡಿದ್ದಲ್ಲದೆ ರಮಣಮಹರ್ಷಿ ಅಕಾಡಮಿಗೆ ಧನರೂಪದಲ್ಲೂ ಸಹಾಯ ಮಾಡಿದರು.

ಪ್ರಾರಂಭದಲ್ಲಿ ಸುಪ್ರಸಿದ್ಧ ವರ್ತಕ ಹಾಗೂ ದಾನಿ ಸಿ. ಕಾಂತಿಲಾಲ್ ಗೋಬಾವಾಲ ರವರು ಜ್ಯೋತಿ ಬೆಳಗಿ ಸಮಾರಂಭ ಉದ್ಘಾಟಿಸಿದರು.



ಈ ಮಹಿಳೆಯರು ಎಲ್ಲಿಯವರೆಗೆ ಮುಂದುವರೆದಿದ್ದರೆಂದರೆ ಪುರುಷರನ್ನೇ ಟೀಕಿಸಿ, ಬುದ್ಧಿ ಹೇಳುವಷ್ಟರ ಮಟ್ಟಿಗೆ ಮುಂದುವರೆದಿದ್ದರು. ಆಯ್ದಕ್ಕಿ ಮಾರಯ್ಯನನ್ನು ಟೀಕಿಸುವ ಲಕ್ಕಮ್ಮ, ಮೋಳಿಗಯ್ಯನನ್ನು ಟೀಕಿಸುವ ಮಹಾದೇವಿಯರು ಇದಕ್ಕೆ ಉತ್ತಮ ಉದಾಹರಣೆ. ಗಂಡಂದಿರು ತಪ್ಪು ಮಾಡಿದಾಗ ಬೇರೆಯವರ ಎದುರಿನಲ್ಲೇ ಅದನ್ನು ಟೀಕಿಸಿ ಗಂಡಂದಿರಿಗೆ ಬುದ್ಧಿ ಹೇಳುವಷ್ಟರ ಮಟ್ಟಿಗೆ ಅವರಿಗೆ ಸ್ವಾತಂತ್ರ್ಯವಿತ್ತು.

ಸಂಸಾರದಲ್ಲಿ ಸುಖವಿದೆ, ಸವಿಯಿದೆ. ಅದನ್ನು ಸವಿಯಬೇಕಾದರೆ ಸ್ತ್ರೀ-ಪುರುಷರು ಪರಸ್ಪರ ಅರಿತುಕೊಳ್ಳಬೇಕು; ಸಹಕರಿಸಬೇಕು ಎನ್ನುತ್ತ ಬಸವಣ್ಣ ಹೇಳುತ್ತಾರೆ—

"ಗಂಡ ಶಿವಲಿಂಗ ದೇವರ ಭಕ್ತ;
ಹೆಂಡತಿ ಮಾರಿ ಮಸುಣಿಯ ಭಕ್ತೆ.
ಗಂಡಕೊಂಬುದು ಪಾದೋದಕ ಪ್ರಸಾದ;
ಹೆಂಡತಿ ಕೊಂಬುದು ಸುರೆಮಾಂಸ
ಭಾಂಡಭಾಜನ ಶುದ್ಧವಿಲ್ಲದವರ ಭಕ್ತಿ
ಹೆಂಡದ ಮಡಕೆಯ ಹೊರಗೆ ತೊಳೆದಂತೆ
ಕೂಡಲ ಸಂಗಮದೇವ."

ಇಲ್ಲಿ ಗಂಡ ಹೆಂಡತಿ ಪರಸ್ಪರರನ್ನು ಅರಿತು ಬಾಳದ ದಾಂಪತ್ಯ ಚಿತ್ರಣವೊಂದನ್ನು ಕೊಡುತ್ತ ಅಂತಹ ಬಾಳನ್ನು ಹೆಂಡದ ಮಡಕೆಗೆ ಹೋಲಿಸಿದ್ದಾರೆ. ಮಡಕೆಗೆ ಒಳ-ಹೊರಗಿನ ಎರಡೂ ಭಾಗಗಳು ಅವಶ್ಯಕವಾಗಿರುವಂತೆಯೇ ಬದುಕಿಗೆ ಗಂಡ-ಹೆಂಡರೂ ಅವಶ್ಯಕವಾಗಿ ಹೊಂದಿಕೊಂಡಿರಬೇಕು. ಇಲ್ಲಿ ಗಂಡನಿಗೆ ಮಡಕೆಯ ಹೊರಭಾಗವನ್ನು ಹೋಲಿಸಿ ಒಳಭಾಗವನ್ನು ಹೆಂಡತಿಗೆ ಹೋಲಿಸಲಾಗಿದೆ.

12ನೇ ಶತಮಾನದ ಕರ್ನಾಟಕದಲ್ಲಿ ಬಹು ಸಂಖ್ಯೆಯ ಎಚ್ಚೆತ್ತ ಮಹಿಳೆಯರು ಕಂಡು ಬಂದುದು, ಬಸವಣ್ಣನವರಿಂದಲೇ ಹೌದು. ಬಸವಣ್ಣನವರು ಹಮ್ಮಿಕೊಂಡಿದ್ದು ಕೇವಲ ಧಾರ್ಮಿಕ ಚಳುವಳಿಯಲ್ಲ. ಅದರೊಂದಿಗೆ ಅವರು ಸಾಮಾಜಿಕ ಕ್ರಾಂತಿಗೂ ಚಾಲನೆ ನೀಡಿದರು. ಅವರು ಧರ್ಮವನ್ನು ತೊರೆಯಲಿಲ್ಲ. ಧರ್ಮದ ನೇತೃತ್ವದಲ್ಲಿಯೇ ಸಾಮಾಜಿಕ ಸುಧಾರಣೆಗೆ ಮುಂದರು. ಇಲ್ಲಿ ಅಂತರಂಗಶುದ್ಧಿ ಹಾಗೂ ಬಹಿರಂಗ ಶುದ್ಧಿ ಎರಡೂ ಒಂದೇ ಕಾಲಕ್ಕೇ ಜಾಗೃತಗೊಂಡವು. ಈ ಉಭಯ ಶುದ್ಧಿಗಳ ಅಂಗವಾಗಿ ಅವರು ಸ್ತ್ರೀ ಸ್ವಾತಂತ್ರ್ಯಕ್ಕೆ ಆದ್ಯತೆ ನೀಡಿದರು. ಇವರು ಸ್ತ್ರೀ-ಪುರುಷ ಇಬ್ಬರೂ ಪ್ರಾಧಾನ್ಯತೆ ಹೊಂದಿದ ಸಮಾಜವನ್ನು ರಚಿಸಿ ಅದರೊಂದಿಗೆ ಆಧ್ಯಾತ್ಮಿಕತೆಯನ್ನೂ ಸಮ್ಮಿಲನಗೊಳಿಸಿದರು. ಅದಕ್ಕಾಗಿಯೇ ಅಂದು ಹೆಣ್ಣು ಸಾಮಾಜಿಕ ಸ್ವಾತಂತ್ರ್ಯದೊಂದಿಗೆ ಆಧ್ಯಾತ್ಮಿಕ ಸ್ವಾತಂತ್ರ್ಯವನ್ನೂ ಏಕಕಾಲದಲ್ಲಿ ಅನುಭವಿಸಿದಳು.

ಸಾಮಾಜಿಕ ಹಾಗೂ ಆಧ್ಯಾತ್ಮಿಕ ಸ್ವಾತಂತ್ರ್ಯಗಳೆರಡನ್ನೂ ತಮಗೆ ದಯಪಾಲಿಸಿದ, ಬಸವಣ್ಣನವರೆಂದರೆ ಅಂದಿನ ಮಹಿಳೆಯರಿಗೆ ಎಲ್ಲಿಲ್ಲದ ಅಭಿಮಾನ.. ಹುಟ್ಟಿದ ಮನೆಯನ್ನೂ ಕೊಟ್ಟ ಮನೆಯನ್ನೂ ಬಿಟ್ಟು ಉಟ್ಟಬಟ್ಟೆಯಿಂದಲೂ ವಿವಂಚಿತಳಾಗಿ ಕಲ್ಯಾಣಕ್ಕೆ ಬಂದ ಮಹಾದೇವಿಯನ್ನು ನೋಡಿದವರೆಲ್ಲರೂ ಹುಚ್ಚಿಯೆಂದೇ ತಿಳಿದುಕೊಂಡರು. ಆದರೆ ಬಸವಪ್ರಭೆಗೆ ಅವಳ ಆಧ್ಯಾತ್ಮಿಕ ದಾಹದ ತೀವ್ರತೆಯ ಅರಿವಿತ್ತು. ಆದರೂ ಅವಳ ನಿಲುವನ್ನು ಇತರರಿಗೆ ಸಾಬೀತುಪಡಿಸಲು ಅವಳನ್ನು ಪರೀಕ್ಷೆಗೆ ಗುರಿಮಾಡುವಾಗಲೂ ಬಸವಣ್ಣ ಮೌನಧಾರಿಯಾಗಿಯೇ ಉಳಿದಿದ್ದರು. ಪರೀಕ್ಷೆಯಲ್ಲಿ ಗೆದ್ದ ಮಹಾದೇವಿ ಬಸವನ ನಾಯಕತ್ವದಲ್ಲಿ 'ಅಕ್ಕ' ಮಹಾದೇವಿಯಾಗಿ ಬೆಳೆದಳು. ಅಕ್ಕಮಹಾದೇವಿ ಬಸವಣ್ಣನ ಬಗೆಗೆ ಹೇಳುತ್ತಾಳೆ—

"ಕಾಮನ ಗೆಲಿದೆನು, ಬಸವ ನಿಮ್ಮ
ದಯೆಯಿಂದ
ಸೋಮಧರನ ಹಿಡಿತಪ್ಪೆನು, ಬಸವ, ನಿಮ್ಮ
ಕೃಪೆಯಿಂದ
ನಾಮದಲ್ಲಿ ಹೆಂಗೂಸೆಂಬ ಹೆಸರಾದಡೇನು?
ಭಾವಿಸಲು ಗಂಡು-ರೂಪು, ಬಸವ, ನಿಮ್ಮ
ದಯದಿಂದ!
ಅತಿಕಾಯಿ ಚೆನ್ನಮಲ್ಲಿಕಾರ್ಜುನಯ್ಯಂಗೆ
ತೊಡರನಿಕ್ಕಿ
ಎರಡರಿಯದೇ ಕೂಡಿದೆನು, ಬಸವ, ನಿಮ್ಮ
ಕೃಪೆಯಿಂದ."

ಬಸವಣ್ಣ ನಿಜಕ್ಕೂ ದೇವಪುರುಷನೇ ಹೌದು. ಅವರು ಜೀವನದ ಮೌಲ್ಯಗಳನ್ನು ಕೇವಲ ಬೋಧಿಸಲಿಲ್ಲ. ಅವುಗಳನ್ನು ತಮ್ಮ ಬದುಕಿನಿಂದಲೇ ಪ್ರಾರಂಭಿಸುತ್ತಿದ್ದರು. ಸ್ವಾತಂತ್ರ್ಯಪ್ರಿಯ ಅಣ್ಣ ಬಸವಣ್ಣ ಸೃಷ್ಟಿಕರ್ತನ ಎರಡು ಸಾಧನಗಳಾದ ಹೆಣ್ಣು ಗಂಡು ಪರಸ್ಪರ ಅರಿತು ಸಮನಾಗಿ ಬಾಳಿದಾಗಲೇ ಬದುಕಿನ ಗುರಿ ತಲುಪಲು ಸಾಧ್ಯ ಎಂಬುದನ್ನು ಅರಿತಿದ್ದರು. ಅಂದು ಬಸವಣ್ಣನವರು ಜೋಳವನ್ನು ಮುತ್ತು ಮಾಡಿದ್ದು ಪವಾಡವಾಗದೇ ಇರಬಹುದು. ಆದರೆ ಅವಕಾಶ ನೀಡಿ ಅಸ್ಪೃಶ್ಯ ಸ್ತ್ರೀ ಕಾಳವ್ವೆಯಂತಹವರನ್ನೂ ಮುಂದೆ ಬರುವಂತೆ ಮಾಡಿ ಅವರು ವಚನಗಳನ್ನು ರಚಿಸುವಂತೆ ಮಾಡಿದ್ದು ಮಾತ್ರ ಪವಾಡವೆನ್ನಲೇಬೇಕು. ಇದೇ ಮೇ 5 ರಂದು ಜಗಜ್ಯೋತಿ ಬಸವೇಶ್ವರರ ಜಯಂತಿ ಉತ್ಸವ ಬಸವ ಪಥ ಹಿಡಿದು ಸ್ತ್ರೀ-ಪುರುಷ ಸಮಾನತೆಗೆ ಬದ್ಧರಾಗೋಣ.

**

## ಕೆ. ಆರ್. ಇ. ಸಿ. ಮಹಿಳಾ ಮಂಡಳಿಯಲ್ಲಿ "ಸ್ನೇಹಭಾವ" ಸಂವಾದ

ಬೇಸಿಗೆಯ ಝಳಪಿನ ಮಾರ್ಚ್ 6ನೇ ದಿನಾಂಕದ ಮಧ್ಯಾಹ್ನ 2 ಗಂಟೆ ಸಮಯದಲ್ಲಿಯೂ ಕೆ. ಆರ್. ಇ. ಸಿ. ಮಹಿಳಾ ಮಂಡಲದ ಆವರಣಕ್ಕೆ ಕರಾವಳಿಯ (ಲೇಖಕಿ, ವಾಚಕಿಯರ ಸಂಘ) ಪ್ರತಿನಿಧಿಗಳು ಒಬ್ಬೊಬ್ಬರಾಗಿ ಆಗಮಿಸುತ್ತಾ ಇರುವುದನ್ನು ಕಂಡಾಗಲೇ ಅಂದಿನ ವಿಶೇಷತೆಯ ಅರಿವೂ ಮೂಡದೆ ಇರಲಿ.

ಕೆ. ಆರ್. ಇ. ಸಿ. ಮಹಿಳಾ ಮಂಡಲಿಯು "ಸ್ನೇಹಭಾವವೆಂಬ" ಆತ್ಮೀಯ ಕೂಟವನ್ನು ನಿಯೋಜಿಸಿತ್ತು.

"ಹೊಸ ಬರಹಗಾರರೂ ಮತ್ತು ಅವರ ಸಿದ್ಧಾಂತಗಳು" ಎಂಬ ವಿಷಯದ ಸಾಹಿತ್ಯಕ ಸಂವಾದವನ್ನೂ ಏರ್ಪಡಿಸಲಾಗಿ ಈ ವಿಷಯ. ಮಾತಾಡಿದವರು ಶ್ರೀಮತಿ ಚಂದ್ರಕಲಾ ನಂದಾವರ. ಉಪನ್ಯಾಸಕಿ ಉತ್ತಮ ಕವಯತ್ರಿಯೂ ಆದ ಇವರು; ನವೋದಯ, ನವ್ಯ, ದಲಿತ ಬಂಡಾಯ ಸಾಹಿತ್ಯದ ಪ್ರಕಾರಗಳನ್ನು ವಿವರಿಸಿ ಮುಖ್ಯವಾಗಿ ಮಹಿಳಾ ಬರಹಗಾರರ ಕಡೆ ತಮ್ಮ ವಿಶ್ಲೇಷಣೆ ಮಾಡಿದರು. ನವ್ಯದ ಸಂದರ್ಭದಲ್ಲಿ ಕವಯಿತ್ರಿಯವರು ಬರೆಯಲು ತೊಡಗಿದರೂ ಹೆಚ್ಚಿನ ಪ್ರಾಮುಖ್ಯ ಪಡೆಯಲಿಲ್ಲ. ಸಂಗೀತದಲ್ಲಿ ಮಹಿಳಾ ಸಂಗೀತವೆಂದು ವರ್ಗೀಕರಣವಿಲ್ಲ. ಆದರೆ ಸಾಹಿತ್ಯದಲ್ಲಿ ಇದು ಅನಿವಾರ್ಯವಾಗಿ ಆಗೇ ಆಗುತ್ತಿದೆ. ಅಡಿಗೆ ಮನೆಯ ಸಾಹಿತ್ಯವೆಂಬ ಅಪವಾದಕ್ಕೂ ಗುರಿಯಾದ ನಾವು 'ಈ ದೂಷಣೆಯಿಂದ ಹೊರಬರುವಂತ ಮೌಲಿಕವಾದ ರಚನೆ ಮಾಡಬೇಕು; ಮಹಿಳೆಗಿರುವ ಇತಿ-ಮಿತಿ ಹೊಣೆ-ಒತ್ತಡಗಳನ್ನು ನಿಭಾಯಿಸುತ್ತಾ ತಮ್ಮ ಬರವಣಿಗೆಯೆಡೆ ಗಮನ ಹರಿಸುವುದು ಸ್ವಲ್ಪ ಕಷ್ಟಕರವಾದರೂ, ಪ್ರಯತ್ನದೆಡೆ ಸಾಗಲೇಬೇಕು" ಎಂದರು ಮತ್ತೊಬ್ಬ ಸದಸ್ಯೆ ಅ. ನಾ. ಪೂರ್ಣಿಮ. "ಭ್ರಾಮಕ ಜಗತ್ತನ್ನು ಸೃಷ್ಟಿಸದೇ ವಾಸ್ತವಿಕ ಬದುಕಿಗೆ ಸನಿಹವಾದಂತ ಭ್ರಾಮಕ ವಾಸ್ತವಿಕ ಬದುಕಿಗೆ ಸನಿಹವಾದಂತ ರಚನೆಗಳೂ ಬರಲಿ" ಎಂದೂ ತಮ್ಮಭಿಪ್ರಾಯ ಸೇರಿಸಿದರು.

ಚಂದ್ರಕಲಾ ಅವರು ಮುಂದುವರಿಸುತ್ತಾ ಇತ್ತೀಚೆಗೆ ಕವಯಿತ್ರಿಯರ ಸಂಖ್ಯೆ ಹೆಚ್ಚಾಗುತ್ತಿದೆ. ಇವರು ಗದ್ಯ ಪ್ರಕಾರದಲ್ಲಿ ತಮ್ಮ ಅನುಭೂತಿಗಳನ್ನು ಬಿಚ್ಚಿಕೊಳ್ಳುವಲ್ಲಿ ಹಿಂಜರಿಕೆಯಿಂದ, ರೂಢ; ರಹಸ್ಯವಾದ ಸೂಕ್ಷ್ಮತೆಯ ಪದ್ಯ ಪ್ರಕಾರಕ್ಕೆ ಸಾಗಿರಬೇಕೆಂದೂ ತಿಳಿಸಿ "ದಿಟ್ಟ ಅಭಿಪ್ರಾಯ ಅನುಭೂತಿಗಳನ್ನು ಹೇಳುವಲ್ಲಿ ಗದ್ಯ-ಪದ್ಯ ಪ್ರಕಾರಗಳೇ ಇರಲಿ ಹಿಂಜರಿಕೆ ಬೇಡ" ಎಂದರು.

ನಂತರದ ಚರ್ಚೆಯಲ್ಲಿ ಗೃಹಿಣಿಗಿಂತಲೂ ಉದ್ಯೋಗಸ್ಥ ಮಹಿಳೆಗೆ ಹೆಚ್ಚು ಜವಾಬ್ದಾರಿ ಎಂಬಲ್ಲಿ ಎರಡು ಮಾತಿರಲಿಲ್ಲ. ಆದರೆ ಉದ್ಯೋಗಸ್ಥ ಮಹಿಳೆಗೆ ದೊರೆಯುವ ಜನಸಂಪರ್ಕ ವಿಚಾರ ವಿನಿಮಯ–ಚಿಂತನೆಗಳ ಅವಕಾಶ ಗೃಹಿಣಿಗೆ ದೊರೆಯಲಾರದು ಎಂದು ರಜಿಯಾ ತಮ್ಮ ಅನಿಸಿಕೆ ತೋಡಿಕೊಂಡರು. ಇದರಿಂದಾಗಿ ಇವರ ಅನುಭವವು ವಿಸ್ತಾರವಾಗದು ಸಹ ಎಂದರು.

ಚರ್ಚೆಯ ನಡುವೆಯ ಹಿರಿಯ ಕತೆಗಾರ್ತಿ ಶ್ರೀಮತಿ ಮನೋರಮಭಟ್ಟ "ತಾನು ಹೇಳಬೇಕೆಂದಿದ್ದರೂ, ನೋಡಿದ್ದು ಬರೆಯಲೇಬೇಕೆಂಬ ಆಸಕ್ತಿಯೇ ಹೆಚ್ಚು ಮುಖ್ಯವಾದದು. ಮಹತ್ವವಾದದು" ಎಂದರು.

ಒಟ್ಟಿನಲ್ಲಿ ಬೇಸಿಗೆಯ ಬಿಸಿಲಿನಲ್ಲೂ ಚರ್ಚೆಯ ಬಿಸುವು ಎಲ್ಲರ ನಿದ್ದೆಯ ಜಂಪನ್ನೂ ಓಡಿಸಿತು. "ಮೌಲ್ಯಯುತೆ ಬರವಣಿಗೆ ಯಾವತ್ತೂ ಸರ್ವ-ಕಾಲಿಕ; ಸಮಕಾಲಿನ" ಎಂದು ತಿಳಿಸಿ ಅಂದಿನ ಚರ್ಚೆಗೆ ಚಂದ್ರಕಲಾ ನಿಲುಗಡೆ ಹಾಕಿದರು.

ಕರಾವಳಿಯ ಅತಿಥಿಗಳಿಗೆ ಸ್ನೇಹದ್ಯೋತಕವಾಗಿ ಕೆಂಪು ಗುಲಾಬಿಯ ನೀಡಿ, ಗೌರವಿಸಿದರು ಸಂಘದ ಕಾರ್ಯದರ್ಶಿನಿ ಶ್ರೀಮತಿ ಕಲ್ಯಾಣಿ ವೆಂಕಟರಾಮನ್. ಅಧ್ಯಕ್ಷೆ ಶ್ರೀಮತಿ ವತ್ಸಲಾ ಶೆಟ್ಟಿ ಅತಿಥಿಗಳಿಗೆ ಸ್ವಾಗತ ಕೋರಿದರು. ಕರಾವಳಿಯ ಪರವಾಗಿ ಕಾರ್ಯದರ್ಶಿನಿ ಶ್ರೀಮತಿ ಮೋಹಿನಿ ಮಂಜುನಾಥ ಕೃತಜ್ಞತೆಗಳನ್ನು ತಿಳಿಸಿದರು. ಶ್ರೀಮತಿ ರೂಪಶ್ರೀ ನಾಗರಾಜ್ ವಂದನಾರ್ಪಣೆ ಮಾಡಿದರು.

**ರಜಿಯಾ ಡಿ. ಬಿ. ಸುರತ್ಕಲ್ (ದ.ಕ.)**




— ನೇಮಿಚಂದ್ರ

ನಳಿನಿಮೂರ್ತಿ ಸಾಹಸಿ ಹೆಣ್ಣು. ವಿಜ್ಞಾನ, ತಂತ್ರಜ್ಞಾನಗಳು ಹೆಣ್ಣಿಗೆ ಬಹುದೂರವಿದ್ದ ಕಾಲದಲ್ಲಿ ಅದನ್ನು ಆಯ್ಕೆ ಮಾಡಿ ತೇರ್ಗಡೆ ಹೊಂದಿ, ವಿದೇಶದಲ್ಲಿ ಅಧ್ಯಯನ ನಡೆಸಿ, ಈಗ ವಿದೇಶದಲ್ಲಿ ಕೆಲಸ ಮಾಡುತ್ತಿರುವ ಮಹಿಳೆ. ತಮ್ಮ ಅಧ್ಯಯನ, ಅಂದಿನ ಪರಿಸ್ಥಿತಿ, ಎರಡೂ ಸಂಸ್ಕೃತಿಗಳ ನಡುವಿನ ಸಾಮ್ಯ ವೈರುದ್ಧ್ಯಗಳೂ ಮಹಿಳಾ ಶೋಷಣೆ ಸ್ತ್ರೀ ಚಳವಳಿ, ಹೀಗೆ ಹಲವು ವಿಷಯಗಳ ಕುರಿತು ತಮ್ಮ ಅನುಭವವನ್ನು ಇಲ್ಲಿ ವಿವರವಾಗಿ ತಿಳಿಸಿದ್ದಾರೆ.

**ನೇಮಿಚಂದ್ರ:** ವಿಜ್ಞಾನ ಮತ್ತು ತಂತ್ರಜ್ಞಾನ ರಂಗಗಳಲ್ಲಿ ಮಹಿಳೆಯರ ಸಂಖ್ಯೆ ಇವತ್ತಿಗೂ ಗಮನಾರ್ಹವಾಗಿ ಕಡಮೆ ಇದೆ. ಇಂಥಾ ಪರಿಸ್ಥಿತಿಯಲ್ಲಿ ತಾವು ಐವತ್ತರ ದಶಕದಲ್ಲೇ ಇಂಜಿನಿಯರಿಂಗ್ ರಂಗವನ್ನು ಆಯ್ದುಕೊಂಡವರು. ನಿಮ್ಮ ಹಿನ್ನೆಲೆಯ ಬಗ್ಗೆ ಸಹಜವಾಗಿಯೇ ಕುತೂಹಲವಾಗುತ್ತದೆ. ನೀವು ವಿದ್ಯಾಭ್ಯಾಸ ಪ್ರಾರಂಭಿಸಿದ್ದು ಎಲ್ಲಿ ?

**ಡಾ॥ ನಳಿನಿ:** ನಾನು ಬೆಂಗಳೂರಿನ ಸೆಂಟ್ರಲ್ ಕಾಲೇಜಿನಲ್ಲೇ ಓದಿದೆ. 1957 ರಲ್ಲಿ ಬಿ. ಎಸ್ಸಿ. ಆನರ್ಸ್ ಮುಗಿಸಿದೆ. ಗಣಿತವನ್ನು ಮೇಜರ್ ಆಗಿ ತೆಗೆದುಕೊಂಡಿದ್ದೆ. ಗಣಿತದಲ್ಲಿ ಮೊದಲ ರ್‍ಯಾಂಕ್ ಬಂದಿತ್ತು. ಅಲ್ಲಿಂದ ಮುಂದೆ 'ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಸಯನ್ಸ್'ಗೆ ಸೇರಿದೆ. ಆಗ ಡಿ. ಐ. ಐ. ಎಸ್. ಸಿ., ಇತ್ತು, ಈಗಿನ ಬಿ. ಇ. ಗೆ ಸಮಾನವಾದದ್ದು. ಇನ್‌ಸ್ಟಿಟ್ಯೂಟಿನ ಇಂಜಿನಿಯರಿಂಗ್ ವಿಭಾಗಕ್ಕೆ ಸೇರಿಕೊಂಡೆ.

**ನೇಮಿಚಂದ್ರ:** ಆಗ ಹುಡುಗಿಯರು ಇಂಜಿನಿಯರಿಂಗ್ ತೆಗೊಳ್ತಾ ಇದ್ದರಾ ?

> "ಹುಡುಗಿಯರೇ ಹೀಗೆ ಅವರಿಗೆ ಸಮಯಪ್ರಜ್ಞೆಯೇ ಇರೋಲ್ಲ" ಅಂತಾ ಹುಡುಗಿಯರನ್ನೆಲ್ಲ ಒಟ್ಟಿಗೆ ಮೂಟೆ ಕಟ್ಟಿ ಸಾರ್ವತ್ರಿಕವಾಗಿ ದೂರಿಬಿಡ್ತಾ ಇದ್ದರು. ಯಾವುದಾದರೂ ಪರೀಕ್ಷೆಯಲ್ಲಿ ಅಂಕ ಕಮ್ಮಿ ಬಂತು "ಹುಡುಗಿಯರಿಗೆಲ್ಲ ಇಂಜಿನಿಯರಿಂಗ್ ಆಗೋಲ್ಲ" ಅನ್ನೋ ಕೊಂಕು ಮಾತು. ಸಾಲದ್ದಕ್ಕೆ ನಮ್ಮ ತಂದೆ ಗಣ್ಯ ಇಂಜಿನಿಯರ್ ಆಗಿದ್ದರು. ನಾನೇನಾದರೂ ತಪ್ಪು ಮಾಡಿದರೆ ಎಂ. ಆರ್. ಸೀತಾರಾಂ ಮಗಳು ನಿನಗೆ ಬರೋಲ್ವೆ? ಅನ್ನೋರು. ನನಗೇನು ಇಂಜಿನಿಯರಿಂಗ್ 'ಜೀನ್'ನಲ್ಲಿ ಬರಲು ಸಾಧ್ಯವಿತ್ತೆ?

**ಡಾ॥ ನಳಿನಿ:** ನನ್ನ ವಿಭಾಗದಲ್ಲಿ ನಾನೊಬ್ಬಳೇ ಇದ್ದದ್ದು. ಇಡೀ ಇನ್‌ಸ್ಟಿ-ಟ್ಯೂಟಿನಲ್ಲಿ ಸುಮಾರು 300 ಹುಡುಗರಿದ್ದರೆ, 18 ಹುಡಿಗಿಯರಿದ್ದರು ! ಅದೂ ವಿಜ್ಞಾನ ಮತ್ತು ತಂತ್ರಜ್ಞಾನ ಎರಡೂ ರಂಗಗಳನ್ನು ಸೇರಿ !

**ನೇಮಿಚಂದ್ರ:** ಆಗ ಇನ್‌ಸ್ಟಿಟ್ಯೂಟಿನ ವಾತಾವರಣ ಹೇಗಿತ್ತು ? ಹುಡುಗಿಯರಿಗೆ ಇಂಜಿನಿಯರಿಂಗ್ ಸೇರುವಂತೆ ಪ್ರೋತ್ಸಾಹ ಇತ್ತೆ ?

**ಡಾ॥ ನಳಿನಿ:** ನಾನು ಡಿ. ಐ. ಐ. ಎಸ್.ಸಿ., ಗೆ ಸೇರಿದಾಗ, ಈ ಒಬ್ಬರು ಪ್ರೊಫೆಸರ್ ಇದ್ದರು ನೋಡಿ, ಬಹಳ ಗೋಳು ಹೊಯ್ದುಕೊಂಡರು. ನಾ ಸೇರಿದ್ದು 'ಎಲೆಕ್ಟ್ರಿಕಲ್ ಕಮ್ಯೂನಿಕೇಶನ್' ವಿಭಾಗದಲ್ಲಿ, ಅಲ್ಲಿ ನಾನೊಬ್ಬಳೇ ಹುಡುಗಿ. ಅವರಿಗೆ ನಾನು ಇಂಜಿನಿಯರಿಂಗ್ ಸೇರಿದ್ದೇ ಇಷ್ಟವಿರಲಿಲ್ಲ. ನನ್ನ ಪ್ರವೇಶ ನಿಲ್ಲಿಸುವಂತಿರಲಿಲ್ಲ. ಆದರೆ ಒಳಹೊಕ್ಕ ಮೇಲೆ ಮುಗ್ಗರಿಸಿ ಬೀಳುವಂತೆ ಎಲ್ಲಾ ಪ್ರಯತ್ನ ಮಾಡಿದರು. ಅವರ ಅಭಿಪ್ರಾಯದಲ್ಲಿ ಹುಡುಗಿಯರು 'ಓದೋ ಹುಡುಗರ' ಬುದ್ಧಿ ಭ್ರಮಣೆ ಮಾಡ್ತಾರೆ ಅಂತಾ. ಹುಡುಗಿಯರಿಗೆ ಇಂಜಿನಿಯರಿಂಗ್ ತಕ್ಕ ರಂಗವಲ್ಲ ಎಂಬ ಗಟ್ಟಿ ನಂಬುಗೆ ಅವರದು.

**ನೇಮಿಚಂದ್ರ:** ನಿಮ್ಮ ಅನುಭವ ಕೇಳಿದ್ರೆ ತಟ್ಟನೆ ನನ್ನ ಇಂಜಿನಿಯರಿಂಗ್ ಕಡೆಯ ವರ್ಷ ನೆನಪಾಗುತ್ತೆ. ನಾವು ಭಾರತದ ವಿವಿಧ ಕಾರ್ಖಾನೆಗಳ ಭೇಟಿ ನೀಡಿ ರಿಪೋರ್ಟ್ ತಯಾರಿಸಬೇಕಿತ್ತು. ಹೈದರಾಬಾದಿನ ಒಂದು ಪಿ.ಎಸ್.ಯು ಬಳಿ ಬಂದಾಗ ಹುಡುಗಿಯರನ್ನು ಒಳ ಬಿಡಲಿಲ್ಲ. ಕೆಲಸ ಮಾಡುವ ಪುರುಷರ ಗಮನ ಚಂಚಲವಾಗುತ್ತದೆ ಅಂತ ಕಾರಣ ಕೊಟ್ಟರು. ಎಸ್. ಎ. ಎಲ್. ನಲ್ಲಿ ಸೈಂಟಿಸ್ಟ್ ಆಗಿರೋ ಡಾ॥ ಶುಭಾರವರ ಇತ್ತೀಚಿನ ಅನುಭವವೂ ಇದೇ ಆಗಿದೆ. ಅವರು ಕೆ. ಜಿ. ಎಫ್. ನ ಬಿ ಇ ಎಂ ಎಲ್ ಗೆ ಹೋದಾಗ ಅದೇ ಕಾರಣ ಕೊಟ್ಟು ಒಳ ಬಿಡಲು ನಿರಾಕರಿಸಿದರು. ನಮ್ಮ–ನಿಮ್ಮ ನಡುವೆ ಒಂದು ಪೀಳಿಗೆಯ ಅಂತರವಿದ್ದರೂ ನಿಮ್ಮ–ನಮ್ಮ ಅನುಭವದ ಸಾಮ್ಯ ಎಷ್ಟಿದೆ ಅಲ್ಲವೆ ? ಮೇಲೆ ಮೇಲೆ ಬದಲಾದಂತೆ ಕಂಡರೂ ಆಳದಲ್ಲಿ ಪೂರ್ವಗ್ರಹಗಳು ಇನ್ನೂ ಕೆಲಸ ಮಾಡುತ್ತಿವೆ ಅನ್ನುತ್ತೀರಾ ?

**ಡಾ॥ ನಳಿನಿ** ಖಂಡಿತಾ ಹೌದು. ಆದರೆ ಪುಣ್ಯಕ್ಕೆ ಇನ್‌ಸ್ಟಿಟ್ಯೂಟಿನ ಎಲ್ಲಾ ಪ್ರಾಧ್ಯಾಪಕರೂ ಹಾಗಿರಲಿಲ್ಲ. ಕೆಲವರು ಪಕ್ಷಪಾತ ಮಾಡುತ್ತಿದುದು ಉಂಟು. 'ಹುಡುಗಿಯರಿಗೆ ಅಂಕಗಳನ್ನು ತಗೊಂಡು ಏನಾಗಬೇಕು ?' ಅಂತ ನಮ್ಮ ಪೇಪರ್ ತಿದ್ದುವ ಸಮಯದಲ್ಲಿ ಹತ್ತು ಹಾಕೋ ಕಡೆ ಆರು ಹಾಕ್ತಾ ಇದ್ರು. ಹುಡುಗರಿಗೆ ಹತ್ತರ ಕಡೆ ಹನ್ನೆರಡು ಹಾಕೋರು. ಒಮ್ಮೆ ಹೋಗಿ ಚೆನ್ನಾಗಿ ಜಗಳ ಕಾದದ್ದೂ ನೆನಪಿದೆ. ಹಾಗೆಯೇ ಕೆಲವು ಪ್ರಾಧ್ಯಾಪಕರು ಸ್ವಲ್ಪ ಹುಡುಗಿ ಆಕರ್ಷಕವಾಗಿದ್ದರೆ, ಎರಡು ಅಂಕ ಹೆಚ್ಚಿಗೇ ಹಾಕಿಬಿಡುವ ಪ್ರಸಂಗಗಳೂ ಇತ್ತು. ಅಂತೂ ನಮಗೆ ಬಂದ ಅಂಕಗಳು

ನಮ್ಮವ್ರೋ-ಅಲ್ಲವ್ರೋ ತಿಳಿಯುತ್ತಿರಲಿಲ್ಲ. ಆದರೂ ಇನ್‌ಸ್ಟಿಟ್ಯೂಟಿನ ಒಟ್ಟು ಅನುಭವ ಚೆನ್ನಾಗಿಯೇ ಇತ್ತು. ಜೊತೆಯ ಹುಡುಗರೂ ಸಹಕರಿಸಿದರು, ನಮ್ಮೊಡನೆ ಸಹಜವಾಗಿ ವರ್ತಿಸಿದರು.



**ನೇಮಿಚಂದ್ರ:** ಆ ಪ್ರೊಫೆಸರ್ ನಿಮಗೇನೂ ಕಿರುಕುಳ ಕೊಡಲಿಲ್ಲವೆ?

**ಡಾ॥ ನಳಿನಿ** ಓಹ್, ತುಂಬಾನೇ ಗೋಳು ಹೊಯ್ದುಕೊಂಡರು. ಮೊದಲ ವರ್ಷವಂತೂ ಕೋರ್ಸ್ ಬಿಟ್ಟು ಬಿಡೋಣ ಅನಿಸುವಷ್ಟು ಕಾಟ ಕೊಟ್ಟರು. ಮತ್ತೇನಿಲ್ಲ, ಕ್ಲಾಸಿಗೆ ಐದು



ಡಾ॥ ನಳಿನಿ, ಅವರ ಮಗ, ಚಿಕ್ಕಮ್ಮ, ಚಿಕ್ಕಪ್ಪ

ನಿಮಿಷ ತಡವಾಗಿ ಹೋದೆ ಅಂದುಕೊಳ್ಳಿ 'ಹುಡುಗಿಯರೇ ಹೀಗೆ, ಅವರಿಗೆ ಸಮಯ ಪ್ರಜ್ಞೆಯೇ ಇರೋಲ್ಲ'. ಅಂತಾ ಹುಡುಗಿಯರನ್ನೆಲ್ಲ ಒಟ್ಟಿಗೇ ಮೂಟೆಗಟ್ಟಿ ಸಾರ್ವತ್ರಿಕವಾಗಿ ದೂರಿ ಬಿಡ್ತಾ ಇದ್ದರು. ಯಾವುದಾದರೂ ಪರೀಕ್ಷೆಯಲ್ಲಿ ಅಂಕ ಕಮ್ಮಿ ಬಂತು, 'ಹುಡುಗಿಯರಿಗೆಲ್ಲ ಇಂಜಿನಿಯರಿಂಗ್ ಆಗೋಲ್ಲ' ಅನ್ನೋ ಕೊಂಕು ಮಾತು. ಸಾಲದಕ್ಕೆ ನಮ್ಮ ತಂದೆ ಗಣ್ಯ ಇಂಜಿನಿಯರ್ ಆಗಿದ್ದರು. ನಾನೇನಾದರೂ ತಪ್ಪು ಮಾಡಿದರೆ 'ಎಂ. ಆರ್. ಸೀತಾರಾಮ್ ಮಗಳು, ನಿನಗೆ ಬರೋಲ್ವೆ?' ಅನ್ನೋರು. ನನಗೇನು ಇಂಜಿನಿಯರಿಂಗ್ 'ಜೀನ್'ನಲ್ಲಿ ಬರಲು ಸಾಧ್ಯವಿತ್ತೆ?

**ನೇಮಿಚಂದ್ರ:**

ಅಂತೂ ಹುಡುಗರೆದುರು ಇಂಥಾ ಟೀಕೆಗಳು ಬಹಳ ನೋಯಿಸಿರಬೇಕು. ಹೊಸ ರಂಗಗಳಿಗೆ ಪ್ರವೇಶಿಸಿದ ಹುಡುಗಿಯರ ಮೇಲೆ ಅಖಂಡ ಜವಾಬ್ದಾರಿ ಇರುತ್ತೆ. ಅವರ ಪ್ರತಿ ಸೋಲು, ಅವರೊಬ್ಬರ ವೈಯಕ್ತಿಕ ಸೋಲಾಗೋದಿಲ್ಲ, ಇಡೀ ಹೆಣ್ಣು ಕುಲದ ಸೋಲಾಗಿ, ಕೊರತೆಯಾಗಿ ಪರಿಗಣಿಸಲ್ಪಡುತ್ತದೆ.

**ಡಾ॥ ನಳಿನಿ:**

ಅದು ನಿಜ, ಆದರೂ ಇನ್‌ಸ್ಟಿಟ್ಯೂಟ್ ಒಂದು ತರಹಾ ಚೆನ್ನಾಗಿಯೇ ಇತ್ತು. 1960 ರಲ್ಲಿ ಡಿ. ಐ. ಐ. ಎಸ್‌ಸಿ ಗಳಿಸಿದೆ. ಅದಾದ ಕೂಡಲೇ ಜರ್ಮನಿಯಲ್ಲಿ ಕೆಲಸದ ಅವಕಾಶ ಸಿಕ್ಕಿತು. ಅಷ್ಟರಲ್ಲಿ ನನ್ನ ವಿವಾಹವೂ ಗೊತ್ತಾಯಿತು. ಎಂಥಾ ಕಾಕತಾಳೀಯ ನೋಡಿ, ಆತ ಕೂಡಾ ಜರ್ಮನಿಯಲ್ಲಿ ಇದ್ದರು. ಮದುವೆಯಾಗುವಷ್ಟರಲ್ಲಿ ನನ್ನ ವೀಸಾ ಎಲ್ಲಾ ತಯಾರಾಗಿಬಿಟ್ಟಿತ್ತು. ಅಲ್ಲಿ ಎಂಟು ತಿಂಗಳು ಕೆಲಸ ಮಾಡಿದೆ. ಅದಾದ ಮೇಲೆ ನನ್ನ ಪತಿ ಇಂಗ್ಲೆಂಡಿಗೆ ಹೋದರು. ಅವರೂ ಇಂಜಿನಿಯರ್. ಆಗಲೇ ನನ್ನ ಮೊದಲ ಮಗನ ಜನನವೂ ಆಗಿತ್ತು. ಎರಡು ತಿಂಗಳು ವಿಶ್ರಾಂತಿ ಪಡೆದೆ, ನಂತರ 'ಮ್ಯಾಂಚೆಸ್ಟರ್ ವಿಶ್ವವಿದ್ಯಾಲಯ'ದಲ್ಲಿ 'ಕಂಟ್ರೋಲ್ ಇಂಜಿನಿಯರಿಂಗ್'ನಲ್ಲಿ ಎಂ. ಎಸ್ಸಿ.ಗೆ ಸೇರಿಕೊಂಡೆ. ಎಂ. ಎಸ್ಸಿ. ಮುಗಿಸೋಕೆ ಒಂದು ವರ್ಷ ಹಿಡಿಯಿತು. ಅಲ್ಲಿ ಹೊರದೇಶದ ವಿದ್ಯಾರ್ಥಿಗಳು ಸಾಮಾನ್ಯವಾಗಿ ಒಂದೂವರೆ ವರ್ಷ ಎಂ. ಎಸ್ಸಿ. ಮಾಡಬೇಕಿತ್ತು. ಆದರೆ ಒಂದು ವರ್ಷಕ್ಕೆ ನನ್ನ ಥೀಸೀಸ್ ಮುಗಿದಿತ್ತು. 'ವಿದೇಶಿ ವಿದ್ಯಾರ್ಥಿಗಳು 18 ತಿಂಗಳು ಕಡ್ಡಾಯ ಇರಬೇಕು' ಎಂದು ನನ್ನ ಡಿಗ್ರಿ ಕೊಡಲು ನಿರಾಕರಿಸಿದರು. ಆಗ ನನ್ನ ಸೂಪರ್‌ವೈಸರ್ ನನ್ನ ಸಹಾಯಕ್ಕೆ ಬಂದರು. 'ಆಕೆ ಕೆಲಸ ಮುಗಿಸಿರೋವಾಗ ಏಕೆ ಕೊಡೋಲ್ಲ?' ಎಂದೆಲ್ಲ ವಾದಿಸಿ, ಅಂತೂ ಒಂದೇ ವರ್ಷಕ್ಕೆ ಎಂ. ಎಸ್ಸಿ. ದೊರೆಯಿತು.

**ನೇಮಿಚಂದ್ರ:**

ಅಲ್ಲಿ ಇಂಜಿನಿಯರಿಂಗ್ ವಿಭಾಗದಲ್ಲಿ ಮಹಿಳೆಯರಿದ್ದರೆ? ನಿಮಗೆ ಅಲ್ಲಿ ಇಂಜಿನಿಯರಿಂಗ್ ಸೇರಲು ಪ್ರೋತ್ಸಾಹ ಇತ್ತೆ?

**ಡಾ॥ ನಳಿನಿ:**

ನನ್ನ ವಿಭಾಗದ ಮುಖ್ಯಸ್ಥರು ಹೇಳ್ತಾ ಇದ್ದರು– 'ನೀನು ಇಂಜಿನಿಯರಿಂಗ್ ವಿಭಾಗದಲ್ಲಿ ನಾವು ತೆಗೆದುಕೊಂಡ ಮೊದಲ ಮಹಿಳೆ. ನೀನೇನಾದರೂ ಚೆನ್ನಾಗಿ ಮಾಡದೇ ಹೋಗಿದ್ರೆ ನಾವು ಮತ್ತೆ ಹುಡುಗಿಯರನ್ನು ತಗೊಳ್ತಾ ಇರಲಿಲ್ಲ.'

**ನೇಮಿಚಂದ್ರ:**

ಅಲ್ಲಿ ನೀವು ಭಾರತೀಯ ಮಹಿಳೆಯ ಪ್ರತಿನಿಧಿ ಆಗಿ ಅಲ್ಲ ಇಡೀ ಪ್ರಪಂಚದ ಮಹಿಳೆಯರನ್ನು ಪ್ರತಿನಿಧಿಸಿದ್ದಿರಿ ಅನ್ನಿ.

**ಡಾ॥ ನಳಿನಿ:** ಹೌದು. ಎಂ. ಎಸ್ಸಿ ಮುಗಿಸಿ ಭಾರತಕ್ಕೆ ಹಿಂತಿರುಗಿದೆವು. ಒಂದಷ್ಟು ದಿನ ಬಾಂಬೆಯಲ್ಲಿ ಟಿ ಐ ಎಫ್ ಆರ್ ನಲ್ಲಿ ಕೆಲಸ ಮಾಡಿದೆ. ಅಷ್ಟರಲ್ಲಿ ಕೆನಡಾದ 'ಹ್ಯಾಲೀಫಾಕ್ಸ್ ವಿಶ್ವವಿದ್ಯಾಲಯ'ದಲ್ಲಿ ನನಗೆ ಪಿ. ಎಚ್. ಡಿ. ಗೆ ಅವಕಾಶ ಸಿಕ್ಕಿತು. ಹಾಗಾಗಿ ನಾವಿಬ್ಬರೂ ಕೆನಡಾಗೆ ಹೊರಟೆವು. ಪಿ. ಎಚ್. ಡಿ ಮೂರೂವರೆ ವರ್ಷಕ್ಕೆ ಮುಗಿಯಿತು. ಮಧ್ಯೆ ನನ್ನ ಎರಡನೇ ಮಗ ಹುಟ್ಟಿದ. ಮಗುವನ್ನೇನೋ ಥೀಸೀಸ್ ಮುಗಿದ ಮೇಲೆ ಹುಟ್ಟುವಂತೆ ಯೋಜಿಸಿದ್ದೆ. ಆದರೆ ಥೀಸಿಸ್ ತಡವಾಯ್ತು, ಮಗು ಕಾಯಬೇಕಲ್ಲ! ಈ ವಿಶ್ವವಿದ್ಯಾಲಯದಿಂದ ಪಿ. ಎಚ್. ಡಿ. ಪಡೆದ ಮೂರನೇ ವಿದ್ಯಾರ್ಥಿ ನಾನು. ಇಲ್ಲಿಂದ ಪಿ. ಎಚ್. ಡಿ. ಪಡೆದ ಮೊದಲ ಮಹಿಳಾ ವಿದ್ಯಾರ್ಥಿ.

**ನೇಮಿಚಂದ್ರ:** ಎಲ್ಲಾ ಕಡೆಯೂ ನೀವು ಪ್ರಥಮ ಮಹಿಳೆಯಾಗಿ ದಾಖಲೆ ಸ್ಥಾಪಿಸಿದ್ರಿ. ಕೆನಡಾದ ವಾತಾವರಣ ಹೇಗಿತ್ತು ಹೇಳಿ.

**ಡಾ॥ ನಳಿನಿ:** ಇಲ್ಲಿ ಅಂಥ ಪೂರ್ವಗ್ರಹಗಳು ಕಾಣಲಿಲ್ಲ. ಇಲ್ಲಿ Professional Engineers Association ಇದೆ. ಇಂಜಿನಿಯರ್ ಆಗಿ ಪ್ರಾಕ್ಟೀಸ್ ಮಾಡಬೇಕೆಂದರೆ ಇದರ ಸದಸ್ಯರಾಗಲೇಬೇಕು. 1970 ರಲ್ಲಿ ನನಗೆ ಸದಸ್ಯತ್ವ ಸಿಕ್ಕಿತು. ಆ ಅಸೋಸಿಯೇಷನ್‌ನ ಹದಿನೈದು ವರ್ಷಗಳ ಇತಿಹಾಸದಲ್ಲಿ ಸದಸ್ಯತ್ವ ಪಡೆದ ಮೊದಲ ಮಹಿಳೆ ನಾನಾಗಿದ್ದೆ. ಅದಕ್ಕೆ ಅವರು ಒಂದು ವಿಶೇಷ ಕಾರ್ಯಕ್ರಮ ಏರ್ಪಡಿಸಿ, ನನ್ನನ್ನು ಸ್ವಾಗತಿಸಿದರು. ಪೇಪರ್‌ನಲ್ಲೆಲ್ಲಾ ಹಾಕಿಸಿದ್ದರು.

**ನೇಮಿಚಂದ್ರ:** ನೀವು ಮೊಟ್ಟ ಮೊದಲಿಗೆ ಇಂಜಿನಿಯರಿಂಗ್ ರಂಗವನ್ನು ಆಯ್ದುಕೊಂಡಾಗ ಎದುರಾದ ಪ್ರತಿಕೂಲ ಪ್ರತಿಕ್ರಿಯೆಯ ನೆನೆಸಿಕೊಂಡರೆ, ಇಂಥಾ ಅದ್ಭುತ ಸ್ವಾಗತ ಖುಷಿ ಕೊಟ್ಟಿರಬೇಕು ಅಲ್ಲವೆ?

> "ನಿಮ್ಮ ಪತಿ ಒಳ್ಳೆ ಸರಕಾರಿ ಹುದ್ದೆಯಲ್ಲಿದ್ದಾರೆ. ಒಳ್ಳೆ ಸಂಬಳ ಸೌಲಭ್ಯಗಳಿವೆ. ನೀವು ಏತಕ್ಕೆ ಖಾಯಂ ಆಗಬೇಕು ಅಂತಾ ಒದ್ದಾಡ್ತೀರಿ? ನಿಮಗೆ ನಿವೃತ್ತಿ ಆಗೋವರೆಗೂ ನೀವು ಇಲ್ಲಿ ಕಾಂಟ್ರಾಕ್ಟ ಮೇಲೆ ಇರಬಹುದು."

**ಡಾ॥ ನಳಿನಿ:** ಖಂಡಿತಾ...

**ನೇಮಿಚಂದ್ರ:** ಮುಂದೇನು ಮಾಡಿದ್ರಿ?

**ಡಾ॥ ನಳಿನಿ:** ನನ್ನ ಪತಿ ಎಂ. ಎಸ್ಸಿ. ಮಾಡಿದ್ರು. ಅಲ್ಲಿಯ 'ಯುಟಿಲಿಟೀಸ್'ನಲ್ಲಿ ಕೆಲಸದಲ್ಲಿದ್ದರು. ಇಲ್ಲಿಯ ಕೆ. ಇ. ಬಿ. ತರಹದ ಸರ್ಕಾರಿ ಉದ್ಯೋಗ ಅದು. ಅಲ್ಲಿಂದ ಜಾಂಬಿಯಾಗೆ ಹೊರಟರು. ನನ್ನ ಪಿ. ಎಚ್. ಡಿ. ಆಗ ಇನ್ನೂ ಮುಗಿದಿರಲಿಲ್ಲ. ಮಕ್ಕಳೊಂದಿಗೆ ಉಳಿದೆ. ಪಿ. ಎಚ್. ಡಿ. ಮುಗಿಸಿ ನಾನೂ ಜಾಂಬಿಯಾಗೆ ಹೋದೆ.

**ನೇಮಿಚಂದ್ರ:** ನಿಮ್ಮದು ಬಹಳವೇ ಸಾಹಸಮಯ ಬದುಕು. ಮದುವೆ-ಮಕ್ಕಳ ನಡುವೆಯೇ ನಿಮ್ಮ ಗುರಿ ಬಿಡದೆ ಎಂ. ಎಸ್ಸಿ, ಪಿ. ಎಚ್. ಡಿ. ಮುಗಿಸಿದಿರಿ. ಜಾಂಬಿಯಾದಲ್ಲಿ ನೀವು ಎಲ್ಲಿ ಸೇರಿಕೊಂಡಿರಿ?

**ಡಾ॥ ನಳಿನಿ:** ಅಲ್ಲಿ ಜಾಂಬಿಯಾ ವಿಶ್ವವಿದ್ಯಾಲಯದಲ್ಲಿ ಕಂಪ್ಯೂಟರ್ ವಿಭಾಗದಲ್ಲಿ ಕೆಲಸ ಖಾಲಿ ಇತ್ತು. ಕಂಪ್ಯೂಟರ್ ವಿಭಾಗವನ್ನು ಪೂರ್ಣ ರೂಪದಲ್ಲಿ ಸುಧಾರಿಸಿದೆ. 1980 ರಲ್ಲಿ ನಾನು ಜಾಂಬಿಯಾ ಬಿಡುವಾಗ ಅಲ್ಲಿ ಕಂಪ್ಯೂಟರ್ ವಿಭಾಗ, ಸ್ನಾತಕೋತ್ತರ ಪದವಿ ನೀಡುವಷ್ಟು ಪ್ರಗತಿ ಸಾಧಿಸಿತ್ತು.

> 65 ವರ್ಷಕ್ಕೆ ಅಂತಾ ಲೆಕ್ಕ. ಆದರೆ ನಿವೃತ್ತಿ ಕಡ್ಡಾಯವಲ್ಲ. ದೈಹಿಕವಾಗಿಯೋ ಮಾನಸಿಕವಾಗಿಯೋ ಅಶಕ್ತರಾದರೆ ಮಾತ್ರ ನಿವೃತ್ತಿಯನ್ನು ಹೇರಬಲ್ಲರು. ಇಲ್ಲದಿದ್ದರೆ ನಿಮಗೆ ಬೇಕು ಅಂದಷ್ಟು ವರ್ಷವೂ ದುಡಿಯಬಹುದು. ದುಡಿಮೆಯನ್ನು ಮಾನವೀಯ ಹಕ್ಕು ಅಂತಾ ಭಾವಿಸುತ್ತಾರೆ.

**ನೇಮಿಚಂದ್ರ:** ಆದಾಗಲೇ ಕಂಪ್ಯೂಟರ್ ಯುಗದ ಆರಂಭ ಅಲ್ಲವೆ? ಭಾರತದಲ್ಲಿ ಕಳೆದ ದಶಕದಲ್ಲಿ ಕಂಪ್ಯೂಟರ್ ದಾಳಿ ಕಂಡಿದ್ದೇವೆ. ಜಾಂಬಿಯಾ ಬಿಟ್ಟ ಮೇಲೆ ಏನು ಮಾಡಿದ್ರಿ?

**ಡಾ॥ ನಳಿನಿ:** ಮತ್ತೆ ಕೆನಡಾಗೆ ಬಂದೆವು. ಆಲ್‌ಬರ್ಟಾ ವಿಶ್ವವಿದ್ಯಾಲಯದಲ್ಲಿ ಪ್ರಾಧ್ಯಾಪಕಳಾಗಿ ಸೇರಿಕೊಂಡೆ. ಆರು ವರ್ಷಗಳು ಅಲ್ಲಿ ಕಲಿಸಿದೆ. ಈಗ 'ನ್ಯೂ ಕ್ಯಾಲಡೋನಿಯಾ ಕಾಲೇಜ'ನಲ್ಲಿ ಐದು ವರ್ಷಗಳಿಂದ ದುಡಿಯುತ್ತಿದ್ದೇನೆ. ಇನ್ನು ಇಲ್ಲಿಯೇ ನಿವೃತ್ತಿ.

**ನೇಮಿಚಂದ್ರ:** ಆಲ್‌ಬರ್ಟಾ ವಿಶ್ವವಿದ್ಯಾಲಯವನ್ನು ಏಕೆ ಬಿಟ್ಟಿರಿ?

**ಡಾ॥ ನಳಿನಿ:** ಅಲ್ಲಿ ನೋಡಿ. ನನ್ನ ನೌಕರಿ ಖಾಯಂ ಇರಲಿಲ್ಲ. ವರ್ಷ ವರ್ಷ 'ಟೀಚಿಂಗ್ ಕಾಂಟ್ರಾಕ್ಟ್' ಕೊಡ್ತಾ ಇದ್ದರು. ನನ್ನ ವಿದ್ಯಾರ್ಥಿಗಳಿಗೆ ನನ್ನ ಪಾಠ ತುಂಬಾ ಹಿಡಿಸಿತ್ತು. ನನಗೆ ಬರುತ್ತಿದ್ದ 'ಸ್ಟೂಡೆಂಟ್ಸ್ ರೆವ್ಯೂ' ಚೆನ್ನಾಗಿತ್ತು. ಹೀಗಿದ್ದರೂ ನನ್ನ ಕೆಲಸ ಖಾಯಂ ಮಾಡಿರಲಿಲ್ಲ. ಅಲ್ಲಿಯ ಮುಖ್ಯಸ್ಥರನ್ನು ಹೋಗಿ ಕೇಳಿದಾಗ 'ನಿಮ್ಮ ಪತಿ ಒಳ್ಳೆ ಸರಕಾರಿ ಹುದ್ದೆಯಲ್ಲಿದ್ದಾರೆ. ಒಳ್ಳೆ ಸಂಬಳ, ಸೌಲಭ್ಯಗಳಿವೆ. ನೀವು ಏತಕ್ಕೆ ಖಾಯಂ ಆಗಬೇಕು ಅಂತಾ ಒದ್ದಾಡ್ತೀರಿ? ನಿಮಗೆ ನಿವೃತ್ತಿ ಆಗೋವರೆಗೂ ನೀವು ಇಲ್ಲಿ ಕಾಂಟ್ರಾಕ್ಟ್ ಮೇಲೆ ಇರಬಹುದು' ಎಂದು ಬಿಟ್ಟರು.

**ನೇಮಿಚಂದ್ರ:** ಅಂದರೆ, ಅಲ್ಲಿಯೂ ಹೆಣ್ಣಿನ ನೌಕರಿ, ಏನಿದ್ದರೂ ಸೆಕೆಂಡರಿ ಅನ್ನೋ ಭಾವನೆಯೇ?

**ಡಾ॥ ನಳಿನಿ:** ಹೌದು, ಆಗಲೇ ನಾನು ಆಲ್‌ಬರ್ಟಾ ವಿಶ್ವವಿದ್ಯಾಲಯ ಬಿಟ್ಟದ್ದು. ಎಲ್ಲಾ ಪುರುಷ ಪ್ರಧಾನ ರಂಗಗಳಲ್ಲಿಯೂ ಸ್ತ್ರೀಯರ ಸ್ಥಿತಿ ಹೀಗೆಯೇ ಇದೆ. ಆಲ್‌ಬರ್ಟಾದಲ್ಲಿ 17 ವರ್ಷಗಳ ಕಾಲ 'ಕಾಂಟ್ರಾಕ್ಟ್' ಮೇಲೆ ದುಡೀತಾ ಇರೋ ಮಹಿಳೆಯರಿದ್ದಾರೆ. ಇಲ್ಲಿ ಸುಭದ್ರತೆಯ ಕೆಲಸಗಳೆಂದರೆ ಸರಕಾರಿ ನೌಕರಿಗಳು, ಇಲ್ಲಾ ವಿಶ್ವವಿದ್ಯಾಲಯದ ಕೆಲಸಗಳು. ಉಳಿದಂತೆ ನಿಮ್ಮ ಬಾಸ್ ಶನಿವಾರ ಕರೆದು 'ಸೋಮವಾರದಿಂದ ಬರಬೇಡಿ' ಅಂತ ಹೇಳಿಬಿಡಬಹುದು. ಈ ಕಾಂಟ್ರಾಕ್ಟ್‌ನಲ್ಲಿ ನೋಡಿ, ಒಂದು ವರ್ಷದಲ್ಲಿ ಎರಡು ತಿಂಗಳು ಸಂಬಳ ಬರುತ್ತಿರಲಿಲ್ಲ. ಪ್ರತಿ ಜನವರಿಗೆ 'ಏನಪ್ಪಾ ಕಾಂಟ್ರಾಕ್ಟ್ ಮುಂದುವರೆಸುತ್ತೀರಾ?' ಅಂತಾ ಹೋಗಿ ಬೇಡಬೇಕಿತ್ತು. ಖಾಯಂ ಮಾಡೋಲ್ಲ ಅಂತಾ ಗೊತ್ತಾದ ಕೂಡಲೇ ವಿಶ್ವವಿದ್ಯಾಲಯ ಬಿಟ್ಟೆ, ಕ್ಯಾಲಡೋನಿಯಾ ಕಾಲೇಜಿಗೆ ಸೇರಿಕೊಂಡೆ.

**ನೇಮಿಚಂದ್ರ:** ಅಂತೂ ನಿಮ್ಮ ಕೇರಿಯರ್ ಏರು-ತಗ್ಗುಗಳನ್ನು ದಾಟಿ ಒಂದು ಸಮತಟ್ಟಿಗೆ ಬಂದು ನಿಂತಿದೆ.

**ಡಾ॥ ನಳಿನಿ:** ನಿಜ, ನನ್ನ ಪತಿ ಹೇಳ್ತಾ ಇರ್‍ತಾರೆ 'ಇನ್ನೂ ಎಷ್ಟು ದಿನ ದುಡಿಯೋದು. ಕೆಲಸ ಬಿಟ್ಟುಬಿಡು' ಅಂತಾರೆ. ನಾ ಹೇಳ್ತೀನಿ 'ಇಷ್ಟು ದಿನ ಕಷ್ಟಪಟ್ಟುಕೊಂಡು ಕೆಲಸ



# ಕಥೆಗೊಂದು ಚಿತ್ರ

ಆಯ್ಕೆಯಾದ ಕಥೆಗಳಿಗೆ ಚಿತ್ರ ಹಾಕಿ ಪ್ರಕಟಿಸುವುದು ವಾಡಿಕೆ. ಈಗ ಲೇಖಕಿಯರಿಗೆ ಇಲ್ಲಿ ಚಿತ್ರವೊಂದನ್ನು ಕೊಟ್ಟಿದ್ದೇವೆ. ಈ ಚಿತ್ರಕ್ಕೆ ಸೂಕ್ತ ಕಥೆಯನ್ನು ಬರೆದು ಕಳಿಸಲು ಈ ಮೂಲಕ ಕೋರುತ್ತಿದ್ದೇವೆ. ಕಥೆ ಎರಡು ಫೂಲ್‌ಸ್ಕೇಪ್ ಹಾಳೆಯ ಒಳಗಿರಬೇಕಾದುದು ಅಗತ್ಯ. ಆಯ್ದ ಮೂರು ಕಥೆಗಳನ್ನು ಪ್ರಕಟಿಸಲಾಗುವುದು. ಪ್ರಕಟಿತ ಪ್ರತಿಯೊಂದು ಕಥೆಗೂ 50/– ರೂ. ಸಂಭಾವನೆ ಇದೆ. ಕಥೆಗಳನ್ನು ಹಿಂದಿರುಗಿಸಲಾಗುವುದಿಲ್ಲವಾದುದರಿಂದ ಅಂಚೆ ಚೀಟಿಗಳನ್ನು ಅಂಟಿಸಿ ಕಳಿಸಬಾರದಾಗಿ ಕೋರಲಾಗಿದೆ.

ಕಥೆಗಳು ಬಂದು ತಲುಪುವ ಕೊನೆಯ ದಿನಾಂಕ 20– 5 -1992.

ಮಾಡ್ದೆ. ಮಕ್ಕಳು ಚಿಕ್ಕವರಿದ್ದರು. ಈಗ ದೊಡ್ಡವರಾಗಿದ್ದಾರೆ. ಹಾಯಾಗಿ, ಆರಾಮಾಗಿ ಕೆಲಸ ಮಾಡ್ತೀನಿ.'

**ನೇಮಿಚಂದ್ರ :** ನಿಮ್ಮಲ್ಲಿ ನಿವೃತ್ತಿಯ ವಯಸ್ಸೇನು ?

**ಡಾ॥ ನಳಿನಿ :** 65 ವರ್ಷಕ್ಕೆ ಅಂತಾ ಲೆಕ್ಕ. ಆದರೆ ನಿವೃತ್ತಿ ಕಡ್ಡಾಯವಲ್ಲ. ದೈಹಿಕವಾಗಿಯೋ, ಮಾನಸಿಕವಾಗಿಯೋ ಅಶಕ್ತರಾದರೆ ಮಾತ್ರ ನಿವೃತ್ತಿಯನ್ನು ಹೇರಬಲ್ಲರು. ಇಲ್ಲದಿದ್ದರೆ ನಿಮಗೆ ಬೇಕು ಅಂದಷ್ಟು ವರ್ಷವೂ ದುಡಿಯಬಹುದು. ದುಡಿಮೆಯನ್ನು ಮಾನವೀಯ ಹಕ್ಕು ಅಂತಾ ಭಾವಿಸುತ್ತಾರೆ.

**ನೇಮಿಚಂದ್ರ :** ನಿಮ್ಮ ವಿದ್ಯಾಭ್ಯಾಸ–ವೃತ್ತಿ ಜೀವನದ ಒಂದು ಚಿತ್ರ ಸಿಕ್ಕಿತು. ನಿಮ್ಮ ವೈಯಕ್ತಿಕ ಬದುಕಿನ ಬಗ್ಗೆ ಒಂದಿಷ್ಟು ತಿಳಿಯಬಹುದಲ್ಲಾ? ನಿಮ್ಮ ಹೆಚ್ಚಿನ ವಿದ್ಯಾಭ್ಯಾಸ, ನಿಮ್ಮ ವಿವಾಹಕ್ಕೆ ಅಡ್ಡಿ ಆಗಲಿಲ್ಲವೆ? ಈಗಲೂ ಹೆಚ್ಚು ಓದಿದ ಹುಡುಗಿ ಬೇಡ ಅನ್ನೋರಿದ್ದಾರೆ.

**ಡಾ॥ ನಳಿನಿ :** ನನ್ನ ಇಷ್ಟು ವಿದ್ಯಾಭ್ಯಾಸ ನನ್ನ ವಿವಾಹಕ್ಕೇನೂ ತೊಡಕಾಗಲಿಲ್ಲ. ಭಾರತದಲ್ಲಿಯೇ ಇಂಥಹ ಪೂರ್ವಗ್ರಹಗಳು ಕಡಮೆ ಅನ್ನಬೇಕು. ಇಲ್ಲಿ ಪಾಶ್ಚಿಮಾತ್ಯರು, ಸ್ತ್ರೀಯರು ತೀರಾ ವೃತ್ತಿಪರರಾದರೆ ಇಷ್ಟಪಡೋಲ್ಲ. ಇಷ್ಟು ವರ್ಷ ಕಂಪ್ಯೂಟರ್ ವಿಭಾಗದಲ್ಲಿ ಪ್ರಾಧ್ಯಾಪಕಿ ಆಗಿದ್ದೀನಿ. 35–40 ಹುಡುಗರಿಗೆ ಮೂರೋ-ನಾಲ್ಕೋ ಹುಡುಗಿಯರಿರ್‍ತಾರೆ. ಹಾಗೆ ನೋಡಿದರೆ ಹುಡುಗಿಯರು ಕಂಪ್ಯೂಟರ್ ವಿಜ್ಞಾನವನ್ನು ಬಹಳ ಬೇಗ ಕಲೀತಾರೆ. ಹೀಗಿದ್ದೂ ಈ ಪರಿಸ್ಥಿತಿ.

**ನೇಮಿಚಂದ್ರ:** ವಿದೇಶಗಳಲ್ಲಿ ಹುಡುಗಿಯರನ್ನು ವಿಜ್ಞಾನ ತಂತ್ರಜ್ಞಾನದತ್ತ ಆಕರ್ಷಿಸಲು Wise, Gist ಅಂತಾ ಸಂಸ್ಥೆಗಳು ದುಡಿಯುತ್ತಿವೆ ಅಂತಾ ಕೇಳಿದ್ದೆ. ವಿದೇಶದಲ್ಲಿ ಮಹಿಳೆಯರು ದಂಡಿನಲ್ಲೂ ಸೇರ್ಪಡೆಯಾಗಿ ಯುದ್ಧರಂಗಕ್ಕೂ ನುಗ್ಗಿರುವುದನ್ನು ನೋಡಿದ್ದೇವೆ. ಹೀಗಾಗಿ ಮಹಿಳೆಯರು ಬಹಳ ಮುಂದುವರೆದಿದ್ದಾರೆ ಅಂದುಕೊಂಡಿದ್ದೆ, ಅದು ನಿಜ ಅಲ್ಲವೆ?

" ನಾವು ಹೆಂಗಸರನ್ನು ಪ್ರೋತ್ಸಾಹಿಸುತ್ತೇವೆ. ನಮ್ಮಲ್ಲಿ ಶೇಕಡಾ 40 ರಷ್ಟು ಮಹಿಳೆಯರಿದ್ದಾರೆ"..." ವಿಜ್ಞಾನ ರಂಗದಲ್ಲಿ ಹೆಂಗಸರ ಸಂಖ್ಯೆಯನ್ನು ದ್ವಿಗುಣಗೊಳಿಸಿದ್ದೇವೆ"... ಇಂಥ ಅಂಕಿಸಂಖ್ಯೆಗಳಿಂದ ನಿಜಸ್ಥಿತಿ ತಿಳಿಯೋಲ್ಲ. ಅಷ್ಟೇ ಅಲ್ಲ, ಇಲ್ಲಿ ವಿದೇಶದಲ್ಲಿ ಬಹಳಷ್ಟು ಕಡೆ ಮಹಿಳೆಯರಿಗೆ ಸಂಬಳವೂ ಕಡಿಮೆ. ಒಂದು ಪ್ರೊಫೆಸರ್ ಹುದ್ದೆಗೆ ಏರುವುದೂ ಕಷ್ಟ.

**ಡಾ॥ ನಳಿನಿ :** ಇಲ್ಲಿ ಇದು ಸತ್ಯವಲ್ಲ. ಒಂದು ರೀತಿ ಸುಳ್ಳು ಪ್ರಚಾರ ಅನ್ನಬೇಕು. ಮೊನ್ನೆ ನೋಡಿ ನಮ್ಮ ಕಾಲೇಜಿನವರು ಒಂದು ವರದಿಯಲ್ಲಿ 'ನಾವು ಹೆಂಗಸರನ್ನು ಪ್ರೋತ್ಸಾಹಿಸುತ್ತೇವೆ. ನಮ್ಮಲ್ಲಿ ಶೇಖಡಾ 40 ರಷ್ಟು ಮಹಿಳೆಯರಿದ್ದಾರೆ' ಅಂತಾ ಹೇಳಿದ್ದರು. ಕುತೂಹಲದಿಂದ ಒಂದಿಷ್ಟು ತನಿಖೆ ಮಾಡಿದಾಗ, ವಿಜ್ಞಾನ ಮತ್ತು ತಂತ್ರಜ್ಞಾನದಲ್ಲಿ ಕೇವಲ ಇಬ್ಬರು ಮಹಿಳೆಯರಿದ್ದಾರೆ. ಉಳಿದಂತೆ ಹೆಂಗಸರು ಗುಮಾಸ್ತರಾಗಿ, ವಯಸ್ಕ ಶಿಕ್ಷಣದಲ್ಲಿ, ಕುಟುಂಬ ಸಲಹಾ ವಿಭಾಗಗಳಲ್ಲಿ ಕೆಲಸ ಮಾಡುತ್ತಿದ್ದಾರೆ. ಮೊನ್ನೆ 1990 ರಲ್ಲಿ ವಿಜ್ಞಾನ, ತಂತ್ರಜ್ಞಾನ ವಿಭಾಗಗಳಗೆ ಮತ್ತಿಬ್ಬರು ಹೆಂಗಸರನ್ನು ತೆಗೆದುಕೊಂಡರು. 'ವಿಜ್ಞಾನ ರಂಗದಲ್ಲಿ ಹೆಂಗಸರ ಸಂಖ್ಯೆಯನ್ನು ದ್ವಿಗುಣಗೊಳಿಸಿದ್ದೇವೆ' ಅಂತಾ ವರದಿಕೊಟ್ಟರು. ಇಂಥಾ ಅಂಕಿ-ಸಂಖ್ಯೆಗಳಿಂದ ನಿಜಸ್ಥಿತಿ ತಿಳಿಯೋಲ್ಲ. ಅಷ್ಟೇ ಅಲ್ಲ, ಇಲ್ಲಿ ವಿದೇಶದಲ್ಲಿ ಬಹಳಷ್ಟು ಕಡೆ ಮಹಿಳೆಯರಿಗೆ ಸಂಬಳ ಕಡಿಮೆ ಕೊಡ್ತಾರೆ. ಬಡ್ತಿಯ ಅವಕಾಶಗಳೂ ಬಹಳ ಕಡಿಮೆ. ಒಂದು ಪ್ರೊಫೆಸರ್ ಹುದ್ದೆಗೆ ಏರುವುದೂ ಅಷ್ಟು ಸುಲಭವಲ್ಲ. ಭಾರತದಲ್ಲಿ ನೋಡಿ, ಕಾಲೇಜುಗಳಲ್ಲಿ, ವಿಶ್ವವಿದ್ಯಾಲಯಗಳಲ್ಲಿ ಮಹಿಳಾ ಪ್ರೊಫೆಸರ್‌ಗಳು ಹೇರಳವಾಗಿ ಸಿಗ್ತಾರೆ. ವಿಭಾಗದ ಮುಖ್ಯಸ್ಥರಾಗಿ ದುಡಿದ ಯಥೇಚ್ಛ ಉದಾಹರಣೆಗಳಿವೆ.

**ನೇಮಿಚಂದ್ರ:** ಈ ವಿಷಯದಲ್ಲಿ ವಿದೇಶೀಯರೇ ಹೆಚ್ಚು ಸಾಂಪ್ರದಾಯಿಕ ಮನೋಭಾವದವರು ಅಂತೀರಾ ?

**ಡಾ॥ ನಳಿನಿ :** ಹೌದು. ಅದಕ್ಕಾಗಿಯೇ ಇಲ್ಲಿ ಸ್ತ್ರೀ ಸ್ವಾತಂತ್ರ್ಯ ಚಳುವಳಿ ಇಷ್ಟು ಶಕ್ತವಾಗಿರೋದು. ನಿಜ. ಇಲ್ಲಿ ವರದಕ್ಷಿಣೆ–ವಧೂದಹನದಂಥಹ ಶೋಷಣೆಗಳಿಲ್ಲ. ಆದರೆ ಬೇರೆ ಬಗೆಯ ತೊಡಕುಗಳಿವೆ. ಇದು ಮುಕ್ತಲೈಂಗಿಕತೆಯ ಸಮಾಜ. ಈ ಮುಕ್ತ ಲೈಂಗಿಕತೆಯಲ್ಲಿ ನರಳುವವರು, ತೊಂದರೆಗೆ ಸಿಕ್ಕಿ ಬೀಳುವವರು ಹುಡುಗಿಯರೇ. ಯೌವನದ ಭರಾಟೆಯಲ್ಲಿ ಎಳೆ ವಯಸ್ಸಿಗೇ ಗರ್ಭಿಣಿಯಾಗ್ತಾರೆ. ವಿದ್ಯಾಭ್ಯಾಸ ಅಲ್ಲಿಗೇ ನಿಲ್ಲುತ್ತೆ. ಬಸಿರು–ನಂತರ ಮಗುವಿನ ಪಾಲನೆ ಹೊರೆಯಾಗುತ್ತೆ. ಹುಡುಗ ಈ ಎಲ್ಲಾ ಜವಾಬ್ದಾರಿಗಳಿಂದ ಆರಾಮ ಜಾರಿಕೊಳ್ತಾನೆ. ಇಲ್ಲಿ ಗರ್ಭಪಾತ ಕಾನೂನುಬಾಹಿರ ಬೇರೆ.

**ನೇಮಿಚಂದ್ರ :** ಮುಕ್ತ ಲೈಂಗಿಕತೆ ಹುಡುಗಿಯರಿಗೇ ಬಹು ದೊಡ್ಡ ಸಮಸ್ಯೆಯಾಗಬಲ್ಲದು. ಆದರೆ ಕಾನೂನಿನ ರೀತಿಯಲ್ಲೂ ಹುಡುಗನ ಮೇಲೆ ಯಾವ ಹೊಣೆ ಇರುವುದಿಲ್ಲವೆ ?

**ಡಾ॥ ನಳಿನಿ :** ಕಾನೂನಿನ ಪ್ರಕಾರ ತಂದೆಯಾದವನು ಮಗುವಿನ ಪಾಲನೆಗೆ ಸಹಾಯ ಮಾಡಬೇಕು ಅಂತಿದೆ. ಆದರೆ ಬಲಾತ್ಕಾರವಾಗಿ ಈ ಆರ್ಥಿಕ ಬೆಂಬಲ ಪಡೆಯಲು ಸಾಧ್ಯವೆ ? ಇಲ್ಲಿ ನೋಡಿ. ತೀರಾ ಚಿಕ್ಕ ವಯಸ್ಸಿಗೆ 'ಡೇಟಿಂಗ್' ಪ್ರಾರಂಭವಾಗುತ್ತದೆ. ತಂದೆ-ತಾಯಿ ಮತ್ತು ಮಕ್ಕಳ ನಡುವಿನ

(52ನೇ ಪುಟ ನೋಡಿ)



## ವರ್ಷದ ಮಹಿಳೆ ಎಂ. ಎಸ್. ಸುಬ್ಬುಲಕ್ಷ್ಮಿ

ಖ್ಯಾತಗಾಯಕಿ ಎಂ.ಎಸ್ ಸುಬ್ಬುಲಕ್ಷ್ಮಿ ಅವರಿಗೆ ದಿ. 27-3-1992 ರಂದು ಮದರಾಸಿನಲ್ಲಿ ಅಂತಾರಾಷ್ಟ್ರೀಯ ಮಹಿಳಾ ಸಂಸ್ಥೆ "ವರ್ಷದ ಮಹಿಳೆ" ಪ್ರಶಸ್ತಿ ನೀಡಿ ಗೌರವಿಸಿತು.

ಭಾರತೀಯರು ತಮ್ಮನ್ನು [illegible]

ನಿರ್ಮಲಾ ಶೇಷಾದ್ರಿಯವರು ತನು-ಮನ ಧನಗಳಿಂದ ಸಮಾಜ ಸೇವೆ ಮಾಡುತ್ತಿರುವ ಸುಬ್ಬುಲಕ್ಷ್ಮಿಯವರಿಗೆ ಅಂತಾರಾಷ್ಟ್ರೀಯ ಮಹಿಳಾ ಸಂಘ ಅಭಿನಂದಿಸುತ್ತದೆ ಎಂದರು. "ವರ್ಷದ ಮಹಿಳೆ" ಸುಬ್ಬುಲಕ್ಷ್ಮಿ ಅವರಿಗೆ 'ವನಿತಾ'ದ ಹಾರ್ದಿಕ ಶುಭಾಶಯಗಳು.

ವರ್ಣಚಿತ್ರ :
ಕೇಶವನ್

# ಅಂಗವಿಕಲತೆಯನ್ನು ಮೆಟ್ಟಿ ನಿಂತ ವನಿತೆ
## ಸಿ.ಎನ್. ಜಾನಕಿ









ಲಂಡನ್ನಿನ ಇಂಗ್ಲೀಷ್ ಕಡಲ್ಗಾಲುವೆಯನ್ನು ದಾಟಲು ಭಾರತ ಸರಕಾರ ಹಾಗೂ ಇಂಗ್ಲೀಷ್ ಕಡಲ್ಗಾಲುವೆ ಸಂಘದವರಿಂದ ಇದೀಗ ಅನುಮತಿಯನ್ನು ಪಡೆದಿರುವ ಜಾನಕಿಯವರು ಇಂಗ್ಲೀಷ್ ಕಡಲ್ಗಾಲುವೆ ದಾಟಲಿರುವ ವಿಶ್ವದ ಪ್ರಪ್ರಥಮ ಅಂಗವಿಕಲ ಮಹಿಳೆ ಎನ್ನುವ ಖ್ಯಾತಿಯನ್ನು ಪಡೆದಿದ್ದಾರೆ.

---

ಅಂಗವಿಕಲತೆ ಒಂದು ಮಹಾಶಾಪವೆಂದು ಪರಿಗಣಿಸಿ ತಮಗೆ ಬಂದ ಅಂಗವೈಕಲ್ಯಕ್ಕಾಗಿ ಕೊರಗಿ, ತಮಗಿನ್ನು ಬಾಳೇ ಇಲ್ಲ ಎನ್ನುವ ನಿರಾಶೆಯಿಂದ ನಿಟ್ಟುಸಿರು ಬಿಡುವ ಮಂದಿ ಒಂದೆಡೆಯಾದರೆ, ಅಂಗವೈಕಲ್ಯವನ್ನು ಮೆಟ್ಟಿನಿಂತು, ಅಂಗ ಸಮರ್ಪಕತೆಯನ್ನು ಹೊಂದಿದವರಿಗಿಂತಲೂ ಹೆಚ್ಚಿನ ಸಾಧನೆಯನ್ನು ವಿವಿಧ ರಂಗಗಳಲ್ಲಿ ಮಾಡಿ ತೋರಿಸಿ ಇತರರು ಮೂಗಿನ ಮೇಲೆ ಬೆರಳಿಡುವಂತೆ ಮಾಡುವ ಮಂದಿ ಇನ್ನೊಂದೆಡೆ. ಬೆಂಗಳೂರಿನ ಸಿ. ಎನ್. ಜಾನಕಿಯವರು ಈ ಎರಡನೇ ವರ್ಗಕ್ಕೆ ಸೇರಿದ್ದಾರೆ. ವಿಧಿಯ ಕೈವಾಡದಿಂದಾಗಿ ತನ್ನ ಎರಡನೇ ವರ್ಷದಲ್ಲಿಯೇ ಪೋಲಿಯೋಗೆ ತುತ್ತಾಗಿ ತನ್ನೆರಡು ಕಾಲುಗಳನ್ನೂ ಕಳೆದುಕೊಂಡಿದ್ದರೂ ಎದೆಗುಂದದೇ, ಅದಕ್ಕಾಗಿ ವಿಧಿಯನ್ನು ಹಳಿಯದೇ ಧೈರ್ಯವಾಗಿ ಮುನ್ನಡೆದು ಈಜು ಕಲಿತ ಛಲಗಾತಿ.

ಇತ್ತೀಚೆಗೆ ಬೆಂಗಳೂರಿನ ಜ॥ ತಿಮ್ಮಯ್ಯ ಜಲ ಸಾಹಸ ಅಕಾಡೆಮಿಯಿಂದ ಆಯ್ಕೆಯಾಗಿ ಮಣಿಪಾಲದ 'ಮಾನಸ' ಪ್ರಕೃತಿ ವಿಜ್ಞಾನ ತಂಡದವರ ಆಹ್ವಾನದ ಮೇರೆಗೆ 21 ದಿನಗಳ ಆಳ ಸಮುದ್ರ ಈಜು ತರಬೇತಿಗಾಗಿ ಮಲ್ಪೆಗೆ ಬಂದಿದ್ದ ಅವರನ್ನು ಅವರ ಈ ಅಪೂರ್ವ ಸಾಧನೆಯ ಬಗ್ಗೆ ವನಿತಾ' ಓದುಗರಿಗಾಗಿ ಸಂದರ್ಶಿಸಿ, ವಿವರಗಳನ್ನಿಲ್ಲಿ ಕೊಡಲಾಗಿದೆ:

● ಜಾನಕಿಯವರೇ, ನೀವು ಎಂದಿನಿಂದ ಈಜು ಕ[illegible]ಲು ಪ್ರಾರಂಭಿಸಿದ್ರಿ ?

— ನಾನು ಈಜು ಕಲಿಯಲು ಪ್ರಾರಂಭಿಸಿ ತುಂಬಾ ವರ್ಷಗಳೇನೂ ಆಗಿಲ್ಲ. ಈಗ್ಯೆ 3—4 ವರ್ಷಗಳ ಹಿಂದೆ ಅಂದರೆ 1988 ರಲ್ಲಿ ಕಲಿಯೋಕೆ ಪ್ರಾರಂಭಿಸಿದೆ ಅಷ್ಟೇ.

● ಎರಡೂ ಕಾಲುಗಳ ಸ್ವಾಧೀನತೆಯನ್ನು ಕಳೆದುಕೊಂಡಿದ್ದರೂ ನೀವು ಈಜನ್ನೇಯಾಕೆ ಕಲಿತಿರಿ? ನಿಮಗಿದಕ್ಕೆ ಸ್ಫೂರ್ತಿ ನೀಡಿದ ಅಂಶ ಯಾವುದು ?

— ನಾನು ತುಂಬಾ ದಪ್ಪವಾಗಿದ್ದುದರಿಂದ ಸ್ವಲ್ಪ ಸ್ಲಿಮ್ ಆಗ್ಬೇಕೂಂತ ಆಸೆಯಿತ್ತು.

ಹಾಗಾಗ್ಬೇಕಾದ್ರೆ ದೇಹಕ್ಕೆ ವ್ಯಾಯಾಮ ನೀಡಬಲ್ಲ ಏನಾದರೊಂದು ಹವ್ಯಾಸವನ್ನು ಬೆಳೆಸ್ಕೋಬೇಕು. ಹೀಗೆ ಯೋಚ್ನೆ ಮಾಡಿದಾಗ ನನಗೆ ಹೊಳೆದದ್ದು ಮನೆಯಿಂದ 2 ಕಿ. ಮೀ. ದೂರದಲ್ಲಿದ್ದ ಬಸವನ ಗುಡಿ ನ್ಯಾಶನಲ್ ಕಾಲೇಜಿನ ಈಜುಕೊಳ. ನಾನು ಈಜನ್ನೇ ಯಾಕೆ ಕಲೀಬಾರ್ದು ಅಂತ ಅನ್ನಿಸ್ತು. ಅಲ್ಲದೇ ಅಂಗವಿಕಲತೆ ಇದೆ ಅಂತ ಕೊರಗ್ತಾ ಇದ್ರೆ ನಮ್ಮ ಭವಿಷ್ಯ ಬೆಳಗಲಾರದು. ಇತರರಂತೆ ನಾನೂ ಏನಾದರೊಂದು ಸಾಧನೆ ಮಾಡ್ಬೇಕು. ಇತರರಿಗಿಂತ ಭಿನ್ನವಾದ್ದನ್ನು ಸಾಧಿಸಿ ತೋರಿ ಸ್ಬೇಕು ಅನ್ನಿಸಿದಾಗ ತೋರಿದ್ದು ಈಜು. ಈ ಎರಡು ಕಾರಣಗಳೇ ನಾನು ಈಜು ಕಲಿಯಲು ಸ್ಫೂರ್ತಿ ನೀಡಿದವು.

● ಜಾನಕಿಯವರೇ, ಈಜೋದಕ್ಕೆ ಕೈಗ ಳೊಂದಿಗೆ ಕಾಲುಗಳೂ ಅಷ್ಟೇ ಅವಶ್ಯಕ. ಹಾಗಿರು ವಾಗ ನೀವು ಈ ನಿಮ್ಮ ಹವ್ಯಾಸದಲ್ಲಿ ಹೇಗೆ ಜಯಶಾಲಿ ಆದಿರಿ ?

— ಮೊದಮೊದಲು ಬಹಳ ಕಷ್ಟವಾಯಿತು. ನೀವು ಹೇಳಿದ್ಹಾಗೆ ಕೈಗಳಷ್ಟೇ ಕಾಲುಗಳೂ ಅವಶ್ಯಕ ನಿಜ. ಆದ್ರೆ ಜೀವನದಲ್ಲಿ ಏನಾದರೂ ಸಾಧಿಸಲೇಬೇಕು ಎನ್ನುವ ಛಲವೇ ನಾನು ಮುನ್ನುಗ್ಗುವಂತೆ ಮಾಡಿತು. ನನ್ನ ಕಾಲುಗಳಲ್ಲಿ ಬಲವಿಲ್ಲದಿದ್ರೂ ನನ್ನ ಶೋಲ್ಡರ್ ಪವರ್ ಮತ್ತು ವಿಲ್ ಪವರ್ ಚೆನ್ನಾಗಿದೆ. ಆದ್ದರಿಂದ ನನ್ನ ಈ ಹವ್ಯಾಸದಲ್ಲಿ ಅಂಗವಿಕಲತೆ ಒಂದು ದೊಡ್ಡ ಅಡ್ಡಿ ಅನ್ನಿಸ್ಲಿಲ್ಲ. ಇಲ್ಲಿ ನಾನು ನಿಮಗೊಂದು ವಿಚಾರ ವನ್ನು ಹೇಳಬಯಸುತ್ತೇನೆ. ಅದು ನಾನು ಈಜು ಕಲಿಯಲು ಪ್ರಾರಂಭಿಸಿದ ಸಂದರ್ಭ. ಯಾರೂ ನನ್ನ ಸಹಾಯಕ್ಕೆ ಬರ್ಲಿಲ್ಲ. ನನ್ನ ಪ್ರಯತ್ನವನ್ನು ಕಂಡು ನಗ್ತಾ ಇದ್ರು. "ಕಾಲಿಲ್ಲದವಳು ಈಜ್ತಾ ಳಂತೆ" ಅಂತ ವ್ಯಂಗ್ಯವಾಡಿದ್ರು. ದಿನಾ ಅವರೆಲ್ಲರ ಕುಹಕದ ಮಾತುಗಳಿಂದ ನಾನು ತುಂಬಾ ನೊಂದಿದ್ದೆ ನಾದರೂ ಆಮೇಲೆ ನನ್ನ ನಿರ್ಧಾರ ಅಚಲ ವಾಯಿತು. ಅವರು ಅಸಾಧ್ಯ ಅಂತ ಹೇಳೋ ದನ್ನು ನಾನು ಸಾಧ್ಯ ಅಂತ ತೋರಿಸಿ ಕೊಡ ಬೇಕು" ಅನ್ನುವ ಛಲ ಮೂಡಿತು. ಆದ್ದರಿಂದ ಎಷ್ಟೇ ಕಷ್ಟವಾದರೂ ಸಹಿಸಿಕೊಂಡೆ. ಈಜನ್ನು ಒಂದು ಸವಾಲಾಗಿ ಸ್ವೀಕರಿಸಿದೆ. ಅದಕ್ಕೆ ಸರಿಯಾಗಿ ನ್ಯಾಷನಲ್ ಕಾಲೇಜಿನ ಈಜುಕೊಳದ ಕೋಚ್ ಮುಖ್ಯಸ್ಥ ಗೋಪಾಲ್ ಹಾಗೂ ಇನ್‌ಸ್ಟ್ರಕ್ಟರ್ ರಾಮ್‌ಸಿಂಗ್ ಅವರಿಬ್ರು ತುಂಬು ಪ್ರೋತ್ಸಾಹ, ನಾನು ಕೆಲಸ ಮಾಡುತ್ತಿರುವ ಬಸವನಗುಡಿ ಸಿಂಡಿಕೇಟ್ ಬ್ಯಾಂಕಿನವರ ಪ್ರೋತ್ಸಾಹ, ಬೆಂಬಲ, ಹೆತ್ತವರ ಪ್ರೋತ್ಸಾಹ ನನ್ನಲ್ಲಿನ ಆತ್ಮವಿಶ್ವಾಸ ವನ್ನು ಇನ್ನಷ್ಟು ಹೆಚ್ಚಿಸಿದ್ದರಿಂದ ನಾನು ಈ ಹವ್ಯಾಸದಲ್ಲಿ ಮುನ್ನಡೆಯಲು ಸಾಧ್ಯವಾಯಿತು.

● ಬ್ಯಾಂಕಿನಲ್ಲಿ ಉದ್ಯೋಗಿಯಾಗಿರುವ ನೀವು ಈ ಹವ್ಯಾಸಕ್ಕಾಗಿ ಸಮಯವನ್ನು ಹೇಗೆ ಹೊಂದಿಸ್ಕೊಳ್ತೀರಾ ?

— "ಮನಸ್ಸಿದ್ದರೆ ಮಾರ್ಗ" ಅಂತಾರಲ್ವಾ. ಹಾಗೆಯೇ ನನ್ನ ಅಪಾರವಾದ ಆಸಕ್ತಿಯೇ ನನಗೆ ಸಮಯವನ್ನು ಹೊಂದಿಸಿಕೊಡುತ್ತಿದೆ. ಪ್ರತಿದಿನ ನಾಲ್ಕೂವರೆ ಗಂಟೆಗಳ ಅಭ್ಯಾಸವನ್ನು ಸಾಮಾನ್ಯ ದಿನಗಳಲ್ಲಿ ಮಾಡ್ತೇನೆ. ಸ್ಪರ್ಧೆ ಹತ್ತಿರವಾಗುತ್ತಿ ದ್ದಂತೇ ದಿನಾ 7 ಗಂಟೆಗಳ ಅಭ್ಯಾಸಮಾಡಿದೆ ಕಡಲ್ದಾಟಲುವೆಗೆ ಆಯ್ಕೆಯಾದ ಮೇಲೆ ರಜಾದಿನ



## ಭರವಸೆಯ ಕುಡಿ ಸ್ಮಿತಾ

ಸ್ಮಿತಾಭಟ್ ಕಜೆ ದ.ಕನ್ನಡದ ಸ್ಥಳದ ಆಸು ಪಾಸಿನಲ್ಲಿ ಆಗಾಗ ಕೇಳಿಬರುತ್ತಿರುವ ಹೆಸರು.

ಹತ್ತರ ಹರೆಯದ ಸ್ಮಿತಾ ಈಗಾಗಲೇ ಭರತ ನಾಟ್ಯದಲ್ಲಿ ಭರವಸೆ ಮೂಡಿಸಿದ್ದಾಳೆ. ಐದು ವರ್ಷ ಗಳು ಹಿಂದೆ ಕು॥ ನಳಿನಿ ಜೈಪಡಿತ್ತಾಯರ ಶಿಷ್ಯೆ ಯಾಗಿ ಭರತನಾಟ್ಯ ಕಲಿಯಲಾರಂಭಿಸಿದ ಸ್ಮಿತಾ ಇದೀಗ ಸುಳ್ಯದ ನಾದನೃತ್ಯ ಆಶ್ರಯದಲ್ಲಿ ಮಡಿಕೇ ರಿಯ ಸೀತಾಹೆಬ್ಬಾರ ಅವರ ಶಿಷ್ಯೆಯಾಗಿ ನೃತ್ಯಭ್ಯಾಸ ಮುಂದುವರಿಸಿದ್ದಾಳೆ.

ದ.ಕನ್ನಡದ ಜಿಲ್ಲೆಯ ಸುಳ್ಯ, ವಾರ್ಣಕಜೆ, ಸೋಳ್ಯ, ಕುಕ್ಕುಜಡ, ಕಾಯತೋಡಿ. ಕಟಕ ಬೆಳ್ಳಾಜೆ ಮಂಗಳೂರು ಹೀಗೆ ಹಲವು ಕಡೆಗಳಲ್ಲಿ ನೃತ್ಯ ಪ್ರದರ್ಶನ ನೀಡಿ ಮೆಚ್ಚುಗೆ ಪಡೆದಿರುವ ಖ್ಯಾತಿ ಈ ಬಾಲಕಿಯದು.

ಭರತನಾಟ್ಯದ ಜೊತೆಗೆ ಕರ್ನಾಟಕ ಶಾಸ್ತ್ರೀಯ ಸಂಗೀತಾಭ್ಯಾಸವನ್ನು ಮಾಡುತ್ತಿರುವ ಸ್ಮಿತಾ ಸಂಗೀತದಲ್ಲೂ ಸಾಕಷ್ಟು ಪರಿಣತಿಯನ್ನು ಪಡೆದಿ ದ್ದಾಳೆ.

ಪ್ರಕೃತ 6 ನೇ ತರಗತಿಯನ್ನು ಸುಳ್ಯ ರೋಟರಿ ಶಾಲೆಯಲ್ಲಿ ಅಭ್ಯಸಿಸುತ್ತಿರುವ ಕು॥ ಸ್ಮಿತಾಭಟ್ ಕಜೆಯವರಿಗೆ ಇತ್ತೀಚೆಗೆ ದಿಲ್ಲಿಯ ಸಾಂಸ್ಕೃತಿಕ ಸಂಪನ್ಮೂಲ ಮತ್ತು ತರಬೇತಿ ಕೇಂದ್ರದ ವತಿ ಯಿಂದ ಭರತನಾಟ್ಯದಲ್ಲಿ ಉನ್ನತ ವ್ಯಾಸಂಗಕ್ಕಾಗಿ ಸಾಂಸ್ಕೃತಿಕ ಪ್ರತಿಭಾನ್ವೇಷಣ ವಿದ್ಯಾರ್ಥಿ ವೇತನದ ಪುರಸ್ಕಾರ ಲಭಿಸಿದೆ.

ಸುಳ್ಯದ ನಾದ-ನೃತ್ಯ ಸಂಸ್ಥೆಯ ಸ್ಥಾಪಕಾಧ್ಯಕ್ಷ ಸ್ಥಳೀಯ ಸಿಂಡಿಕೇಟ್ ಬ್ಯಾಂಕ್ ಉದ್ಯೋಗಿ ಕಜೆ ಕೃಷ್ಣಭಟ್ಟರ ಪುತ್ರಿಯಾದ ಸ್ಮಿತಾಗೆ ನೃತ್ಯ ಸಂಗೀತ ಕ್ಷೇತ್ರದಲ್ಲಿ ಹೆಚ್ಚಿನದನ್ನು ಸಾಧಿಸುವ ಆಸೆ.

— ರಂಜಿತಾ ಜಿ. ಕೆ.

ಗಳಲ್ಲಿ 10-11 ಗಂಟೆ ಈಜುತ್ತೇನೆ. ಇಂತಹ ಸಮಯದಲ್ಲಿ ಬೆಳಿಗ್ಗೆ ಮೂರೂವರೆ ಗಂಟೆಗಲ್ಲಾ ಎದ್ದು ದೈನಂದಿನ ಕಾರ್ಯಗಳನ್ನೆಲ್ಲಾ ಪೂರೈಸಿ ನಾಲ್ಕೂ ಮುಕ್ಕಾಲಿಗೇ ಈಜುಕೊಳಕ್ಕೆ ಹೋಗಿ 5 ಗಂಟೆಯಿಂದ 8-15 ರ ವರೆಗೆ ಈಜ್ತೀನಿ. ನಂತರ ಆಫೀಸಿಗೆ, ಮಧ್ಯಾಹ್ನ 2 ರ ನಂತರ ನನಗೆ ಕಚೇರಿ ಕೆಲಸದಿಂದ ವಿನಾಯಿತಿ ನೀಡಿದ್ದಾರೆ. ಆದ್ದರಿಂದ ಮಧ್ಯಾಹ್ನ 2 ಗಂಟೆಗೆ ಪುನಃ ಈಜೋಕೆ ಹೋಗಿ ಸಂಜೆ 6 ಗಂಟೆಗೆ ವಾಪಸಾಗುತ್ತೇನೆ.

● ನೀವು ಇದುವರೆಗೆ ಈಜಿದ್ದು ಈಜುಕೊಳ ದಲ್ಲಿ. ಈಗ ಪ್ರಥಮ ಬಾರಿಗೆ ಸಮುದ್ರದಲ್ಲಿ ಈಜೋದಂದ್ರೆ ಯಾವುದೇ ಭಯ ನಿಮ್ಮನ್ನು ಕಾಡ್ಲಿಲ್ವೇ ?

— ನಿಜ. ಬೆಂಗಳೂರಿನಿಂದ ಬರುವಾಗ ಆ ಭಯ ಇತ್ತು. ಈ ತೆರೆಗಳ ಮಧ್ಯೆ ನಾನು ಈಜ ಗೆಲ್ಲಬಲ್ಲೆನಾ ? ನನ್ನ ತರಬೇತಿ ಸಾರ್ಥಕವಾದೀತಾ? ಎಂದೆಲ್ಲಾ ಅನುಮಾನಗಳು ನನ್ನನ್ನು ಕಾಡಿದ್ರೂ ಒಂದು ರೀತಿಯ ಛಲ ಹಾಗೂ ಆತ್ಮವಿಶ್ವಾಸ ದಿಂದ ಹೊರಟುಬಂದೆ. ಹೇಗೂ ಈಜೋ ದಕ್ಕೆ ಪ್ರಾರಂಭಿಸಿದ್ದಾಗಿದೆ. ಇನ್ನು ನನ್ನ ಗುರಿ ಮುಟ್ಟಬೇಕಾದ್ರೆ ಎದುರಾಗುವ ಭಯ, ಕಷ್ಟಗಳ ನ್ನೆಲ್ಲಾ ಬದಿಗೆ ಸರಿಸಲೇ ಬೇಕು ಅಂತ ಧೈರ್ಯ ಮೂಡಿಸಿಕೊಂಡೆ. ಇನ್ನು ಮಲ್ಪೆಗೆ ಬಂದ ನಂತರ ಇಲ್ಲಿನ ವಾತಾವರಣ ನೋಡಿ ನನ್ನಲ್ಲಿದ್ದ ಅಲ್ಪ ಸ್ವಲ್ಪ ಭಯವೂ ಹೊರಟುಹೋಯಿತು.

● ಅಂದರೆ ಇಲ್ಲಿನ ಆಹ್ಲಾದಕರ ವಾತಾ ವರಣ, ಅನುಭವಿ ಮಾರ್ಗದರ್ಶಕರ ಪ್ರೋತ್ಸಾಹ, ಕರಾವಳಿ ಜನರ ಆತ್ಮೀಯತೆ ನನ್ನಲ್ಲಿ ಧೈರ್ಯ ವನ್ನು ಮೂಡಿಸಿತು. ನನ್ನನ್ನು ಭಿನ್ನವಾದ ಸಮುದ್ರದ ಈಜಿಗೆ ಒಗ್ಗಿಸಿ, ಯೋಗ್ಯ ಮಾರ್ಗ ದರ್ಶನ ನೀಡಿ, ಸೂಕ್ತವಾದ ತರಬೇತಿ ನೀಡಿ ನನ್ನಲ್ಲಿರುವ ಭಯ, ಕಳವಳಗಳನ್ನು ಹೋಗಲಾಡಿಸಿ ದವರು ಮಲ್ಪೆಯ ಜಲ ಸಾಹಸ ಕ್ರೀಡಾ ಕೇಂದ್ರದ ತರಬೇತುದಾರರಾದ ದಿನೇಶ್ ಸುವರ್ಣ. ನಾನು ಹಿಂಜರಿದಾಗೆಲ್ಲಾ ನನ್ನನ್ನು ಹುರಿದುಂಬಿಸಿ ಮತ್ತೆ ಮುನ್ನುಗ್ಗುವಂತೆ ಮಾಡುವವರು. ಬಹಳ ಆಸಕ್ತಿ ಯಿಂದ ಆಳ ಸಮುದ್ರದ ಈಜಿನ ಬಗ್ಗೆ ನನಗೆ ತರಬೇತಿ ಕೊಡುವ ಇವರು ಒಂದೆಡೆಯಾದರೆ, ಮತ್ತೊಂದೆಡೆ ಬಹಳ ವಿಶ್ವಾಸ ಹಾಗೂ ಅಭಿ ಮಾನದಿಂದ ಕಾಣುವುದರ ಮೂಲಕ ವ್ಹೀಲ್ ಚೇರ್‌ನಿಂದ ಅತ್ತಿತ್ತ ಹೋಗಲು ಸಹಕರಿಸುವ, ಬೇಸರವಾದಾಗಲೆಲ್ಲಾ ನನ್ನಲ್ಲಿಗೆ ಬಂದು ಮಾತಿಗೆ ಕೂರುವ, ಓದೋಕೆ ಪುಸ್ತಕಗಳನ್ನು ತಂದು ಕೊಡುವ ಕರಾವಳಿ ತೀರ ಮಲ್ಪೆಯ ಸಹೃದಯಿ ಯುವಕ, ಯುವತಿಯರು ಇವುಗಳ ನಡುವೆ ನಾನು ಏನನ್ನಾದರೂ ಸಾಧಿಸಬಲ್ಲೆ ಎನ್ನುವ ಆತ್ಮವಿಶ್ವಾಸ ವನ್ನು ಮೈಗೂಡಿಸಿಕೊಂಡೆ.

● ಇಂಗ್ಲೀಷ್ ಕಡಲ್ಗಾಲುವೆ ದಾಟುವ ಸಾಹಸಕ್ಕೆ ಇಳಿಯಲು ನಿಮಗೆ ಪ್ರೇರಣೆ ಏನು ?

— ನನಗೆ ಈಜಿನಲ್ಲಿರುವ ಆಸಕ್ತಿ ನೋಡಿ, ಪ್ರಸಿದ್ಧ ಈಜುಗಾತಿ ಅನಿತಾ ಸೂದ್‌ರವರು "ನೀನ್ಯಾಕೆ ಇಂಗ್ಲೀಷ್ ಕಡಲ್ಗಾಲುವೆ ದಾಟ ಬಾರದು ?" ಎಂದು ಸಲಹೆ ನೀಡಿದ್ದರಿಂದ ನಾನು ಅಲ್ಲಿನ ಸದಸ್ಯತ್ವ ಕೋರಿ ಪತ್ರ ಬರೆದೆ. ಈಗ ಅವರಿಂದ ಅನುಮತಿಯೂ ದೊರಕಿದೆ.

● ಜಾನಕಿಯವರೇ, ನೀವು ನಿಮ್ಮ ಈ ಹವ್ಯಾಸದಲ್ಲಿ ಸಾಧಿಸಿರುವ ಸಾಧನೆಗಳ ಬಗ್ಗೆ ಸ್ವಲ್ಪ ತಿಳಿಸಿಕೊಡ್ತೀರಾ ?

— ನಾನು ಈಜು ಕಲಿಯಲು ಪ್ರಾರಂಭಿಸಿದ ಎರಡೇ ತಿಂಗಳಲ್ಲಿ ರಾಜ್ಯ ಮಟ್ಟದ ಈಜು ಸ್ಪರ್ಧೆ ಯಲ್ಲಿ ಭಾಗವಹಿಸಿ ಪ್ರಥಮಸ್ಥಾನ ಗಳಿಸಿ, ಸ್ವರ್ಣ ಪದಕ ಪಡೆದೆ. ನನ್ನ ಈ ಗೆಲುವು ಮುಂದಿನ ಮುನ್ನಡೆಗೆ ನಾಂದಿಯಾಯಿತು. ಅದೇ ವರ್ಷ ಪುಣೆಯಲ್ಲಿ ನಡೆದ ರಾಷ್ಟ್ರೀಯ ಈಜು ಸ್ಪರ್ಧೆ ಯಲ್ಲಿ ಫ್ರೀ ಸ್ಟೈಲ್ ವಿಭಾಗದಲ್ಲೂ ಗೋಲ್ಡ್ ಮೆಡಲ್ ಬಂತು. ನಂತರ ಅಹಮದಾಬಾದ್‌ನಲ್ಲಿ ನಡೆದ ರಾಷ್ಟ್ರೀಯ ಈಜು ಸ್ಪರ್ಧೆಯಲ್ಲಿಯೂ ಗೋಲ್ಡ್ ಮೆಡಲ್ ಸಿಕ್ಕಿತು.

● ನಿಮ್ಮ ಇತರ ಹವ್ಯಾಸಗಳೇನು ?

— ನನಗೆ ಅಥ್ಲೆಟಿಕ್ಸ್‌ನಲ್ಲಿಯೂ ತುಂಬಾ ಆಸಕ್ತಿ. 1989 ರಲ್ಲಿ ರಾಷ್ಟ್ರ ಮಟ್ಟದ ಜಾವೆಲಿನ್

ಎಸೆತದಲ್ಲಿ ಸ್ವರ್ಣ ಪದಕ ಪಡೆದಿದ್ದೆ. ಷಾಟ್‌ಪುಟ್, ಡಿಸ್ಕಸ್ ಎಸೆತ, ವ್ಹೀಲ್ ಚೇರ್ ರೇಸ್‌ನಲ್ಲಿ ಬೆಳ್ಳಿ ಪದಕಗಳನ್ನು ಪಡೆದಿದ್ದೆ. ಇನ್ನು ಓದುವುದು, ಮನೆ ಕೆಲಸಗಳಲ್ಲೂ ತುಂಬಾ ಆಸಕ್ತಿ.

● ನಿಮ್ಮ ಶಿಕ್ಷಣವೆಲ್ಲಾ ಎಲ್ಲಿ ನಡೆಯಿತು? ಸ್ಕೂಲಿಗೆ ಹೇಗೆ ಹೋಗ್ತಾ ಇದ್ರಿ ?

— ಬೆಂಗಳೂರಿನ ಆಚಾರ್ಯ ಪಾಠಶಾಲೆಯಲ್ಲೇ ಬಿ. ಎ. ವರೆಗಿನ ಶಿಕ್ಷಣ ನಡೆಯಿತು. ಚಿಕ್ಕೋಳಿರುವಾಗೆಲ್ಲಾ ಅಮ್ಮನೇ ಎತ್ಕೊಂಡು ಹೋಗ್ತಾ ಇದ್ರು. ನಂತರ ಗಾಲಿ ಕುರ್ಚಿಯಿಂದ ಹೋಗ್ತಾ ಇದ್ದೆ. ಶಾಲೆಯೂ ಮನೆಯಿಂದ ತುಂಬಾ ದೂರವೇನಿರಲಿಲ್ಲ.

● ಈಗ ಬ್ಯಾಂಕಿಗೆ......?

— ಈಗ ನಾನೊಂದು ಮಾರುತಿ ಕಾರನ್ನು ತೆಗೆದುಕೊಂಡಿದ್ದೇನೆ. ಅದು ಅಂಗವಿಕಲರಿಗಾಗಿಯೇ ಇರುವ ಹಸ್ತ ಚಾಲಿತ ಕಾರು (ಜಾನಕಿ ಹಾಗೆ ಹೇಳುತ್ತಿದ್ದಂತೆಯೇ ಆಕೆಯ ತಂದೆ ಪಿ. ವಿ. ನಾಗಪ್ಪ ಅವರು "ಅತಿಯಾದ ವಾಹನ ಸಂಚಾರವಿರುವ ಬೆಂಗಳೂರಿನ ಯಾವ ಬೀದಿಯಲ್ಲೂ ಎಷ್ಟೇ ಜನನಿಬಿಡ ಪ್ರದೇಶವಾಗಿದ್ರೂ ಕಾರ್ ಬಿಟ್ಕೊಂಡು ಹೋಗ್ತಾಳೆ. ನನ್ನ ಮಗಳು ಒಬ್ಬ ಎಕ್ಸ್‌ಪರ್ಟ್ ಡ್ರೈವರ್" ಎಂದು ಹೆಮ್ಮೆಯಿಂದ ಹೇಳಿಕೊಂಡರು)

● ನಿಮ್ಮ ಈಜುವ ಹವ್ಯಾಸದ ಕುರಿತು ಮಹತ್ವಾಕಾಂಕ್ಷೆ ಏನಾದರೂ ಇದೆಯೇ ?

— ನಾನೊಬ್ಬ ಕೋಚ್ ಆಗಬೇಕೆಂಬುದೇ ನನ್ನ ಜೀವನದ ಮಹತ್ವಾಕಾಂಕ್ಷೆ, ನನ್ನಂತೆಯೇ ಇರುವ ಅಂಗವಿಕಲರಿಗೆ ನನ್ನಿಂದ ಸಹಾಯ ದೊರಕುವಂತಾಗ್ಬೇಕು. ನನ್ನ ಉದ್ದೇಶಕ್ಕೆ ಅಪಾರ ಹಣವೂ ಬೇಕಾದೀತು. ಸರ್ಕಾರವೂ, ಸಂಘ ಸಂಸ್ಥೆಗಳೂ ಈ ನಿಟ್ಟಿನಲ್ಲಿ ಸಹಕಾರ ನೀಡಿದ್ರೆ ಖಂಡಿತವಾಗಿಯೂ ನಾನು ನನ್ನ ಗುರಿಯನ್ನು ಮುಟ್ಟಬಲ್ಲೆ ಎಂದು ಭರವಸೆ ಇದೆ.

● ಧನ್ಯವಾದಗಳು ಜಾನಕಿಯವರೇ, ನಿಮ್ಮ ಗುರಿ ಶೀಘ್ರದಲ್ಲೇ ಈಡೇರುವಂತಾಗಲಿ. ಇಂಗ್ಲೀಷ್ ಕಡಲ್ಗಾಲುವೆಯನ್ನು ದಾಟುವಲ್ಲಿ ನೀವು ಯಶಸ್ವಿಯಾಗಿ ನಮ್ಮ ರಾಷ್ಟ್ರಕ್ಕೆ, ಮಹಿಳಾ ಪ್ರಪಂಚಕ್ಕೇ ಕೀರ್ತಿ ತನ್ನಿ ಎಂದು 'ವನಿತಾ'ದ ಪರವಾಗಿ ಹಾರೈಸುತ್ತೇನೆ.

— ನಿಮ್ಮೆಲ್ಲರ ಹಾರೈಕೆ, ಆಶೀರ್ವಾದ, ದೇವರ ದಯೆಯಿಂದ ನಾನು ಖಂಡಿತಾ ಸಾಧಿಸ್ತೀನಿ" ಎಂದು ಆತ್ಮವಿಶ್ವಾಸದಿಂದ ಹೇಳುವ ಜಾನಕಿ ಅಂಗವಿಕಲರಿಗೆ ಮಾತ್ರವಲ್ಲ ಮಹಿಳಾ ಪ್ರಪಂಚಕ್ಕೆ ದಾರಿ ದೀಪವಾಗಿದ್ದಾರೆ. ಕಳೆದ ಜನವರಿಯಲ್ಲಿ ಮಲ್ಪೆಯಲ್ಲಿ ನಡೆದ ದಿ॥ ಮಲ್ಪೆ. ಮಧ್ವರಾಜ್ ಸ್ಮಾರಕ ಸಮುದ್ರ ಸಾಹಸ ಸ್ಪರ್ಧಾಕೂಟದ ಸಂದರ್ಭದಲ್ಲಿ ತಮ್ಮಲ್ಲಿರುವ ಈ ಅಪೂರ್ವ ಪ್ರತಿಭೆಯನ್ನು ನೆರೆದ ಸಾವಿರಾರು ಪ್ರೇಕ್ಷಕರಿಗೆ ತೋರಿಸಿಕೊಟ್ಟರು. ಕೇಂದ್ರ ವಾರ್ತಾ ಹಾಗೂ ಪ್ರಸಾರ ಮಂತ್ರಿಗಳಾದ ಅಜಿತ್ ಕುಮಾರ್-ಪಾಂಜಾ, ಕರ್ನಾಟಕದ ಮಾಜಿ ಮುಖ್ಯಮಂತ್ರಿಗಳಾದ ಆರ್. ಗುಂಡೂರಾವ್, ಅಸ್ಕರ್ ಫೆರ್ನಾಂಡೀಸ್ ಮುಂತಾದವರೆಲ್ಲಾ ಜಾನಕಿಯವರಲ್ಲಿರುವ ಈ ಅಪಾರ ಪ್ರತಿಭೆಯನ್ನು ಕಂಡು ಬೆರಗಾದರು.

**

—ಜಿ. ಗೀತಾ ನಾಯಕ್, ಆಕ್ರಾಡಿ

## ರಂಗೋಲಿ

ಮಧ್ಯದಲ್ಲಿ 17 ಚುಕ್ಕೆಗಳನ್ನಿಡಿ. ನಂತರ ಸಾಲೊಂದಕ್ಕೆ 2 ಚುಕ್ಕೆಗಳನ್ನು ಕಡಿಮೆ ಮಾಡುತ್ತ (ಮೇಲೆ ಹಾಗೂ ಕೆಳಗೆ) ಒಂದು ಚುಕ್ಕೆಯುವರೆಗೂ ಚುಕ್ಕೆಗಳನ್ನಿಡಿ. ಆಮೇಲೆ ಮಾದರಿ ಆಕೃತಿಯಲ್ಲಿ ತೋರಿದಂತೆ ರಂಗೋಲಿಯನ್ನು ಭರ್ತಿ ಮಾಡಿರಿ.

—ಅಂಬಾಬಾಯಿ ಹವಳೆ ಗೆವರ್ರೈ





ಚಿತ್ರ: ಹರಿ



# ದ್ರಾಕ್ಷಿಯ ಸಂರಕ್ಷಣೆ ಹಾಗೂ ಸದುಪಯೋಗ

– ಭಾರತಿ ವಿ. ಚಿಮ್ಮಡ, ಧಾರವಾಡ

ಹುಳಿ ಹಾಗೂ ಸಿಹಿ ರುಚಿಗಳ ಸಮ್ಮಿಶ್ರಣದಿಂದ ವಿಶಿಷ್ಟ ರುಚಿಯುಳ್ಳ ದ್ರಾಕ್ಷಿ ಬಹುಪ್ರಿಯವಾದದ್ದು. ಇದರ ಕೃಷಿ ಹಾಗೂ ಸಂಸ್ಕರಣೆ ಲಾಭದಾಯಕ ಉದ್ಯಮವೆಂದು ಪರಿಗಣಿಸಲ್ಪಟ್ಟಿದೆ. ಸಾಮಾನ್ಯ ಇದರ ಕೃಷಿಯಲ್ಲಿಷ್ಟೇ. ಇದರ ಸಂಸ್ಕರಣೆಯಲ್ಲೂ ಯಶಸ್ಸನ್ನು ಪಡೆದು ಹೆಚ್ಚಿನ ಲಾಭ ಗಳಿಸುವಲ್ಲಿ ಸಫಲನಾಗಿದ್ದಾನೆ. ಇನ್ನು ಮನೆ ಮಟ್ಟದಲ್ಲಿಯೂ ದ್ರಾಕ್ಷಿಯನ್ನು ಸಂಸ್ಕರಿಸಬಹುದಾಗಿದ್ದು ಗೃಹಿಣಿ ಬಿಡುವಿನ ವೇಳೆಯನ್ನು ಸಾರ್ಥಕವಾಗಿ ಉಪಯೋಗಿಸಬಹುದಾಗಿದೆ. ಸುಗ್ಗಿಯ ಕಾಲದಲ್ಲಿ ದ್ರಾಕ್ಷಿಯನ್ನು ಅಗ್ಗದ ಬೆಲೆಯಲ್ಲಿ ಕೊಂಡು ಕೊಂಡು, ಒಣ ದ್ರಾಕ್ಷಿ ಮತ್ತು ದ್ರಾಕ್ಷಾರಸದ ರೂಪದಲ್ಲಿ ಸಂರಕ್ಷಿಸಿಟ್ಟುಕೊಂಡರೆ ಮುಂದೆ ವರ್ಷವಿಡೀ ಬಳಸಲು ಅನುಕೂಲವಾಗುತ್ತದೆ. ಈ ವಿಧಾನಗಳು ಸುಲಭವಾಗಿದ್ದು, ತಗಲುವ ಶ್ರಮ, ವೆಚ್ಚ ಮತ್ತು ವೇಳೆಯೂ ಅಲ್ಪ. ಆದ್ದರಿಂದ ನೀವೂ ಸಹ ಇವುಗಳನ್ನು ಅನುಸರಿಸಿ, ಮನೆಯವರೆಲ್ಲರ ಮತ್ತು ಅತಿಥಿಗಳ ಆದರಕ್ಕೆ ಪಾತ್ರರಾಗಿ.

ಒಣ ದ್ರಾಕ್ಷಿಯಲ್ಲಿರುವ ಪೋಷಕಾಂಶಗಳು ಅನುಬಂಧ–1 ರಲ್ಲಿ ತೋರಿಸಿದಂತೆ ಇವೆ. ಇತರ ಹಣ್ಣುಗಳಿಗೆ ಹೋಲಿಸಿದರೆ ಒಣ ದ್ರಾಕ್ಷಿಯು ಶಕ್ತಿ ಮತ್ತು ಖನಿಜಗಳ ಆಗರವಾಗಿದೆ. ಇವುಗಳ ಉಪಯೋಗ ಬರೀ ವಿಶೇಷ ಪದಾರ್ಥಗಳಿಗೆ ಸೀಮಿತ ವಾಗಿರದೇ, ಚಿಕಿತ್ಸಾ ರೂಪಿಯಾಗಿ ಅನೇಕ ವ್ಯಾಧಿ ಗಳಲ್ಲಿ ಬಳಸುವುದುಂಟು.

ಒಣ ದ್ರಾಕ್ಷಿಯ ತಯಾರಿಕೆ: ಪ್ರತಿಯೊಂದು ಕಿಲೊಗ್ರಾಂ ದ್ರಾಕ್ಷಿ ಹಣ್ಣನ್ನು ಸಂಸ್ಕರಿಸಲು ಬೇಕಾಗುವ ವಸ್ತುಗಳು ಇಂತಿವೆ.

ದ್ರಾಕ್ಷಿ ಹಣ್ಣು: ಒಂದು ಕಿಲೊ

ಅಡುಗೆ ಸೋಡ: ಒಂದು ಟೀ ಚಮಚ

ಬಿದಿರಿನ ಅಥವಾ ಸಣ್ಣ ಸಣ್ಣ ರಂಧ್ರವುಳ್ಳ ಒಂದು ಬುಟ್ಟಿ.

ಗಂಧಕದ ಹುಡಿ: ಅರ್ಧ ಚಮಚದಷ್ಟು

ಸ್ವಲ್ಪ ಅರಳೆ

ಇಲ್ಲಿ ನೀವು ಗಮನಿಸಬೇಕಾದ ಒಂದು ಮುಖ್ಯ ಅಂಶ ಯಾವುದೆಂದರೆ, ದ್ರಾಕ್ಷಿ ಹಣ್ಣು ಸರಿಯಾಗಿ ಮಾಗಿ, ಸಕ್ಕರೆಯಂಶ ಹೆಚ್ಚಿನ ಮಟ್ಟದಲ್ಲಿದ್ದರೆ, ಒಣ ದ್ರಾಕ್ಷಿಯ ಇಳುವರಿ ಹೆಚ್ಚಿನ ಪ್ರಮಾಣದಲ್ಲಿ ಇರುತ್ತದೆ. ಆದ್ದರಿಂದ ದ್ರಾಕ್ಷಿ ಹಣ್ಣುಗಳನ್ನು ಕೊಂಡು ಕೊಳ್ಳುವಾಗ ಅಥವಾ ಕೊಯ್ಲು ಮಾಡುವಾಗ ಸಕ್ಕರೆಯಂಶದ ಕಡೆಗೆ ಗಮನ ಕೊಡಿರಿ. ಇನ್ನೊಂದು ಸಂಗತಿಯೇನೆಂದರೆ, ಅತಿ ಉದ್ದನೆಯ ಹಣ್ಣುಗಳು ಒಣಗಿದ ಮೇಲೆ, ಅಡುಗೆಗೆ ಅನಾಕರ್ಷಕವೆನಿಸುವುದರಿಂದ, ಸಂಸ್ಕರಣೆಗೆ ಬಳಸುವ ದ್ರಾಕ್ಷಿ ಹಣ್ಣುಗಳ ಗಾತ್ರ ಚಿಕ್ಕ ದಾಗಿದ್ದರೆ ಒಳಿತು.

## ವಿಧಾನ

(1) ಹಣ್ಣುಗಳನ್ನು ಗೊಂಚಲಿನಿಂದ ಬೇರ್ಪಡಿಸಿ, 2–3 ಸಲ ಸ್ವಚ್ಛವಾದ ನೀರಿನಿಂದ ತೊಳೆಯಿರಿ. ಮೇಲ್ಮೈಗೆ ತಾಗಿರಬಹುದಾದ ಕೀಟನಾಶಕ ಮತ್ತಿತರ ರಾಸಾಯನಿಕ ವಸ್ತುಗಳ ನಿರ್ಮೂಲನಕ್ಕೆ ಲಕ್ಷ್ಯವಹಿಸಿ.

(2) ಒಂದು ದೊಡ್ಡ ಪಾತ್ರೆಯಲ್ಲಿ ಎರಡು ತಂಬಿಗೆ ನೀರನ್ನು ಒಲೆಯ ಮೇಲಿಟ್ಟು ಕುದಿಗೆ ತನ್ನಿರಿ.

(3) ನೀರು ಕುದಿಯುವಾಗ, ಅಡುಗೆ ಸೋಡ ಬೆರೆಸಿರಿ. ತೊಳೆದ ಹಣ್ಣುಗಳನ್ನು ಕುದಿಯುವ ನೀರಿನಲ್ಲಿ ಜಾಗರೂಕತೆಯಿಂದ (ಕುದಿಯುವ ನೀರು ನಿಮಗೆ ಸಿಡಿಯದಂತೆ) ಸುರಿಯಿರಿ. ಸುಮಾರು 30–60 ಸೆಕೆಂಡುಗಳ ನಂತರ ಇದನ್ನು ಬಿದಿರಿನ ಬುಟ್ಟಿಗೆ ಸುರಿದು ನೀರು ಬಸಿಯಲು ಬಿಡಿ, ಮೇಲೆ ಮತ್ತೆರಡು ತಂಬಿಗೆಗಳಷ್ಟು ಸುರಿದು ಎಲ್ಲ ನೀರು ಬಸಿದು ಹೋಗಲು ಅನುವು ಮಾಡಿಕೊಡಿ. ಹಣ್ಣುಗಳನ್ನು ಕುದಿಯುವ ನೀರಿನಲ್ಲಿ ಹಾಕಿ ತೆಗೆಯುವ ಈ ವಿಧಾನದಿಂದ ಹಣ್ಣಿನ ಮೇಲ್ಪದರಿನಲ್ಲಿ ಸೂಕ್ಷ್ಮ ಬಿರುಕುಗಳುಂಟಾಗಿ ಶೀಘ್ರ ನಿರ್ಜಲೀಕರಣಕ್ಕೆ ಸಹಾಯಕಾರಿಯಾಗಿದೆ. ಕುದಿಯುವ ನೀರಿನಲ್ಲಿ ಅಡುಗೆ ಸೋಡಾವನ್ನು ಹಾಕುವುದರಿಂದ ಹಣ್ಣಿನ ಮೇಲ್ಪದರಿನ ಮೇಲಿರುವ ನೈಸರ್ಗಿಕ ಜಿಡ್ಡು ಕರಗಿ, ನಿರ್ಜಲೀಕರಣದ ವಿಧಾನವು ತ್ವರಿತವಾಗುತ್ತದೆ. ಇದೆಲ್ಲದ ನಂತರ ಮತ್ತೆ ತಣ್ಣೀರನ್ನು ಸುರಿಯುವುದರಿಂದ ಜಿಡ್ಡಿನ ಮತ್ತು ಅಡುಗೆ

**ಅನುಬಂಧ–1** ದ್ರಾಕ್ಷಿಯಲ್ಲಿರುವ ಪೋಷಕಾಂಶಗಳು
(ಪ್ರತಿ ನೂರು ಗ್ರಾಮ್‌ನಲ್ಲಿ)

| ಪೋಷಕಾಂಶಗಳು ಪ್ರತಿ ಶತ | ದ್ರಾಕ್ಷಿ ಹಣ್ಣು | ಒಣ ದ್ರಾಕ್ಷಿ |
|---|---|---|
| ತೇವಾಂಶ | 79.2 | 20.2 |
| ಶಕ್ತಿ | 71 | 308 |
| ಸಾರಜನಕ | 0.5 | 1.8 |
| ಕೊಬ್ಬು (ಗ್ರಾಂ) | 0.3 | 0.3 |
| ಖನಿಜಗಳು (ಮಿ. ಗ್ರಾಂ) | 0.6 | 2.0 |
| ನಾರಿನಂಶ (ಗ್ರಾಂ) | 2.9 | 1.1 |
| ಶರ್ಕರ ಪಿಷ್ಟಗಳು (ಗ್ರಾಂ) | 16.5 | 74.6 |
| ಕ್ಯಾಲ್ಸಿಯಂ (ಮಿ. ಗ್ರಾಂ) | 20 | 87 |
| ಫೊಸ್ಪರಸ್ (ಮಿ. ಗ್ರಾಂ) | 30 | 80 |
| ಕಬ್ಬಿಣ (ಮಿ. ಗ್ರಾಂ) | 0.5 | 7.7 |
| ನಿಯಾಸಿನ್ (ಮಿ. ಗ್ರಾಂ) | — | 0.7 |
| 'ಸಿ' ಜೀವಸತ್ವ (ಮಿ. ಗ್ರಾಂ) | 1 | 1 |

ಸೋಡಾದ ಶೇಷವೆಲ್ಲ ತೊಳೆದು ಹೋಗುತ್ತದೆ. ಈ ಹಂತದಲ್ಲಿ ಹಣ್ಣುಗಳ ವರ್ಣ ತೆಳುವಾಗುತ್ತದೆ.

(4) ಈಗ ನೀರನ್ನು ಸರಿಯಾಗಿ ಬಸಿದು ತೆಗೆದು, ಅಟ್ಟಣಿಗೆಯ ಮೇಲೆ, ರಂಧ್ರಗಳುಳ್ಳ ಬುಟ್ಟಿಯನ್ನಿಲ್ಲಿಟ್ಟು, ಬುಟ್ಟಿಯ ಕೆಳಗೆ ಅರಳೆ ಯನ್ನು ಸಮನಾಗಿ ಹಿಂಜಿ ಹಾಸಿರಿ. ಇದರ ಮೇಲೆ ಗಂಧಕದ ಹುಡಿಯನ್ನು ತೆಳುವಾಗಿ ಸಮನಾಗಿ ಉದುರಿಸಿ ಅರಳೆಗೆ ಬೆಂಕಿ ತಾಗಿಸಿರಿ. ಗಂಧಕವನ್ನು ಈ ರೀತಿ ಸುಡುವುದರಿಂದ ಗಂಧಕದ ಆಕ್ಸೈಡ್ ಉತ್ಪತ್ತಿಯಾಗಿ ಅದು ಹಣ್ಣುಗಳಿಗೆ ಮೇಲ್ಮೈಯ ಸೂಕ್ಷ್ಮ ಜೀವಿ ನಿರೋಧಕದಂತೆ ವರ್ತಿಸಿ ನಿರ್ಜಲೀಕರಣದ ವಿಧಾನದಲ್ಲಿ ಯಾವುದೇ ಸೋಂಕು ತಾಗದಂತೆ ಕಾಪಾಡುತ್ತದೆ. ಅರಳೆಗೆ ಬೆಂಕಿ ತಾಗಿಸಿದ ನಂತರ ಗಂಧಕದ ಆಕ್ಸೈಡ್‌ನ ಹೊಗೆ ಹೊರಗೆ ಹೋಗದಂತೆ ನಿಗಾವಹಿಸಿ, ಒಂದು ದೊಡ್ಡ ಪಾತ್ರೆಯನ್ನಾಗಲೀ, ಬಕೀಟ-ನ್ನಾಗಲೀ ಬೋರಲು ಹಾಕಿ ಒಂದೆರಡು ತಾಸು ಹಾಗೆಯೇ ಬಿಡಿರಿ.

(5) ಈಗ ಹಣ್ಣುಗಳ ಬಣ್ಣವು ಇನ್ನೂ ತಿಳಿಯಾಗಿ ಒಣಗಲು ಸಿದ್ಧವಾಗಿವೆ. ದೊಡ್ಡ ದೊಡ್ಡ ತಟ್ಟೆಯಲ್ಲಿ ವರ್ತಮಾನ ಪತ್ರಿಕೆಗಳನ್ನು ಹಾಸಿ, ಅದರ ಮೇಲೆ ತೆಳುವಾಗಿ ಹಣ್ಣುಗಳನ್ನು ಹಾಕಿ ಹುಳುಹುಪ್ಪಟೆಗಳ ಬಾಧೆಯಿರದ, ಗಾಳಿ ಯಾಡುವ, ಸ್ವಚ್ಛವಾದ ವಾತಾವರಣದಲ್ಲಿ, ಕಸಕಡ್ಡಿ ಬೀಳದಂತೆ ನೆರಳಿನಲ್ಲಿ 15–20 ದಿನಗಳ ವರೆಗೆ ಅಥವಾ ಸರಿಯಾಗಿ ಒಣಗುವವರೆಗೆ ಒಣಗಿಸಿರಿ. ಒಂದು ಮುಷ್ಠಿ ಒಣಗಿದ ದ್ರಾಕ್ಷಿಯನ್ನು ಅಂಗೈಯಲ್ಲಿ ಅದುಮಿದಾಗ ಕೈಗೆ ಅಂಟಿಕೊಳ್ಳದೆ ಅಥವಾ ಒಂದು ಉಂಡೆಯಂತಾಗದೆ ಉದುರಾಗಿ ಉದುರಿದರೆ ದ್ರಾಕ್ಷಿಯು ಸರಿಯಾಗಿ ಒಣಗಿದೆ ಎಂದು ತಿಳಿಯಬೇಕು.

ಪ್ರತಿ ಒಂದು ಕಿಲೊ ದ್ರಾಕ್ಷಿ ಹಣ್ಣಿನಿಂದ ಸುಮಾರು 200 ರಿಂದ 300 ಗ್ರಾಮ್ ಒಣ ದ್ರಾಕ್ಷಿಯನ್ನು ಪಡೆಯಬಹುದಾದ ಈ ಪದ್ಧತಿಯು ಎರಡು ಪಟ್ಟು ನಿವ್ವಳ ಲಾಭ ಕೊಡುತ್ತದೆ. ಆದ್ದರಿಂದ ಯಾಕೆ ನೀವು ಇದನ್ನು ಅನುಸರಿಸಿ ಸ್ವಂತದ ಗೃಹೋದ್ಯಮವಾಗಿ ಪ್ರಾರಂಭಿಸಬಾರದು ?

## ದ್ರಾಕ್ಷಾರಸ

ಮಧುರವಾದ ಈ ರಸದ ತಯಾರಿಕೆಗೆ ಉತ್ತಮ ಗುಣಮಟ್ಟದ ಹೆಚ್ಚು ಸಿಹಿ ರುಚಿಯುಳ್ಳ ಹಣ್ಣುಗಳನ್ನು ಆರಿಸಿರಿ. ಇದರ ತಯಾರಿಕೆಗೆ ಬೇಕಾಗುವ ಸಾಧನ ಸಲಕರಣೆಗಳು ಇಂತಿವೆ.

ದ್ರಾಕ್ಷಿ ಹಣ್ಣು : ಒಂದೂವರೆ ಕಿಲೊ
ಸಕ್ಕರೆ : ಒಂದೂವರೆ ಕಿಲೊ
ಸಿಟ್ರಿಕ್ ಆಮ್ಲ : 4-5 ಟೀ ಚಮಚ
ಸೋಡಿಯಂ
ಬೆಂಜೋಯೇಟ್ : ಒಂದು ಚಿಟಿಕೆ
ಸಣ್ಣ ಬಾಯಿಯ
ಬಾಟಲಿಗಳು : 2-3
(ಸ್ಕ್ವಾಷ್ ಬಾಟಲಿಗಳು)

1. ಮೊದಲು ಬಾಟಲಿಗಳನ್ನು ಮತ್ತು ಅವುಗಳ ಬಿರಡೆಗಳನ್ನು ತೊಳೆದು, ನೀರಿನಲ್ಲಿ ಕುದಿಸಿ ನೀರೆಲ್ಲ ಹೋಗುವಂತೆ ಆರಿಸಿ ತೆಗೆದಿಡಿ.

2. ಹಣ್ಣುಗಳನ್ನು ಚೆನ್ನಾಗಿ ತೊಳೆದು, ಗೊಂಚಲಿನಿಂದ ಬೇರ್ಪಡಿಸಿರಿ, ಬೀಜಗಳನ್ನು ತೆಗೆಯಿರಿ.

3. ಒಂದು ದೊಡ್ಡ ಪಾತ್ರೆಗೆ ಹಣ್ಣುಗಳನ್ನು ಹಾಕಿ, ಅರ್ಧ ಬಟ್ಟಲಿನಷ್ಟು ನೀರನ್ನು ಕೂಡಿಸಿ, ಹಣ್ಣುಗಳು ಮೃದುವಾಗುವವರೆಗೆ ಕಾಯಿಸಿರಿ. ಸೌಟಿನಿಂದ ಹಣ್ಣುಗಳನ್ನು ಅದುಮಿ, ರಸವನ್ನು ಬೇರ್ಪಡಿಸಿ, ಶೋಧಿಸಿರಿ.

4. ಹಣ್ಣಿನ ಈ ರಸಕ್ಕೆ ಸಕ್ಕರೆ ಮತ್ತು ಸಿಟ್ರಿಕ್ ಆಮ್ಲಗಳನ್ನು ಕೂಡಿಸಿ ಕರಗಿಸಿರಿ. ಅವಶ್ಯಕವೆನಿಸಿದರೆ, ನಿಮಗೆ ಬೇಕಾನಿಸಿದರೆ ಕೃತಕ ಬಣ್ಣಗಳನ್ನು ಮತ್ತು ಸುವಾಸನೆಗಳನ್ನು ಬೆರೆಸಿರಿ.

5. ನಂತರ ಸೋಡಿಯಂ ಬೆಂಜೋಯೇಟನ್ನು ಒಂದು ಚಮಚ ನೀರಿನಲ್ಲಿ ಕರಗಿಸಿ ರಸದಲ್ಲಿ ಮಿಶ್ರ ಮಾಡಿರಿ.

6. ಈಗ ಇದನ್ನು ಶೋಧಿಸಿ, ಒಣಗಿದ ಬಾಟಲಿಗಳಲ್ಲಿ ಶೇಖರಿಸಿಡಿ. ಬಾಟಲಿಗಳನ್ನು ಗಾಳಿ ಯಾಡುವ, ತೇವವಿರದ ಸ್ಥಳದಲ್ಲಿಡಬೇಕು. ರಸವನ್ನು ಬಳಸುವಾಗ ನೀರು ಸೇರದಂತೆ ನಿಗಾ ವಹಿಸಿದರೆ ಒಳಿತು.

# ಮೂರು ತಲೆಮಾರುಗಳು

ಆಂಗ್ಲಮೂಲ : ಚೂಡಾಮಣಿ ರಾಘವನ್
ಅನುವಾದ : ಗೀತಾ ವಿಜಯಕುಮಾರ್



ಪ್ರೇಮಳಿಗಿನ್ನೂ ತನ್ನ ಸಂಕೋಚವನ್ನು ದೂರ ಮಾಡಿಕೊಳ್ಳಲು ಸಾಧ್ಯವಾಗಿರಲಿಲ್ಲ. ಒಂದು ತಿಂಗಳ ಹಿಂದಷ್ಟೇ ಮದುವೆಯಾದ ಅವಳು ಹೊಸ ಮದುವಣಗಿತ್ತಿ. ಹೊಸ ಪರಿಸರದಲ್ಲಿ ಕುಟುಂಬದ ಸದಸ್ಯರ ನಡೆ, ನುಡಿ, ಸ್ವಭಾವ ಇವುಗಳನ್ನು ಅರ್ಥಮಾಡಿಕೊಂಡು ವ್ಯವಹರಿಸುವಲ್ಲಿ ಅವಳ ಸಂಕೋಚ ಅಡ್ಡಿಯನ್ನುಂಟು ಮಾಡುತ್ತಿತ್ತು.

ಅವಳ ಪತಿ ಸುರೇಶ ಅವರ ಒಂದು ವಾರದ ಮಧು ಚಂದ್ರದ ಅವಧಿಯಲ್ಲಿ, ಬಹಳ ಮೃದುವಾಗಿ, ಆತ್ಮೀಯವಾಗಿ, ಸಂಭಾವಿತ ರೀತಿಯಲ್ಲೇ ಅವಳೊಡನೆ ನಡೆದುಕೊಂಡಿದ್ದ. ಅವನ ತಂದೆ ತಾಯಿಗಳು ರಾಮನಾಥನ್ ಹಾಗೂ ಕಾವೇರಿಯಾದರೋ ಒಳ್ಳೆಯವರಂತೆ ಕಂಡು ಬಂದಿದ್ದರು. ಮದುವೆಯ ಸಮಯದಲ್ಲಿ ವರದಕ್ಷಿಣೆ ಅಪೇಕ್ಷಿಸುವುದಾಗಲಿ, ಅಥವ ಇನ್ನಿತರ ಯಾವುದೇ ವರೋಪಚಾರದ ಸಾಮಾನಿನ ಬೇಡಿಕೆಯ ಪಟ್ಟಿಯನ್ನು ಅವರು ಹೊಂದಿರಲಿಲ್ಲ.

ಪ್ರೇಮಳಿಗೆ ಅವಳ ಮಾವನವರನ್ನು ಕಂಡರೆ ಏನೋ ಒಂದು ರೀತಿಯ ಭೀತಿ. ಕಾರಣ ಆತನ ಮಾತೇ ಸ್ವಲ್ಪ ಒರಟು. ಇತರರಿಗೆ ನೋವುಂಟು ಮಾಡುವಂಥದ್ದಲ್ಲವಾದರೂ ಏಕೋ ಏನೋ ಅವರೊಡನೆ ಸಲೀಸಾಗಿ ಮಾತನಾಡಲು ಅವಳ ಭೀತಿ ಅವಳನ್ನು ತಡೆಯುತ್ತಿತ್ತು.

ಕಾವೇರಿ ಬಹಳ ಸ್ನೇಹಮಯಿಯಂತೆ ಕಂಡು ಬಂದರೂ, ಪ್ರೇಮಳಿಗೆ ಅವಳೊಡನೆ ಸಲಿಗೆ ಉಂಟಾಗಿರಲಿಲ್ಲ. ಕಾವೇರಿ ತನ್ನ ಅತ್ತೆ ಎಂಬ ಒಂದೇ ಆಲೋಚನೆ ಅವಳೊಡನೆ ಸಲಿಗೆ ಬೆಳೆಸಿಕೊಳ್ಳಲು ಅಡ್ಡಿ ಉಂಟು ಮಾಡಿದ್ದಲ್ಲದೆ, ಸಲಿಗೆ ಬೆಳೆಸಿಕೊಳ್ಳುವ ಮುನ್ನ ಬಹಳ ಎಚ್ಚರಿಕೆ ವಹಿಸುವಂತೆ ಮಾಡಿತ್ತು.

ಆ ಮನೆಯಲ್ಲಿ ಸಂಕೋಚವಿಲ್ಲದೆ ಆತ್ಮೀಯವಾಗಿ ವ್ಯವಹರಿಸಲು ಸಾಧ್ಯವಾದ ವ್ಯಕ್ತಿ ಎಂದರೆ ರಾಮನಾಥನ್‌ರ ತಾಯಿ, ಅವರೊಂದಿಗೆಯೇ ಇದ್ದ "ಅಜ್ಜಿ", ಕುಗ್ಗಿ, ಕ್ಷೀಣವಾದ ಎಂಭತ್ತರ ಮುದುಕಿ. ಆಕೆಯ ಹಲ್ಲಿಲ್ಲದ, ಬಿಚ್ಚು ಮನಸ್ಸಿನ, ಬೊಚ್ಚು ನಗು ಪ್ರೇಮಳ ಸಂಕೋಚವನ್ನು ದೂರ ಮಾಡುವಲ್ಲಿ ಸಮರ್ಥವಾಗಿತ್ತು.

ಮಧ್ಯಾಹ್ನದ ಊಟದ ನಂತರ ಎಲ್ಲರೂ ವಿಶ್ರಮಿಸಿದಾಗ, ಸುರೇಶ ಆಫೀಸಿಗೆ ಹೋದ ದಿನಗಳಲ್ಲಿ ಪ್ರೇಮ ಹಿತ್ತಲಿನ ವರಾಂಡದ ತಣ್ಣನೆಯ ನೆರಳಿನಲ್ಲಿ, ನೆಲದ ಮೇಲೆ ಅಜ್ಜಿಯ ಸುರುಳಿಯಿಂದ ಒಂದೊಂದೇ ಘಟನೆಗಳನ್ನು ಜ್ಞಾಪಿಸಿಕೊಂಡು ಹೇಳುವ ಘಟನೆಗಳನ್ನು ಕೇಳಲು ಇಷ್ಟಪಡುತ್ತಿದ್ದಳು.

ಅಜ್ಜಿ ತನ್ನ ಕಾಲದ, ತನಗೆ ತಿಳಿದ ಜನರ ಬಗ್ಗೆ, ತನ್ನ ಜೀವನದ ಬಗ್ಗೆ, ತಾನೂ ಪ್ರೇಮಳಂತೆ ನವ ವಧುವಾಗಿದ್ದಾಗಿನ ಎಲ್ಲಾ ಸುದ್ದಿಗಳನ್ನು ಹೇಳುತ್ತಿದ್ದರೆ ಅದನ್ನು ಕೇಳಿ ಪ್ರೇಮಳ ಮನ ಕರಗುತ್ತಿತ್ತು.

"...ಮುಂಜಾನೆ ಐದರಿಂದ, ರಾತ್ರಿ ಹತ್ತರ ತನಕ ಆ ಮನೆಯಲ್ಲಿ ಒಂದೇ ಸಮನಾದ ದುಡಿತವಿರುತ್ತಿತ್ತು. ಅದೊಂದು ಅವಿಭಾಜ್ಯ ಕುಟುಂಬ. ನನ್ನ ಅತ್ತೆಯಾಗಲಿ, ಕುಟುಂಬದ ಇತರ ಹಿರಿಯ ಹೆಂಗಸರಾಗಲಿ ನನ್ನ ಕೆಲಸದಲ್ಲಿ ಸಹಾಯ ಮಾಡುತ್ತಿರಲಿಲ್ಲ. ಇತರರೊಡನೆ ಹರಟೆ ಹೊಡೆಯುವುದರಲ್ಲೋ ಅಥವಾ ದೇವರ ಹಾಡು ಹಸೆಯಲ್ಲಾಗಲಿ ತಮ್ಮ ಸಮಯವನ್ನವರು ಕಳೆದು ಬಿಡುತ್ತಿದ್ದರು.

"ಆ ಮನೆಯಲ್ಲಿ ನನ್ನ ಸಮವಯಸ್ಕ ಹೆಣ್ಣೆಂದರೆ ನಮ್ಮ ಯಜಮಾನರ ಕಿರಿಯ ತಂಗಿ. ಆಕೆ ತುಂಬಾ ಕರುಣಾಮಯಿ ಹಾಗೂ ಉಪಕಾರಿ ಕೂಡ. ನಾನು ಅವಳು ಮನೆ ಕೆಲಸವನ್ನು ಸರಿಸಮನಾಗಿ ಹಂಚಿಕೊಂಡು ಮಾಡುತ್ತಿದ್ದೆವು. ಆದರೆ ಅವಳು ಮದುವೆಯಾಗಿ ಗಂಡನ ಮನೆಗೆ ಹೋದ ಮೇಲೆ ಮನೆ ಕೆಲಸದ ಸಂಪೂರ್ಣ ಹೊರ ನನ್ನ ಮೇಲೆಯೇ ಬಿದ್ದಿತು......

"ನಾನು ಮಧ್ಯಾಹ್ನದ ಊಟ ಮುಗಿಸಬೇಕಾದರೆ ಗಂಟೆ ಒಂದು ಹೊಡೆದಿರುತ್ತಿತ್ತು. ನನಗೆ ದೊರಕುತ್ತಿದ್ದುದು ಕೇವಲ ಅರ್ಧ ಗಂಟೆಯ ವಿಶ್ರಾಂತಿ ಮಾತ್ರ. ವಿಶ್ರಾಂತಿಯ ನಂತರ ಮಧ್ಯಾಹ್ನದ ತಿಂಡಿ ಕೆಲಸ. ಅದಾದ ನಂತರ ಸಂಜೆಯ ಅಡಿಗೆ ಕೆಲಸ ಕಾದಿರುತ್ತಿದ್ದವು......

"ರಾತ್ರಿ ಹತ್ತು ಗಂಟೆಗೆ ನಾನು ನನ್ನ ಊಟ ಪೂರೈಸಿ ಅಡಿಗೆ ಮನೆ ತೊಳೆದು ಒರೆಸಿ ಮಾಡಿದ ಮೇಲೇ ನನ್ನ ದಿನದ ಕೆಲಸ ಕೊನೆಗಾಣುತ್ತಿದ್ದುದು. ದಿನವಿಡೀ ದುಡಿತದಿಂದಾಗಿ ನನ್ನ ದೇಹ ಎಷ್ಟೊಂದು ದಣಿದಿರುತ್ತಿತ್ತೆಂದರೆ ಹಾಸಿಗೆ ಮೇಲೆ ಉರುಳಿ ನಿದ್ದೆ ಮಾಡಿದರೆ ಸಾಕಷ್ಟು ಎಂದೆನಿಸಿಬಿಡುತ್ತಿತ್ತು. ಆದರೆ ಅಲ್ಲಿ ಕೋಣೆಯಲ್ಲಿ ರಾಮುವಿನ ಅಪ್ಪ ನನಗಾಗಿ ಕಾದಿರುತ್ತಿದ್ದರು. ಹೆಂಡತಿ ಗಂಡನಿಗೆ ಸಲ್ಲಿಸಬೇಕಾದ ಕರ್ತವ್ಯವನ್ನು ನಾನು ನಿಭಾಯಿಸಬೇಕಾಗುತ್ತಿತ್ತು......

"ಅಂದು ಹಬ್ಬದ ದಿನ. ಅಂದು ರಾತ್ರಿ ನಾನು ನನ್ನ ಹೆಚ್ಚಿನ ಕೆಲಸಗಳನ್ನು ಮಾಡಿ ಪೂರೈಸಿದಾಗ ಗಂಟೆ ಹನ್ನೊಂದು ಹೊಡೆದಿತ್ತು.

"ನಾನು ಕೆಲಸ ಮುಗಿಸಿ ಮಲಗಲೆಂದು ಕೋಣೆ ಸೇರಿದಾಗ ಅವರು ತಮ್ಮನ್ನು ಇಷ್ಟು ಹೊತ್ತು ಕಾಯಿಸಿದ್ದಕ್ಕಾಗಿ 'ಫಟೀರ್' ಎಂದು ಕೆನ್ನೆಗೆ ಬಾರಿಸಿದ್ದರು......"

ಅಜ್ಜಿ ಮಾತು ನಿಲ್ಲಿಸಿ ನಿಟ್ಟುಸಿರುಬಿಟ್ಟಳು. ಅತೀತದಲ್ಲಿಯೇ ಮುಳುಗಿದ್ದ ಅವಳು ತನ್ನ ಮಾತು ಮುಂದುವರೆಸಿದಳು. "ನಿನಗೆ ಗೊತ್ತಾ ಪ್ರೇಮ. ನಾನು ಏಳು ಮಕ್ಕಳನ್ನು ಹಡೆದೆ. ಆರು ಮಕ್ಕಳು ಮಗುವಿದ್ದಾಗಲೇ ತೀರಿಕೊಂಡು ಬಿಟ್ಟವು. ರಾಮು ಉಳಿದು, ಬೆಳೆದಾಗ ದೊಡ್ಡ ಪವಾಡವೇ ನಡೆಯಿತೇನೋ ಎಂದು ಸಂತಸಪಟ್ಟಿದ್ದೆ......

"ರಾಮುವಿನ ತಂದೆ ರಸ್ತೆ ಅಪಘಾತದಲ್ಲಿ ಮಡಿದಾಗ, ನನಗಿನ್ನೂ ಮೂವತ್ತೈದು ತುಂಬಿರಲಿಲ್ಲ. ಅವರ ಸಾವಿನ ಸುದ್ದಿ ತಿಳಿದಾಗ, ಮೊಟ್ಟಮೊದಲು ನನ್ನ ಮನದಲ್ಲಿ ಸುಳಿದ ವಿಚಾರವೆಂದರೆ, 'ದೇವರೇ ಇನ್ನು ಮುಂದಾದರೂ ರಾತ್ರಿಯ ವೇಳೆಯಲ್ಲಿ ನನ್ನ ದೇಹಕ್ಕೆ ಸ್ವಲ್ಪ ವಿಶ್ರಾಂತಿ ದೊರಕುತ್ತೆ......"

ಪ್ರೇಮ ತನ್ನ ಕೈ ಚಾಚಿ ಅಜ್ಜಿಯ ಕೈಗಳನ್ನು ಒತ್ತಿ ಹಿಡಿದು ಮೃದುವಾಗಿ ಸವರಿದಳು.

ಪ್ರೇಮಳಿಗೆ ಕಾವೇರಿ ಒಬ್ಬ ನುರಿತ ಗೃಹಿಣಿ ಹಾಗೂ ಒಳ್ಳೆಯ ಅತ್ತೆಯಂತೆ ಕಂಡು ಬಂದಳು. ಅಜ್ಜಿ ತಾನು ನವ ವಧುವಾಗಿದ್ದಾಗ ಪಟ್ಟಿದ್ದ ಯಾವೊಂದು ಬವಣೆಯೂ, ತನ್ನ ಸೊಸೆ ಪಡಬಾರದೆಂದು ಎಚ್ಚರ ವಹಿಸಿದ್ದರಿಂದ ಕಾವೇರಿ ಇದೀಗ ತಾನು ತನ್ನತ್ತೆಯಿಂದ ಬಳುವಳಿಯಾಗಿ ಪಡೆದ ಕರುಣೆಯ ಧಾರೆಯನ್ನು ತನ್ನ ಸೊಸೆಯತ್ತಲೂ ಹರಿಸಿದ್ದಳು.

ಒಮ್ಮೆ, ಕೇವಲ ಒಮ್ಮೆ ಮಾತ್ರ ಪ್ರೇಮಳಿಗೆ ಅನುಮಾನವುಂಟಾಗಿತ್ತು. ಕಾವೇರಿ ತನ್ನ ಅತ್ತೆತನದ ದರ್ಪವನ್ನು ಪ್ರದರ್ಶಿಸುತ್ತಿಲ್ಲವಷ್ಟೆ.

ಸಾಧಾರಣ ಇತರ ಬೀಗಿತ್ತಿಯರಂತೆ, ಕಾವೇರಿ ಪ್ರೇಮಳ ಮದುವೆಯ ಸಂದರ್ಭದಲ್ಲಿ ಮದುವೆಗೆ ಮಾಡಲಾದ ಖರೀದಿಯ ಬಗೆಗಾಗಲಿ ಮದುವೆಯ ಏರ್ಪಾಟಿನ ಬಗೆಗಾಗಲಿ ಯಾವೊಂದು ಆಕ್ಷೇಪಣೆಯನ್ನೂ ಮಾಡಿರಲಿಲ್ಲ. ಆದರೆ ಮದುವೆಯಾಗಿ ತಿಂಗಳು ನಾಲ್ಕು ಕಳೆದಿದ್ದರೂ, ಕಾವೇರಿ ಬೀಗರು ಕೊಟ್ಟಿದ್ದ ಜರಿಯಂಚಿನ ಕೆಂಪು ಕಂಚಿ ಸೀರೆ ಉಟ್ಟಿಲ್ಲದಿರುವುದು ಪ್ರೇಮಳಿಗೆ ಆಶ್ಚರ್ಯವನ್ನುಂಟುಮಾಡಿತ್ತು.

ಬಹುಶಃ ಬೀಗರು ಕೊಟ್ಟ ಉಡುಗೊರೆಯನ್ನು ತಿರಸ್ಕರಿಸುವುದರ ಮೂಲಕ, ಕಾವೇರಿ ತನ್ನ ಅತ್ತೆತನದ ದರ್ಪದ ಪ್ರದರ್ಶನ ಮಾಡುತ್ತಿಲ್ಲವಷ್ಟೆ ಎಂದವಳಿಗೆ ಅನುಮಾನವುಂಟಾಗಿತ್ತು.

ಇದೇ ಸಮಯದಲ್ಲಿ ಕಾವೇರಿಯ ಬಂಧುಗಳಲ್ಲಿ ಒಂದು ಮದುವೆ ಜರುಗಿತು. ಪ್ರೇಮ ತನ್ನತ್ತೆಗೆ ತನ್ನ ತೌರಿನವರು ಕೊಟ್ಟಿದ್ದ ಕೆಂಪು ಜರಿಸೀರೆಯನ್ನು, ಕಾವೇರಿ ಮದುಮಗಳಿಗೆ ಉಡುಗೊರೆಯಾಗಿ ಇತ್ತಿದ್ದನ್ನು ಗಮನಿಸಿದಳು. ಇದರಿಂದಾಗಿ ಅವಳ ಮನಸ್ಸಿಗೆ ಬಹಳ ನೋವುಂಟಾಯಿತು. ತನ್ನನ್ನು ತಾನೇ ನಿಯಂತ್ರಿಸಿಕೊಳ್ಳದಾದಳು.

ಅವರೆಲ್ಲ ಮದುವೆಯ ಮನೆಯಿಂದ ಹಿಂತಿರುಗಿದ ನಂತರ ಧೈರ್ಯ ವಹಿಸಿ ದಿಟ್ಟತನದಿಂದ ಅವಳೊಂದು ದಿನ ಕಾವೇರಿಯನ್ನು ಕೇಳಿಯೇ ಬಿಟ್ಟಳು. "ಅಮ್ಮ, ನಿಮಗೆ ನಮ್ಮ ಮನೇಲಿ ಕೊಟ್ಟಿದ್ದ ಉಡುಗೊರೆ ಸೀರೆ ಇಷ್ಟವಾಗಲಿಲ್ಲವೇ? ನಮ್ಮಮ್ಮ.ಅಪ್ಪ ಬಹಳ ಹುಡುಕಾಡಿ ನಿಮಗಾಗಿ ಆ ಸೀರೇನಾ ಆರಿಸಿ ತಂದಿದ್ದರು. ನಿಮಗದು ಇಷ್ಟವಾಗಬಹುದೂ ಅಂತ ವಿಶ್ವಾಸಪಟ್ಟಿದ್ದರು."

"ಸೀರೆ ಚೆನ್ನಾಗಿಯೇ ಇದೆಯಮ್ಮ!"

"ಹಾಗಾದ್ರೆ ನೀವದನ್ನ ಬೇರೆಯವರಿಗೆ ಯಾಕೆ ಕೊಟ್ಟುಬಿಟ್ಟರಿ. ದಯವಿಟ್ಟು ಅಮ್ಮ, ನನ್ನ ಅಪಾರ್ಥ ಮಾಡಿಕೊಳ್ಳಬೇಡಿ. ಆ ಸೀರೆಯನ್ನು ನೀವೇ ಉಟ್ಟುಕೊಂಡಿದ್ದರೆ ನನಗೆ ತುಂಬಾ ಸಂತೋಷವಾಗ್ತಾ ಇತ್ತು."

"ನೀನು ಹೇಳಿದ್ದರಲ್ಲಿ ನನಗೇನೂ ಬೇಸರವಿಲ್ಲಮ್ಮ. ನನಗೂ ಆ ಸೀರೇನಾ ನಾನೇ ಉಟ್ಟುಕೊಳ್ಳಬೇಕು ಅಂತ ತುಂಬಾ ಆಸೆ ಇತ್ತು."

"ಆಸೆ ಏನೋ ಇತ್ತು ಅಂತೀರಾ. ಹಾಗಾದ್ರೆ ನೀವೇ ಸೀರೇನಾ ಇಟ್ಟುಕೊಂಡು ಯಾಕೆ ಉಟ್ಟುಕೊಳ್ಳಲಿಲ್ಲ?"

"ಯಾಕೆಂದ್ರೆ ನಿಮ್ಮ ಮಾವನವರಿಗೆ ಕೆಂಪು ಬಣ್ಣಾಂದ್ರೇನೇ ಇಷ್ಟವಿಲ್ಲ. ಅದಕ್ಕೆ ನಾನು ಉಟ್ಟುಕೊಳ್ಳಲಿಲ್ಲ."

ಅತ್ತೆಯ ಉತ್ತರ ಕೇಳಿ ಪ್ರೇಮ ಅವಾಕ್ಕಾದಳು. ಎಂಥ ಅಸಂಬದ್ಧವಾದ ಕಾರಣ. ಅವಳು ತನ್ನ ಮಾವನವರ ಬಗೆಗೆ ಯೋಚಿಸಲಾರಂಭಿಸಿದಳು.

ಕಳೆದ ನಾಲ್ಕು ತಿಂಗಳಿಂದ ಅವಳು ಈ ಮನೆಯಲ್ಲಿದ್ದಳು. ರಾಮನಾಥನ್ ಒರಟು ಸ್ವಭಾವದ ವ್ಯಕ್ತಿಯಾದರೂ ಆತ ಎಂಥಾ ಸಹಾನುಭೂತಿಯುಳ್ಳ ಪತಿ ಎಂಬುದನ್ನವಳು ಗಮನಿಸಿದ್ದಳು.

ಪ್ರತಿದಿನ ಆತ ತಪ್ಪದೆ ತನ್ನ ಹೆಂಡತಿಯನ್ನು ಬಹಳ ಮುತುವರ್ಜಿಯಿಂದ ಅವಳ ಊಟ ತಿಂಡಿಯ ಬಗ್ಗೆ ವಿಚಾರಿಸಿಕೊಳ್ಳುತ್ತಿದ್ದ. ಕಳೆದ ತಿಂಗಳು ಕಾವೇರಿ ಅಸೌಖ್ಯದಿಂದ ಹಾಸಿಗೆ ಹಿಡಿದಿದ್ದಾಗ, ಪಟ್ಟಣದಲ್ಲಿ ದೊರಕುವ ಉತ್ತಮ ವೈದ್ಯಕೀಯ ನೆರವನ್ನು ಆಕೆಗೆ ಒದಗಿಸಿಕೊಟ್ಟಿದ್ದಲ್ಲದೆ, ಹೆಂಡತಿ ಪುನಃ ಚೇತರಿಸಿಕೊಳ್ಳುವ ವರೆಗೂ ಆತ ಅವಳ ಪಕ್ಕ ಬಿಟ್ಟಿದ್ದಿರಲಿಲ್ಲ.

ಒಮ್ಮೆ ಕಾವೇರಿ ತನ್ನ ಪೂಜೆಗೆಂದು,

## ಲೋಕಜ್ಞಾನ

1 ರಾಮಕೃಷ್ಣ ಪರಮಹಂಸ ಹಾಗೂ ರವೀಂದ್ರನಾಥ ಟಾಗೂರ್ ಸಂದರ್ಶಿಸಿ ನಾಟಕಗಳನ್ನು ನೋಡಿದ್ದ ರಂಗಮಂದಿರ ಯಾವುದು?

2 ಪ್ಯಾರೀಸಿನ ಹೆರಾಲ್ಡ್ ಟ್ರಿಬ್ಯೂನ್ ಪತ್ರಿಕೆಗೆ 15 ವರ್ಷಗಳಷ್ಟು ಕಾಲ ಅಂಕಣಕಾರರಾಗಿದ್ದ ಪುಲಿಟ್ಜರ್ ಬಹುಮಾನ ಪಡೆದ ವ್ಯಕ್ತಿ ಯಾರು?

3 ಬರ್ಮಾ ದೇಶದ ಈಗಿನ ಹೆಸರೇನು?

4 ಇದುವರೆಗೂ ಎಷ್ಟು ಜನ ಮಹಿಳಾ ಕ್ರೀಡಾಪಟುಗಳು 'ಅರ್ಜುನ' ಪ್ರಶಸ್ತಿ ಪಡೆದಿದ್ದಾರೆ.

5 ಮಹಾಕವಿ ರನ್ನ ಹಾಗೂ ಪೊನ್ನ ಮುಂತಾದವರಿಗೆ ಆಶ್ರಯ ನೀಡಿ ಉತ್ತೇಜನ ನೀಡಿದ ಮಹಿಳೆ ಯಾರು?

6 ಜನರೇಟರನ್ನು ಕಂಡು ಹಿಡಿದವರು ಯಾರು?

7 ವಿಶ್ವದ ಅತ್ಯಂತ ದೊಡ್ಡ ವಜ್ರದ ಗಣಿ ಎಲ್ಲಿದೆ?

[ಲೋಕಜ್ಞಾನ ಉತ್ತರಗಳು ಇದೇ ಸಂಚಿಕೆಯಲ್ಲಿವೆ. ಹುಡುಕಿ ನಿಮ್ಮ ಉತ್ತರಗಳಿಗೆ ಸರಿಪಡಿಸಿಕೊಳ್ಳಿ]

ಶ್ರೀಕೃಷ್ಣನ ವಿಶಿಷ್ಟ ಭಂಗಿಯ ಪಟವೊಂದು ಬೇಕೆಂದು ಇಚ್ಛಿಸಿದಾಗ ರಾಮನಾಥನ್ ಮದರಾಸಿನ ಪ್ರತಿಯೊಂದು ಅಂಗಡಿಯನ್ನೂ ಜಾಲಾಡಿ, ಒಂದು ವಾರದೊಳಗೇ ವಿಜಯ ಸಾಧಿಸಿ, ಹೆಂಡತಿ ಅಪೇಕ್ಷಿಸಿದ್ದನ್ನು ಆಕೆಗೆ ತಂದೊಪ್ಪಿಸಿ, ಹೆಂಡತಿಯ ತೃಪ್ತಿಯ ಮಂದಹಾಸ ದೊಂದಿಗೆ, ತಮ್ಮ ಮಂದಹಾಸವನ್ನು ಬೆರೆಸಿದ್ದರು.

ಇದೆಲ್ಲದುದಕ್ಕಿಂತ ಅಜ್ಜಿ ತನಗೆ ಆತನ ಬಗ್ಗೆ ಹೇಳಿದ್ದ ಮಾತನ್ನು ಜ್ಞಾಪಿಸಿಕೊಂಡಳು. ಕಾವೇರಿಗೆ ಚೊಚ್ಚಲು (ಸುರೇಶ) ಹಾಗೂ ಮೂರು ವರ್ಷಗಳ ನಂತರ ಜನಿಸಿದ ಹೆಣ್ಣು ಮಗುವಿನ (ಆಕೆ ಮದುವೆಯಾಗಿ, ಗಂಡನೊಡನೆ ಇಂಗ್ಲೆಂಡಿನ ಲ್ಲಿದ್ದಳು) ಪ್ರಸವ ಕಾಲದಲ್ಲಿ ಬಹಳಷ್ಟು ತೊಂದರೆ ಅನುಭವಿಸಬೇಕಾಗಿ ಬಂತು. ವೈದ್ಯರು ಕಾವೇರಿಯ ಆರೋಗ್ಯವನ್ನು ಗಮನದಲ್ಲಿಟ್ಟುಕೊಂಡು, ಆಕೆ ಪುನಃ ತಾಯಿಯಾಗದಂತೆ ಜಾಗ್ರತೆ ವಹಿಸ ಬೇಕೆಂದು ಸಲಹೆ ನೀಡಿದ್ದರು. ರಾಮನಾಥನ್ ಕೂಡಲೇ ಮುಂದೆ ಮಕ್ಕಳಾಗದಂತೆ, ತಾವೇ ಶಸ್ತ್ರಚಿಕಿತ್ಸೆಗೆ ಒಳಗಾಗಿ, ತಮ್ಮ ಹೆಂಡತಿಯ ಆರೋಗ್ಯಕ್ಕೆ ಯಾವ ರೀತಿಯಲ್ಲೂ ಅಡಚಣೆ ಉಂಟಾಗದಂತೆ ಎಚ್ಚರವಹಿಸಿದ್ದರು.

ಈ ಎಲ್ಲಾ ಆಲೋಚನೆಗಳು ಮನಃಪಟಲದ ಮೇಲೆ ಸುಳಿದಾಗ, ಪ್ರೇಮ ನಸುನಕ್ಕಳು. ಎಂಥಾ ವಿಪರ್ಯಾಸ ! ತನ್ನ ಗಂಡ ಒಳ್ಳೆಯವನಾದರೂ, ಅತ್ತೆ ಅದನ್ನು ಒಪ್ಪಿಕೊಂಡು, ಆತನ ಒಳ್ಳೆಯತನ ವನ್ನು ಪ್ರಶಂಸೆಗೆ ಏಕೆ ಗುರಿ ಮಾಡುತ್ತಿಲ್ಲ.

"ಅಮ್ಮ ಮಾವನವರಿಗೇನೋ ಕೆಂಪು ಬಣ್ಣ ಇಷ್ಟವಿಲ್ಲದಿರಬಹುದು. ಆದರೆ ನೀವು ಇಷ್ಟ ಪಟ್ಟು ಉಟ್ಟುಕೊಂಡಿದ್ದಲ್ಲಿ ಅವರೆಂದೂ ಅಡ್ಡಿ ಮಾಡುತ್ತಿರಲಿಲ್ಲ."

ಕಾವೇರಿಯ ತುಟಿಗಳ ಮೇಲೆ ಕುಹಕದ ನಗೆ ತೇಲಿ ಬಂತು. "ನೀನು ಅಪಾರ್ಥ ಮಾಡಿ ಕೊಂಡಿದ್ದೀಯ ಪ್ರೇಮ. ನಿಮ್ಮ ಮಾವನವರು ನಾನು ಕೆಂಪು ಬಣ್ಣದ ಸೀರೆ ಉಟ್ಟುಕೊಳ್ಳಲೇ ಬಾರದೆಂದು ಕಟ್ಟಾಜ್ಞೆ ಮಾಡಿದ್ದಾರೆ. ಕೆಂಪು ಚುಕ್ಕೆ, ಕೆಂಪು ಗೀರು, ಕೆಂಪಂಚಿನ ಚುಳ್ಳ ಸೀರೆಯಾದರೆ ಪರವಾಗಿಲ್ಲ. ಆದರೆ ಕೆಂಪು ಒಡಲಿನ ಸೀರೆಯನ್ನು ನಾನು ಉಡುವ ಹಾಗೇ ಇಲ್ಲ. ಒಂದೇ ಕಾರಣ. ಅವರಿಗೆ ಕೆಂಪು ಬಣ್ಣಾಂದ್ರೆ ಆಗೋದಿಲ್ಲ. ನಾನು ನನ್ನ ಮದುವೆಯದಾರಭ್ಯ ಕೆಂಪು ಸೀರೆಯನ್ನೇ ಉಟ್ಟಿಲ್ಲ."

ಪ್ರೇಮಳಿಗೆ ಅತ್ತೆಯ ಮಾತು ಕೇಳಿ ಆಘಾತ ವಾಯಿತು.

"ಅವರೇನೋ ಒಳ್ಳೆಯ ಪತಿ ಅನ್ನೋದರಲ್ಲಿ ಒಂದಿನಿತೂ ಸಂಶಯವಿಲ್ಲ. ಆದರೆ ಅವರೊಪ್ಪಿಗೆ ಪಡೆಯದೆ ನಾನು ಯಾವುದಾದ್ರೂ ಕೆಲಸ ಮಾಡಿದ ರಾಯ್ತು. ನನ್ನ ಗತಿ ಮುಗೀತೂಂತಲೇ."

"ಹಾಗಾದ್ರೆ ಅವರು ನಿಮ್ಮನ್ನ ಹೊಡೆದೇ ಬಿಡ್ತಾರಾ."

"ಇಲ್ಲ, ಇಲ್ಲ ಅವರೆಂದೂ ನನ್ನ ಮೇಲೆ ಕೈಮಾಡಿಲ್ಲ. ಹೊಡೆಯೋದು ತಮ್ಮ ಅಸಮಾಧಾನವನ್ನು ಸೂಚಿಸುವ ಏಕೈಕ ಮಾರ್ಗವಲ್ಲ." ಕಾವೇರಿಯು [illegible] ಜ್ಞಾಪಿಸಿ ಕೊಂಡಳು.

"[illegible] ನನ್ನ [illegible] [illegible] [illegible]

ಕ್ಕೆಂದು ನಾನು ನನ್ನ ಸ್ನೇಹಿತಳ ಮನೆಗೆ ಹೋಗಿದ್ದೆ. ಅವಳು ನವರಾತ್ರಿಯ ಗೊಂಬೆಗಳನ್ನು ಜೋಡಿಸಿಟ್ಟಿದ್ದರ ಪೈಕಿ, ಒಂದು ನನಗೆ ಬಹಳ ಇಷ್ಟವಾಯಿತು. ಅದೆಂದರೆ ಚಿತ್ತಾರದ ಹಲಗೆಯ ಮೇಲೆ ನಿಂತಿರುವ ಪಟ್ಟದ ಆನೆ. ಪಕ್ಕದಲ್ಲೇ ಸಣ್ಣ ಮರಿ ಆನೆ...

"ಅದೊಂದು ಅಪರೂಪದ ಕಲಾಕೃತಿ. ಬಹಳ ನವಿರಾದ ಕರ ಕುಶಲತೆ. ನನ್ನ ಸ್ನೇಹಿತೆ ಅದು 'ತಂಜಾವೂರಿನ ಲೇತ್ ಕಲೆಯ ನಮೂನೆ' ಎಂದು ಹೇಳಿದಳು. ತಂಜಾವೂರಿನ ಕಲಾಕೃತಿಯಾದರೂ, ಅದು ಮದರಾಸಿನಲ್ಲೂ ಅನಾಯಾಸವಾಗಿ ದೊರಕುವುದೆಂದು ಅವಳು ತಿಳಿಸಿದಳು. ಅಲ್ಲದೆ ಆಗ ಎಲ್ಲರ ಮನೆಗಳಲ್ಲೂ ನವರಾತ್ರಿಯ ಗೊಂಬೆಯ ಜೊತೆ ಅದನ್ನು ಕೊಂಡುಕೊಂಡಿದ್ದರು.

"ನಾನು ಪರವಶಳಾಗಿ, ಅದು ದೊರೆಯುವ ಅಂಗಡಿಯ ವಿಳಾಸವನ್ನು ಅವಳಿಂದ ಪಡೆದು ಮಾರನೆಯ ದಿನ ಸಂಜೆಯ ವೇಳೆಗೆ ಅದೇ ತರಹದ ಗೊಂಬೆಯನ್ನು ಹಣಕೊಟ್ಟು ಅಂಗಡಿ ಯಿಂದ ಖರೀದಿಸಿ ತಂದೆ.

"ಈ ವಿಷಯವನ್ನು ಮೊದಲೇ ನಾನು ನಿನ್ನ ಮಾವನವರಿಗೆ ತಿಳಿಸಿರಲಿಲ್ಲ: ನಾನವರನ್ನು ಚಕಿತ ಗೊಳಿಸಬೇಕೆಂದು ಲೆಕ್ಕ ಹಾಕಿದ್ದೆ. ಅವರೆಂದೂ ನನ್ನ ಕೆಲಸವನ್ನು ಆಕ್ಷೇಪಿಸುವುದಿಲ್ಲ ಎಂದು ನನ್ನ ಭಾವನೆಯಾಗಿತ್ತು.

"ಆದರೆ ಅವರು ನಿಮ್ಮನ್ನು ಆಕ್ಷೇಪಿಸಿದರೆ ?" ಕಾವೇರಿ ತನಗರಿವಿಲ್ಲದೆಯೇ ಒಮ್ಮೆ ನಡುಗಿದಳು. "ನಾನೆಂದೂ ಅವರ ಅಂದಿನ ಮುಖಭಾವವನ್ನು ಮರೆಯೋದಿಲ್ಲ. ಅಂದು ಅವರಾಡಿದ ಮಾತು ಗಳಿನ್ನೂ ನನ್ನ ಕಿವಿಯಲ್ಲಿ ಗುಂಯ್ ಗುಡುತ್ತಿವೆ. "ನನ್ನ ಕೇಳ್ದೇ ಅದನ್ನು ಹೇಗೆ ತಂದೆ, ನಿನಗೆಷ್ಟೇ ಧೈರ್ಯ ?"

"ಆ ದಿನವೇ 'ಅದನ್ನು ಅಂಗಡಿಗೆ ತೆಗೆದು ಕೊಂಡು ಹೋಗಿ ಹಿಂತಿರುಗಿಸಿ ಬಾ' ಎಂದರು. ಸುಂದರ ಕಲಾಕೃತಿಯಿಂದ, ಪಡೆದ ನನ್ನ ಆನಂದ ವೆಲ್ಲ ಒಮ್ಮೆಗೇ ಜರ್ರೆಂದು ಇಳಿದುಹೋಯಿತು. ನಾನದನ್ನು 'ಇಟ್ಟುಕೊಳ್ಳೇನೆ' ಎಂದರೂ ಅವರು ಅದನ್ನು ಒಪ್ಪಲಿಲ್ಲ."

"ಆ ಕಲಾಕೃತಿ ಅಷ್ಟೊಂದು ಬೆಲೆ ಬಾಳು ವಂಥಾದ್ದೇ ? ಅದು ಅಷ್ಟೊಂದು ದುಬಾರಿ ಯಾಗಿತ್ತೇ ?"

"ಅದರ ಬೆಲೆ ಅಂಥಾದ್ದೇನೂ ಹೆಚ್ಚಾಗಿರಲಿಲ್ಲ. ಅವರಿಗೆ ಬೆಲೆ ಅಷ್ಟೊಂದು ಮುಖ್ಯವಾಗಿರಲಿಲ್ಲ. ಈ ಮೊದಲೇ ನಾನು ಅವರ ಅನುಮತಿ ಪಡೆದಿ ದ್ದರೆ ಅವರು ಬೆಲೆಯ ಬಗ್ಗೆ ಆಕ್ಷೇಪಿಸುತ್ತಲೂ ಇರಲಿಲ್ಲ. ಅಂಗಡಿಯವರು ಒಮ್ಮೆ ತಾವು ಮಾರಿದ ವಸ್ತುವನ್ನು ಹಿಂದಕ್ಕೆ ತೆಗೆದುಕೊಳ್ಳಲು ನಿರಾಕರಿಸಿ ಬಿಟ್ಟರು. ಕೊನೆಗೆ ನನ್ನ ಸ್ನೇಹಿತೆ ನನ್ನ ಕಷ್ಟ ನೋಡಲಾರದೆ, ನನ್ನ ಮೇಲಿನ ಅನುಕಂಪದಿಂದ ನನ್ನನ್ನು ಅಸಹಾಯಕತೆಯಿಂದ ಪಾರುಮಾಡಲು, ಬೇರೆ ಇನ್ನ್ಯಾರಿಗೋ ಬೇಕೆಂದು ಸುಳ್ಳು ಹೇಳಿ, ತಾನೇ ಹಣಕೊಟ್ಟು ಅದನ್ನು ನನ್ನಿಂದ ತೆಗೆದು ಕೊಂಡಳು.

"ಇವತ್ತಿಗೂ ಮೂರ್ತಿಯಿಂದ ನಾನು ಪಡೆದಿದ್ದ ಆನಂದ ಹಾಗೂ ಅದನ್ನು ಅವರು 'ಹಿಂತಿರುಗಿಸಿಬಿಡು' ಎಂದಾಗ ನನಗಾದ ದುಃಖ ಇವೆರಡನ್ನು ಮರೆಯಲು ಸಾಧ್ಯವಾಗೇ ಇಲ್ಲ."

"ನೀವು ಕಲಾಕೃತಿಗಾಗಿ ಹಂಬಲಿಸೋದನ್ನು ನೋಡಿ ಮಾವನವರು ತಕ್ಷಣವಲ್ಲದಿದ್ದರೂ, ಸ್ವಲ್ಪ ದಿನಗಳ ನಂತರವಾದರೂ ನಿಮಗದನ್ನು ತಂದು ಕೊಡಬಹುದಿತ್ತು."

"ಅವರೇನೋ ನೀನಂದಂತೆಯೇ ಮಾಡಿದರು. ಆದರೆ ಅದನ್ನು ನೋಡಿದಾಗಲೆಲ್ಲ ಆ ಮೂರ್ತಿ ನನಗೆ ಯಾವ ಕೆಲಸ ಮಾಡಲೂ ಸ್ವಾತಂತ್ರ್ಯವಿಲ್ಲ ಎಂಬುದನ್ನು ನೆನಪು ಮಾಡಿಕೊಡುತ್ತಿತ್ತು. ಅದಕ್ಕೆ ಬೇಸರಗೊಂಡು ನಾನದನ್ನು ಪೆಟ್ಟಿಗೆಯಲ್ಲಿಟ್ಟು ಬೇಗ ಜಡಿದಿಟ್ಟದ್ದೆ.

"ನನ್ನ ಮಗಳ ಮದುವೆಯಲ್ಲಿ ನಿಮ್ಮ ಮಾವ ನವರ ಒಪ್ಪಿಗೆ ಪಡೆದೇ ನಾನು ಅದನ್ನು ನನ್ನ ಮಗಳಿಗೆ ಉಡುಗೊರೆಯಾಗಿ ಕೊಟ್ಟುಬಿಟ್ಟೆ. ಹಗಲೆಲ್ಲ ಅವಳು ಕಾಗದ ಬರೀತಿರ್ತಾಳೆ 'ಲಂಡ ನ್ನಿನ ಅವಳ ಮನೆಯ ಹಜಾರದಲ್ಲಿ ಆ ಆನೆಗಳು ಭಾರತೀಯ ಕಲಾ ನಮೂನೆಯಾಗಿ ಅವಳ ವಿದೇಶಿ ಸ್ನೇಹಿತರನ್ನು ಮುಗ್ಧಗೊಳಿಸಿದೆ' ಅಂತ."

ಪ್ರೇಮ ಅತ್ತೆಯ ಮುಖಭಾವವನ್ನು, ಅಲ್ಲಿ ತುಂಬಿರುವ ಖಿನ್ನತೆಯನ್ನು ಗಮನಿಸಿ ಏನನ್ನೂ ಮಾತನಾಡದೆ ಮೌನಿಯಾದಳು.

ಈ ಸಂಭಾಷಣೆಯ ನಂತರ ಪ್ರೇಮಳಿಗೆ ಕಾವೇರಿ ತೀರಾ ಸಮೀಪದವಳಾದಳು. ಕಾವೇರಿ ಯಾದರೂ ತನ್ನ ವೈಯಕ್ತಿಕ ನೋವಿನ ವಿಷಯ ವನ್ನು ತನ್ನ ಸೊಸೆಯೊಂದಿಗೆ ಹಂಚಿಕೊಂಡಿದ್ದಳು.

ಪ್ರೇಮ ಮನೆಯಲ್ಲಿನ ಆ ಇಬ್ಬರು ಹೆಂಗಸ ರನ್ನು ಬಹಳ ಅಂತಃಕರಣದಿಂದ ಕಾಣಲಾರಂಭಿ ಸಿದಳು. ಆ ಮನೆಯಲ್ಲಿ ಸುರೇಶ ಅವಳಿಗೆ ಅತಿ ಮುಖ್ಯ ವ್ಯಕ್ತಿಯಾಗಿದ್ದ. ಅವನೊಂದಿಗೆ ಹೊಂದಿ ಕೊಂಡು ಬಾಳುವುದು ಅಷ್ಟೇನೂ ಕಷ್ಟದಾಯಕ ವಾಗಿರಲಿಲ್ಲ. ಅವಳು ಮಾವನವರಿಂದ ಮೊದಲಿ ನಿಂದಲೂ ದೂರವಾಗಿಯೇ ಇದ್ದಳು. ಇದರಿಂದ ಅವಳ ದೈನಂದಿನ ಕಾರ್ಯಕಲಾಪಗಳ ಮೇಲೆ

## ಹೊಸತು

ಬರೆಯ ಬೇಕಿತ್ತೊಂದು ಹೊಸ ಕವನ
ಮೂಡುವ ದಿನಮಣಿಯ ಹಾಗೆ
ನಲ್ಲನ ಪ್ರೀತಿಗೆ ಕೆಂಪೇರಿದ
ನಲ್ಲೆಯ ಕೆನ್ನೆಯ ಹಾಗೆ
ಹಾಡಬೇಕಿತ್ತೊಂದು ಹೊಸ ಹಾಡು
ಕುಹೂ ಕೋಗಿಲೆಯ ಇನಿದನಿಯ ಹಾಗೆ
ರಮಿಸಿದ ನಲ್ಲನಲಿ
ಮೊಂಡಾಟವಾಡುವ ನಲ್ಲೆಯ ಹಾಗೆ
ಕೇಳಬೇಕಿತ್ತೊಂದು ಹೊಸಗಾನ
ದುಂಬಿಯ 'ಝೇಂಕಾರದ ಹಾಗೆ
ನಲ್ಲನ ನುಡಿಗೆ ಉಲಿವ
ನಲ್ಲೆಯ ಕಂಠದ ಹಾಗೆ
ಹೇಳಬೇಕಿತ್ತೊಂದು ಹೊಸನುಡಿಯ
ಬಿದಿಗೆಯ ಚಂದ್ರನ ಹಾಗೆ
ನಲ್ಲನ ಪ್ರೀತಿಯ ಕೊಡುಗೆ
ನಲ್ಲೆಯಲ್ಲಿ ಗೋಚರಿಸಿದ ಹಾಗೆ

—ಶೈಲಜಾ, ಪುದುಕೋಳಿ

ಅದು ಯಾವ ಪರಿಣಾಮವನ್ನು ಬೀರಿರಲಿಲ್ಲ. ಕ್ರಮೇಣ ಅವಳ ನಾಚಿಕೆ, ಸಂಕೋಚ ಕಡಿಮೆಯಾಗುತ್ತ ಬಂತು. ಇದರಿಂದ ಅವಳು ಸ್ವಲ್ಪ ನಿರಾತಂಕಳಾದಳು.

ಮಧ್ಯಾಹ್ನದ ವಿರಾಮದ ವೇಳೆ ಅವಳು ಅಜ್ಜಿಯೊಡನೆ ಹರಟೆ ಹೊಡೆದು, ಅಜ್ಜಿ ಮಾತಿನ ನಡುವೆಯೇ ತೂಕಡಿಸಲಾರಂಭಿಸಿದಾಗ, ಮೆಲ್ಲನೆ ಅವರ ಪಕ್ಕ ಬಿಟ್ಟೆದ್ದು ತನಗೆ ಹಾಗೂ ಸುರೇಶನಿಗೆಂದು ಪ್ರತ್ಯೇಕವಾಗಿದ್ದ ಕೋಣೆಗೆ ಬಂದು ಕೈಯಲ್ಲಿ ಓದಲು ಪುಸ್ತಕವನ್ನು ಹಿಡಿದು ಹಾಗೇ ಹಾಸಿಗೆಯ ಮೇಲೆ ಒರಗಿಕೊಂಡಳು. ಆಗಲೇ ಮುಂಬಾಗಿಲಿನ ಕರೆಗಂಟೆ ಒತ್ತಿದ ಸದ್ದಾಯಿತು.

ಅವಳೆದ್ದು ಕೋಣೆಯಿಂದ ಹೊರಬಂದು ಮುಂಬಾಗಿಲನ್ನು ತೆರೆದಳು.

ಒಬ್ಬ ಯುವತಿ ಹಾಗೂ ಒಬ್ಬ ಚಿಕ್ಕ ಹುಡುಗ ಹೊರಬಾಗಿಲಲ್ಲಿ ನಿಂತಿದ್ದರು. ಆಕೆ ತನ್ನೆರಡೂ ಕೈಗಳನ್ನು ಜೋಡಿಸಿ, ನಸುನಕ್ಕು 'ನಮಸ್ಕಾರ' ಎಂದಳು.

"ನೀವ್ಯಾರು ? ಏನಾಗಬೇಕಿತ್ತು ?"

"ನಾವು ಸಮಾಜ ಮಂಡಳಿಯ ವತಿಯಿಂದ ಬಂದಿದ್ದೇವೆ."

ಆಕೆ ಹೆಸರಿಸಿದ ಮಂಡಳಿಯ ಬಗ್ಗೆ ಈಗಾಗಲೇ ಪ್ರೇಮ ಬಹಳ ಕೇಳಿದ್ದಳು. ಬಡ ಕುರುಡು ಮಕ್ಕಳಿಗಾಗಿ ಮಂಡಳಿ ಅಪಾರವಾಗಿ ಶ್ರಮಿಸಿತ್ತು.

"ನಾನು ಅಲ್ಲಿ ಕೆಲಸ ಮಾಡ್ತಾ ಇದೀನಿ. ಬಡ ಕುರುಡು ಮಕ್ಕಳ ನಿಧಿ ಸಂಗ್ರಹಣಾರ್ಥವಾಗಿ ಬರುವ ಭಾನುವಾರ ಸಂಜೆ, ನಾವು ವಿವಿಧ ಮನೋರಂಜನಾ ಕಾರ್ಯಕ್ರಮವನ್ನು ಏರ್ಪಡಿಸಿದ್ದೇವೆ. ಚಂದಾ ಎತ್ತಲು ನಾವು ಟಿಕೇಟು ಮಾರುತ್ತಾ ಇದೀವಿ. ನೀವು..."

ಆಕೆ ಹೆಗಲಿಗೇರಿಸಿದ ತನ್ನ ಬ್ಯಾಗಿನಿಂದ ಮೂರು ಚಂದಾ ಪುಸ್ತಕಗಳನ್ನು ಹೊರತೆಗೆದು "5, 10, 25 ರೂಪಾಯಿಗಳ ಟಿಕೇಟುಗಳಿವೆ. ನೀವು ಕೊಂಡು ಕೊಳ್ತೀರಾ ?" ಎಂದು ಕೇಳುವಾಗ ಅವಳ ಮುಖದಲ್ಲಿ ಆಸೆ ಸಂದೇಹಗಳು ಬೆರೆತ ಮುಗುಳ್ನಗೆ ಮೂಡಿತ್ತು. ಅಂದರೆ ಕೊಳ್ಳಬಹುದೆಂಬ ಆಸೆ, ಒಂದು ವೇಳೆ ಬೇಡವೆಂದರೆ ಅದನ್ನು ಕೇಳಲು ಸಿದ್ಧಳಾಗಿರುವಂತೆ ತೋರಿತು.

"ಕಾರ್ಯಕ್ರಮದಲ್ಲಿ ನಾನೂ ಭಾಗವಹಿಸ್ತಾ ಇದೀನಿ ಆಂಟಿ" ಆ ಪೋರ ದನಿ ಎತ್ತಿದ.

ಪ್ರೇಮ ತನ್ನೆಡೆ ತಲೆ ಎತ್ತಿದ ಆ ಹುಡುಗನ ಮುಖ ದಿಟ್ಟಿಸಿದಳು. ಎತ್ತಲೋ ದೃಷ್ಟಿ ನೆಟ್ಟ ಕಂಗಳನ್ನು ಗಮನಿಸಿದಾಗಲೇ ಅವಳ ಅರಿವಿಗೆ ಬಂದದ್ದು ಆ ಹುಡುಗ 'ದೃಷ್ಟಿಹೀನ' ಎಂದು.

"ರಾಜಾರಾಣಿಯರ ನಾಟಕದಲ್ಲಿ ನಾನು ರಾಜಸಭೆಯ ಗಾಯಕನ ಪಾತ್ರ ವಹಿಸಿದೀನಿ. ನಾನು ಚೆನ್ನಾಗಿ ಹಾಡ್ತೀನಿ. ಆಂಟಿ."

"ಹೌದೇನಪ್ಪಾ. ಬಹಳ ಸಂತೋಷ. ಖಂಡಿತವಾಗಿಯೂ ನಾನು ಬಂದು ನಿನ್ನ ಹಾಡು ಕೇಳ್ತೀನಿ" ಪ್ರೇಮ ಉತ್ತೇಜಿತಳಾಗಿ ಒಂದೇ ಉಸಿರಿನಲ್ಲಿ ಉಸಿರಿದಳು.

"ದಯವಿಟ್ಟು ಒಂದು ನಿಮಿಷ ಇರಿ" ಎಂದು ಹೇಳಿ, ತನ್ನ ಕೋಣೆಗೆ ಹಿಂತಿರುಗಿದಳು. ಸುರೇಶನು ಬೀರುವಿನಲ್ಲಿ ಮಡಿಸಿಟ್ಟ ಬಟ್ಟೆಗಳ ಅಡಿಯಲ್ಲಿ ತನ್ನ ಪರ್ಸ್ ಇಡುವುದು ಅವಳಿಗೆ ತಿಳಿದಿತ್ತು. ಬೀರು ಬಾಗಿಲು ತೆಗೆದು ಪರ್ಸ್ ತೆಗೆದಳು. ಅದರಲ್ಲಿ ಎಂಭತ್ತೇಳು ರೂಪಾಯಿ ಹಾಗೂ ಕೆಲವು ಚಿಲ್ಲರೆ ಹಣವಿತ್ತು. ಅದರಿಂದ ಐವತ್ತರ ನೋಟೊಂದನ್ನು ಹೊರತೆಗೆದು ಪರ್ಸನ್ನು ಸ್ವಸ್ಥಾನದಲ್ಲಿರಿಸಿ ಹೊರ ಬಂದಳು.

"ನೋಡಮ್ಮ 25 ರೂಪಾಯಿಗಳ ಎರಡು ಟಿಕೇಟು ಕೊಡಿ" ಎಂದು ಐವತ್ತರ ನೋಟನ್ನು ಅವಳ ಕೈಗಿತ್ತು ಮೃದುವಾಗಿ ವಾತ್ಸಲ್ಯದಿಂದ ಆ ಹುಡುಗನ ತಲೆ ಸವರಿದಳು.

"ಅನಂತ ಧನ್ಯವಾದಗಳು ಮ್ಯಾಡಮ್" ಎಂದಳಾ ಯುವತಿ.

ಅವರಿಬ್ಬರು ಟಿಕೇಟು ಕೊಟ್ಟು ಹೊರಟು ಹೋದನಂತರ ಪ್ರೇಮ ಬಾಗಿಲು ಮುಚ್ಚಿ ತನ್ನ ಕೋಣೆಗೆ ಹಿಂತಿರುಗಿದಳು. ಅವಳಿಂದ ಪುಸ್ತಕದ ಓದನ್ನು ಮುಂದುವರಿಸಲು ಸಾಧ್ಯವಾಗಲಿಲ್ಲ. ಸ್ವಲ್ಪಕಾಲ ಅವಳ ಮನಸ್ಸು ಅಂಧ ಮಕ್ಕಳ ಬವಣೆಯ ಬಗ್ಗೆಯೇ ಯೋಚಿಸುತ್ತಲಿತ್ತು.

ತಟ್ಟನೆ ತಾನು ಮಾಡಿದ ಕೆಲಸವನ್ನು ಅವಳು ಜ್ಞಾಪಿಸಿಕೊಂಡಾಗ ಅವಳ ಮನ ಬೆದರಿತು.

ಅವಳು ತನ್ನ ಗಂಡನ ಅನುಮತಿಯಿಲ್ಲದೆ, ಐವತ್ತರ ನೋಟನ್ನು ತೆಗೆದು ಅವರಿಗೆ ಕೊಟ್ಟುಬಿಟ್ಟಿದ್ದಳು.

ಗಂಡ ಏನೆನ್ನುವನೋ ಎಂದು ಅವಳಿಗೆ ಆತಂಕವಾಯಿತು. ಈ ಕಳೆದ ಆರು ತಿಂಗಳಲ್ಲಿ ಅವನನ್ನು ಚೆನ್ನಾಗಿ ಅರಿತಿರುವುದಾದರೂ ಎಲ್ಲಿ ? ಅವನೇನೋ ಒಬ್ಬ ಒಳ್ಳೆಯ ಪತಿ; ಹಸನ್ಮುಖಿ, ಸ್ನೇಹಮಯಿ ಎನ್ನುವುದೇನೋ ದಿಟ.

ಇಲ್ಲಿಯವರೆಗೂ ಎಲ್ಲವೂ ಸರಿಯಾಗಿಯೇ ನಡೆದಿತ್ತು. ಸುರೇಶನ ಸ್ವಭಾವವನ್ನು ಪರೀಕ್ಷಿಸುವ ಯಾವೊಂದು ಘಟನೆಯೂ ಇದುವರೆಗೂ ಘಟಿಸಿರಲಿಲ್ಲ.

ತಾನು ಮಾಡಿದ ಕೆಲಸಕ್ಕೆ ಅವನು ಯಾವ ರೀತಿ ಪ್ರತಿಕ್ರಿಯಿಸುವನೋ ಎಂದು ಯೋಚಿಸಿ ಅವಳಿಗೆ ವಿಪರೀತ ಭಯವಾಯಿತು.

ತನ್ನನ್ನು ತಾನೇ ಸಮಾಧಾನಮಾಡಿಕೊಳ್ಳಲು ಐವತ್ತು ರೂಪಾಯಿ ಏನೋ ಅಂಥಾ ದೊಡ್ಡ ಮೊತ್ತವೇನಲ್ಲ ಎಂದು ಅವಳು ತನಗೆ ತಾನೇ ಹೇಳಿಕೊಂಡಳು.

ಆದರದು ಅರ್ಥವಿಲ್ಲದ ಸಮಾಧಾನವೆಂದು ಅವಳಿಗನ್ನಿಸಿತು. ಅವಳ ಬಳಗದಲ್ಲೇ ಎಷ್ಟೋ ಗಂಡಸರು ತಮ್ಮ ಹೆಂಡಂದಿರು ಅವರ ಸಂಬಳದಲ್ಲೇ ಸ್ವಲ್ಪ ಹಣ ಖರ್ಚುಮಾಡಿದರೂ ಸಾಕು, ಅದಕ್ಕಾಗಿ ಜಗಳಾಡುವುದನ್ನು ಅವಳು ಕೇಳಿದ್ದಳು.

ಹಣದ ಮೊತ್ತವೇನೋ ಅಂಥ ಮುಖ್ಯವಾದುದೇನಲ್ಲ. ಆ ಗಂಡಂದಿರು ತಮ್ಮ ಹೆಂಡಂದಿರು ಸ್ವತಂತ್ರವಾಗಿ ವ್ಯವಹರಿಸುವುದನ್ನು ಅನುಮೋದಿಸುತ್ತಿರಲಿಲ್ಲ. ಅದರಲ್ಲೂ ಸುರೇಶ, ಯಾವಾತನು ತನ್ನ ಹೆಂಡತಿ ತನ್ನ ಅನುಮತಿ ಇಲ್ಲದೆ ಖರೀದಿಸಿದ ವಸ್ತುವನ್ನು ಹಿಂತಿರುಗಿಸಬೇಕೆಂದು ಆಜ್ಞೆ ಮಾಡಿದನೋ ಅಂಥವನ ಮಗ ಬೇರೆ.

ಸಂಜೆ ಸುರೇಶ ಕೆಲಸದಿಂದ ಹಿಂತಿರುಗಿದ ಮೇಲೆ ಮೌನವಾಗಿಯೇ ಇದ್ದಳು. ಅದನ್ನು ಗಮನಿಸಿ ಸುರೇಶನೆಂದ. "ಏನು ಸಮಾಚಾರ. ಅಮ್ಮಾವರು ಒಂದು ಮಾತೂ ಆಡ್ತಾ ಇಲ್ಲವಲ್ಲ. ಪತಿದೇವರ ಮೇಲೆ ಕೋಪವೇ ?"

"......................"

"ಯಾಕೆ ಒಂಥರಾ ಇದೀಯ. ಮೈ ಚೆನ್ನಾಗಿಲ್ವ !"

"ಅಂಥಾದ್ದೇನಿಲ್ಲ."

## ಅರಳುವ ಪ್ರತಿಭೆ –



ಕು॥ ಸುಭದ್ರಾಳಿಂದ ಭರತನಾಟ್ಯ ರಂಗ ಪ್ರವೇಶವು ಶಿವಮೊಗ್ಗೆಯ ಐ ಎಂ ಎ ಸಭಾಂಗಣದಲ್ಲ ಇತ್ತೀಚೆಗೆ ಯಶಸ್ವಿಯಾಗಿ ನಡೆಯಿತು. 16 ನೇ ವರ್ಷದಲ್ಲಿ ಕಾಲಿಡುತ್ತಿರುವ ಕು॥ ಸುಭದ್ರ ಶಿವಮೊಗ್ಗೆಯ ಕಸ್ತೂರಬಾ ಮಹಿಳಾ ಪ್ರೌಢಶಾಲೆಯಲ್ಲಿ ಎಸ್ ಎಸ್ ಎಲ್ ಸಿ ತರಗತಿಯಲ್ಲಿ ವ್ಯಾಸಂಗ ಮಾಡುತ್ತಿದ್ದಾಳೆ. ಕ್ರೀಡೆ ಮತ್ತು ಪಠ್ಯೇತರ ಚಟುವಟಿಕೆಗಳಲ್ಲಿಯೂ ಸಹ ಸಕ್ರಿಯವಾಗಿ ಭಾಗವಹಿಸಿ ಬಹುಮಾನ ಗಳಿಸಿದ್ದಾಳೆ.

ಶಿವಮೊಗ್ಗೆಯ ಆಚಾರ್ಯ ತುಳಸಿ ರಾಷ್ಟ್ರೀಯ ವಾಣಿಜ್ಯ ಕಾಲೇಜಿನ ಪ್ರವಾಚಕರಾದ ಶ್ರೀ ಪಿ. ಎಂ. ಶೇಷಗಿರಿಯಪ್ಪ ಮತ್ತು ಶ್ರೀಮತಿ ರಾಜಲಕ್ಷ್ಮಿಯವರ ಸುಪುತ್ರಿಯಾದ ಕು॥ ಸುಭದ್ರ ಶಿವಮೊಗ್ಗೆಯ ಮನು ಕಲಾ ಕೇಂದ್ರದ ನಿರ್ದೇಶಕಿ ಶ್ರೀಮತಿ ಗೀತಾದಾತಾರ್ ರವರ ಹತ್ತಿರ ತನ್ನ 8 ನೇ ವಯಸ್ಸಿನಿಂದಲೇ ನೃತ್ಯಾಭ್ಯಾಸ ಮಾಡುತ್ತಿದ್ದಾಳೆ.

## ಕು॥ ಸುಭದ್ರ ರಂಗಪ್ರವೇಶ

"ಹಾಗಾದ್ರೆ ಏನು ವಿಷಯ. ನನಗೇನೋ ನೀನು ಇವತ್ತು ಮಾಮೂಲಿನ ತರಹ ಕಾಣಿಸ್ತಾ ಇಲ್ಲ."

ಅವಳು ನಕ್ಕು ವಿಷಯ ಮರೆಮಾಚಲೆತ್ನಿಸಿದಳು. ಆದರೆ ರಾತ್ರಿಯ ಊಟದ ನಂತರ ಹಿರಿಯರೆಲ್ಲರೂ ಮಲಗಲೆಂದು ತಮ್ಮ ತಮ್ಮ ಕೋಣೆ ಸೇರಿದಾಗ, ಸುರೇಶ ಹಾಗೂ ಪ್ರೇಮ ತಮ್ಮ ಕೋಣೆಯಲ್ಲಿ ಉಳಿದರು. ಇನ್ನು ವಿಷಯ ಗಂಡನಿಂದ ಮುಚ್ಚಿಡಲು ಸಾಧ್ಯವಾಗದೆ, ತನ್ನಲ್ಲಿನ ಎಲ್ಲಾ ಧೈರ್ಯವನ್ನು ಒಟ್ಟುಗೂಡಿಸಿ, ಮಧ್ಯಾಹ್ನ ನಡೆದ ಘಟನೆಯ ವರದಿ ಒಪ್ಪಿಸಿದಳು.

ಅವಳು ಹೆದರಿಕೊಂಡೇ ಗಂಡನ ಮುಖ ದಿಟ್ಟಿಸಿದಳು.

ಸ್ವಲ್ಪ ಹೊತ್ತಿನ ಮೌನದ ನಂತರೇ ಅವಳೇ ಹೇಳಿದಳು "ಸರಿಹಾಗಾದ್ರೆ..."

"ಏನು ಸರಿ ?" ಸುರೇಶನೆಂದ.

"ನೀವೇನೂ ಹೇಳಲೇ ಇಲ್ಲ."

"ವಿವಿಧ ಮನೋರಂಜನೆ ಕಾರ್ಯಕ್ರಮದ ಬಗ್ಗೇನ, ಖಂಡಿತವಾಗಿ ನಾವು ಹೋಗೋಣ. ಮುಂದಿನ ಭಾನುವಾರ ಸಂಜೆ ತಾನೇ ಕಾರ್ಯಕ್ರಮ ಇರೋದು."

"ಆದರೆ...ನಾನು ಟಿಕೇಟು ತೊಗೊಂಡಿರೋದು."

"ಇದೊಳ್ಳೆ ಪ್ರಶ್ನೆ. ಟಿಕೇಟ್ ತೊಗೊಳ್ದೆ ನಾವು ಕಾರ್ಯಕ್ರಮಕ್ಕೆ ಹೋಗೋದಾದ್ರೂ ಹೇಗೆ ?" ಎಂದ ಸುರೇಶ ನಗುತ್ತ.

"ನಿಮಗೇನೂ ಅರ್ಥವೇ ಆಗೋದಿಲ್ಲ. ನೀವಿಲ್ಲದಾಗ ನಿಮ್ಮ ಅನುಮತಿ ಇಲ್ಲದೆ ಪರ್ಸ್‌ನಿಂದ ಹಣ ತೆಗೆದು ನಾನು ಟಿಕೇಟು ತೊಗೊಂಡೆ..."

"ಅದೇನು ಪದ ಅಂತ ಉಪಯೋಗಿಸ್ತಿಯ ಪ್ರೇಮ" ಸುರೇಶ ರೇಗಿದ. "ನೀನೇನು ನನ್ನ ಜೀತದಾಳೇ, ಪ್ರತಿಯೊಂದು ಕೆಲಸ ಮಾಡೋ ಮೊದಲು ನನ್ನ ಅನುಮತಿ ಪಡೆಯೋದಕ್ಕೆ ನನಗೆ ಬೇಕಿರೋದು ಹೆಂಡತಿ. ಪ್ರೇಮಾ, ಜೀತದಾಳಲ್ಲ.

"ನನ್ನ ಹೆಂಡತಿ ತನ್ನ ವಿವೇಕ ಉಪಯೋಗಿಸಿಕೊಂಡು ಸ್ವತಂತ್ರವಾಗಿ ನಿರ್ಣಯ ತೆಗೆದುಕೊಳ್ಳುವಂತಿರಬೇಕು. ನಿನಗೆ ಆ ಸಂಸ್ಥೆ ಬಡ ಮಕ್ಕಳಿಗೆ ಒಳ್ಳೆ ಕೆಲಸಮಾಡ್ತಿದೆ ಅನ್ನೋದು ತಿಳಿದಿದೆ. ಒಂದು ಒಳ್ಳೆ ಕೆಲಸಕ್ಕೆ ಸಹಾಯವಾಗ್ಲಿ ಅಂತ ತಾನೇ ನೀನು ಬಯಸಿದ್ದು. ನಾನು ಆ ರೀತಿ ಮಾಡಿದೆನಲ್ಲ ಅಂತ ಖುಷಿಪಡೋದು ಬಿಟ್ಟು ಹ್ಯಾಪ್ ಮೋರೆ ಹಾಕ್ಕೊಂಡು ಕೂತಿದೀಯಲ್ಲ."

ಅವನು ತನ್ನ ಮಾತನ್ನು ಮುಂದುವರೆಸಿದ. "ಮುಖ್ಯವಾದ ಎಲ್ಲಾ ವಿಷಯಗಳಲ್ಲೂ ನಾವು ಜಂಟಿ ನಿರ್ಣಯ ತೆಗೆದುಕೊಳ್ಳೋಣ. ಇನ್ನು ಸಣ್ಣ ಪುಟ್ಟ ವಿಷಯಗಳಲ್ಲಿ ನಾವು ಒಬ್ಬರಿನ್ನೊಬ್ಬರಲ್ಲಿ ವಿಶ್ವಾಸವಿಟ್ಟು ಸ್ವತಂತ್ರವಾದ ನಿರ್ಣಯ ತೆಗೆದು-ಕೊಳ್ಳಲು ಅಡ್ಡಿ ಏನಿಲ್ಲ. ಒಂದು ವೇಳೆ ತಪ್ಪು ನಿರ್ಣಯ ಕೈಗೊಂಡಾಗ ನಾವಿಬ್ಬರೂ ಸಮ ಭಾಗಸ್ಥರಾಗೋಣ.

"ನಮ್ಮಿಬ್ಬರ ಮಧ್ಯೆ ಮೇಲು ಕೀಳು ಅನ್ನೋ ಭಾವನೇನೇ ಸಲ್ಲದು. ಅದನ್ನು ನೀನು ಜ್ಞಾಪಕದಲ್ಲಿಟ್ಟುಕೊಳ್ಳೋದು ಅತಿ ಆವಶ್ಯಕ. ನಾವಿಬ್ಬರೂ ಸಹಜೀವನದಲ್ಲಿ ಸಮ ಬಾಧ್ಯಸ್ಥರು."

ಸುರೇಶನ ಮಾತುಗಳನ್ನು ಕೇಳಿ ಪ್ರೇಮಳಿಗೆ ಮಾತನಾಡಲು ಸಾಧ್ಯವಾಗದೆ, ಅವನ ಮುಖವನ್ನೇ ದಿಟ್ಟಿಸಿದಳು. ತುಂಬಿ ಬಂದ ಸಂತೋಷದ ಕಣ್ಣೀರು ಅವಳ ಕಂಗಳನ್ನು ಹೊಳೆಯುವಂತೆ ಮಾಡಿತು.

"ಇದರ ಬಗ್ಗೇನಾ ನೀನು ಸಂಜೆಯಲ್ಲ ತಲೆ ಕೆಡಿಸಿಕೊಂಡದ್ದು" ಅವನು ಅವಳನ್ನು ಛೇಡಿಸಿದ. "ಹೌದು ನೀವೆಲ್ಲಿ ಕೋಪ ಮಾಡಿಕೊಳ್ತೀರೋ ಅಂತ ನಾನು ತುಂಬಾ ಹೆದರಿದ್ದೆ."

"ಹುಚ್ಚು ಹುಡುಗಿ !" ಅವನು ಅವಳನ್ನು ಪ್ರೀತಿಯಿಂದ ಹತ್ತಿರ ಬರಸೆಳೆದುಕೊಂಡ. "ಪ್ರತಿಯೊಂದು ಕೆಲಸಕ್ಕೂ ನಾವಿಬ್ಬರೂ ಒಬ್ಬರಿಗೊಬ್ಬರು ಅನುಮತಿ ಪಡೀಬೇಕೊಂದ್ರೆ ಘಳಿಗೆಗೊಮ್ಮೆ ನಾನು ಆಫೀಸಿನಿಂದ ಹೂಸಿದ್ದಕ್ಕೂ ಕೆಮ್ಮಿದ್ದಕ್ಕೂ ನಿನ್ನ ಅನುಮತಿ ಪಡೆಯಲು ಫೋನ್ ಮಾಡಬೇಕಾಗುತ್ತೆ."

ಬಹಳ ಸಂತೋಷದಿಂದಾಗಿ ರಾತ್ರಿ ಬಹಳ ಹೊತ್ತು ಪ್ರೇಮಳಿಗೆ ನಿದ್ದೆಯೇ ಬರಲಿಲ್ಲ. ಹಲವಾರು ವಿಷಯಗಳನ್ನು ಯೋಚಿಸುತ್ತ ಪ್ರೇಮ ಹಾಗೇ ಮಲಗಿದ್ದಳು. ಖಂಡಿತವಾಗಿಯೂ ಸುರೇಶನದು ಮದುವೆಯ ಬಗ್ಗೆ ಎಂಥ ಪ್ರೌಢ ವಿಚಾರ !

ಮದುವೆ...ಅವಳ ಮನಸ್ಸು ಅಜ್ಜಿಯ ಬಗ್ಗೆ ಯೋಚಿಸಿತು. ಆ ಕಾಲದಲ್ಲಿ ಮದುವೆ ಎಂದರೆ ಹೆಣ್ಣು ತನ್ನ ಗಂಡನ ಕುಟುಂಬದ ಒಂದು ಸ್ವತ್ತಾಗಿದ್ದಳು. ತನ್ನದೇ ಆದ ಯಾವೊಂದು ಆಸೆ, ಹಕ್ಕುಗಳಿಲ್ಲದೆ ಗಂಡ ಹಾಗೂ ಅತ್ತೆಮಾವಂದಿರ ಅಡಿಯಾಳಾಗಿದ್ದಳು.

ಮುಂದಿನ ಪೀಳಿಗೆಯಲ್ಲಿ ಅಂದರೆ ಕಾವೇರಿಯ ಕಾಲದಲ್ಲಿ ಮದುವೆ ಸ್ವಲ್ಪ ಸುಧಾರಣೆಯನ್ನು ಕಂಡಿತು. ರಾಮನಾಥನ್ ಎಂದೂ ಹೆಂಡತಿಯ ಮೇಲೆ ಕೈ ಎತ್ತಿದವರಲ್ಲ. ಹೆಂಡತಿಗೆ ಒಳ್ಳೆಯ ಪತಿ ಎನಿಸಿಕೊಂಡು ಅವಳನ್ನು ಚೆನ್ನಾಗಿಯೇ ನೋಡಿಕೊಳ್ಳುತ್ತಿದ್ದರು.

ಆದರೆ ಆತನ ಅನುಮತಿ ಇಲ್ಲದೆ ಕಾವೇರಿಯಾವೊಂದು ಹೆಜ್ಜೆ ಮುಂದಿಡಲೂ ಸಾಧ್ಯವಿರಲಿಲ್ಲ. ರಾಮನಾಥನ್‌ರ ಪ್ರಕಾರ ಮದುವೆ ಎಂಬ ಬಂಧನದಲ್ಲಿ ಗಂಡಸರ ಪಾತ್ರವೇ ಹಿರಿದು. ಹೆಂಡತಿ ಆತನ ಅಡಿಯಾಳು ಎಂದು ತಮಗೆ ತಾವೇ ನಿರ್ಧರಿಸಿಕೊಂಡುಬಿಟ್ಟಿದ್ದರು. ಅವರು ಕರುಣಾಮಯಿ ಧಣಿಗಳಾಗಿದ್ದರೂ ಸದಾಕಾಲಕ್ಕೂ ಅವರೇ ಧಣಿಗಳಾಗಿದ್ದರು !

ಇದೀಗ ಅವರ ಮುಂದಿನ ಪೀಳಿಗೆಯಲ್ಲಿ ಸುರೇಶ ಮದುವೆ ಎಂಬ ಪದಕ್ಕೆ ಎಂಥ ಅದ್ಭುತ ಉದಾತ್ತ ಪರಿಭಾಷೆಯನ್ನು ನೀಡಿದ್ದ. ಅವನರ್ಥದಲ್ಲಿ ಮದುವೆ ಎರಡು ಜೀವಗಳ ಸಹಜೀವನ. ಈ ಬಂಧನದಲ್ಲಿ ಗಂಡ ಹೆಂಡತಿ ಇಬ್ಬರೂ ಸಮ ಬಾಧ್ಯಸ್ಥರು.

ಪ್ರೇಮಳ ಮನಸ್ಸು ಹೆಮ್ಮೆಯಿಂದ ಬೀಗಿತ್ತು, ರಾತ್ರಿಯ ನೀರವತೆಯಲ್ಲಿ ಗಂಡ ಮಲಗಿದತ್ತ ದಿಟ್ಟಿಸಿ ಮುಗುಳ್ನಕ್ಕಳು. ಹೂವಿನಂತೆ ಹಗುರಾದ ಮನಸ್ಸಿನಿಂದ ಅವಳು ನಿದ್ರಿಸಲು ಕಣ್ಣು ಮುಚ್ಚಿದಳು.

**

# ಸಂಮೋಹಿನಿ ಚಿಕಿತ್ಸೆ

## ಸ್ವಯಂಸೂಚನೆ ಹಾಗೂ ಉಸಿರಾಟದ ವ್ಯಾಯಾಮಗಳು

—ಡಾ|| ಉಷಾರಾವ್

ಪ್ರಾಣಿಗಳಿಗೆ ಸಾಕಷ್ಟು ವ್ಯಾಯಾಮ ದೊರೆಯುತ್ತದೆ ಎಂಬುದನ್ನು ಯಾರೂ ಅಲ್ಲಗಳೆಯುವುದಿಲ್ಲ. ಪರಿಣಾಮವಾಗಿ ಅವು ಪ್ರಕೃತಿ ಸಹಜ ರೀತಿಯಲ್ಲಿ ಉಸಿರಾಡುತ್ತವೆ. ಆದರೆ ಮನುಷ್ಯರಾದ ನಾವು, ಯಾವುದೇ ವ್ಯಾಯಾಮ ಮಾಡದೆ, ಉಸಿರು ಕಟ್ಟಿಸುವಂಥ ಆಫೀಸುಗಳು ಅಥವಾ ಮನೆಗಳಲ್ಲಿದ್ದುಕೊಂಡು ಕೆಲಸ ಮಾಡುತ್ತೇವೆ. ಆದರೆ ನಮ್ಮ ಶರೀರಕ್ಕೆ ಬಹಳ ಅಗತ್ಯವಾಗಿರುವ ವ್ಯಾಯಾಮ ಮಾಡುವುದಿಲ್ಲ. ದುಡಿದು ದುಡಿದು ದಣಿಯುತ್ತೇವೆ, ಸ್ವಚ್ಛ ಗಾಳಿಯಿಲ್ಲದಿರುವುದರಿಂದ ಶಾರೀರಕವಾಗಿ ಶಕ್ತಿಗುಂದುತ್ತೇವೆ. ನಿಜ ಹೇಳಬೇಕೆಂದರೆ, ನಗರವಾಸಿಗಳಾದ ನಾವು ಸ್ವಚ್ಛ ಗಾಳಿಯ ಸೇವನೆಯಿಲ್ಲದೆ ಬಳಲುತ್ತೇವೆ. ಕಡೆಗೊಂದು ದಿನ ಕುಟುಂಬದ ವೈದ್ಯರ ಬಳಿ ಹೋಗಿ ತೋರಿಸುತ್ತೇವೆ. "ಪ್ರಿಯ ಸ್ನೇಹಿತರೆ, ನಿಮಗೆ ಅಗತ್ಯವಿರುವುದು ಔಷಧವಲ್ಲ. ಹವೆಯ ಬದಲಾವಣೆ" ಎಂದು ವೈದ್ಯರು ಹೇಳುತ್ತಾರೆ. ಆದರೆ, ಆ ಬಗೆಗೆ ಪ್ರಯತ್ನ ಮಾಡಲು ವಾರಗಟ್ಟಲೆ ಹಾಗೂ ತಿಂಗಳುಗಳ ಗಟ್ಟಲೆ ಸಮಯ ವ್ಯರ್ಥ ಮಾಡುತ್ತೇವೆ.

ಅನೇಕ ಮಂದಿ ಇಂಥ ತೊಂದರೆಗಳೊಡನೆ ನನ್ನಲ್ಲಿಗೆ ಬರುತ್ತಾರೆ. ಅವರ ಚರಿತ್ರೆಯನ್ನು ಪೂರ್ತಿಯಾಗಿ ಪರಿಶೀಲಿಸಿದ ನಂತರ ಉಸಿರಾಟದ ವ್ಯಾಯಾಮಗಳ ಬಗೆಗೆ ಅವರಿಗೆ ತಿಳಿಸುವುದು ಅಗತ್ಯ ಎಂಬ ನಿರ್ಧಾರಕ್ಕೆ ಬರುತ್ತೇನೆ. ಅಂಥವರಿಗೆ ಕೆಳಕಂಡಂತೆ ಉಪದೇಶ ನೀಡುತ್ತೇವೆ:

ಉಸಿರಾಡುವುದರಲ್ಲಿ ತಪ್ಪಿಲ್ಲದ ಹಾಗೂ ತಪ್ಪಾದ ವಿಧಾನಗಳಷ್ಟೇ ಅಲ್ಲದೆ ಸರಿಯಾದ ವಿಧಾನವೆಂಬುದೂ ಇದೆ. ಆದುದರಿಂದ ಸರಿಯಾದ ಹಾಗೂ ಅದನ್ನು ಮಾಡುವ ಅತ್ಯುತ್ತಮ ವಿಧಾನದ ಬಗೆಗೆ ತಿಳಿದುಕೊಂಡಿರಬೇಕು.

ತನ್ನ ಶ್ವಾಸಕೋಶದೊಳಕ್ಕೆ ಸಾಕಷ್ಟು ಪ್ರಮಾಣದಲ್ಲಿ ಗಾಳಿ ಹೋಗಿಲ್ಲ ಎಂಬುದನ್ನು ತಿಳಿದುಕೊಂಡರೆ, ಅನಂತರ ಆತ/ಆಕೆ ತಕ್ಷಣ ಮನೆಯಿಂದ ಹೊರ ಹೋಗಿ ಶುದ್ಧ ಗಾಳಿಯನ್ನು ಉಸಿರಾಡಲು ಪ್ರಾರಂಭಿಸಬೇಕು. ಕೆಲವರು ಪ್ರಾಯಶಃ ಸರಿಯಾದ ಗಾಳಿಯ ಸಂಚಾರವಿಲ್ಲದ ಆಫೀಸು ಕೋಣೆಯಲ್ಲಿ ಬಂದಿಯಾಗಿರಬಹುದು. ಅಂಥವರು ಬಹಳ ತುರ್ತಾಗಿ ಮಾಡಬೇಕಾದ ಕೆಲಸವೆಂದರೆ, ಕೋಣೆಯೊಳಕ್ಕೆ ಶುದ್ಧ ಗಾಳಿಯನ್ನು ತರಿಸಿಕೊಳ್ಳಲು ವ್ಯವಸ್ಥೆ ಮಾಡಬೇಕು. ವೆಂಟಿಲೇಷನ್ ವ್ಯವಸ್ಥೆಯನ್ನೂ ಬದಲಾಯಿಸಬೇಕು. ದೀರ್ಘವಾಗಿ ಉಸಿರಾಡುವುದು ಬಹಳ ಅಗತ್ಯ.

ಅನೇಕರು, ಮುಖ್ಯವಾಗಿ ಯೋಗ,ವ್ಯಾಯಾಮಗಳನ್ನು ಮಾಡುವವರು, ವಿವಿಧ ರೀತಿಯ ಉಸಿರಾಟದ ವಿದಾನಗಳನ್ನು ಬೋಧಿಸುತ್ತಾರೆ. ಅವು ವಿಭಿನ್ನವಾಗಿದ್ದರೂ ಪ್ರತಿಯೊಂದು ಪದ್ಧತಿಯೂ ಇನ್ನೊಂದರಷ್ಟೇ ಉತ್ತಮವಾದುದು. ಏಕೆಂದರೆ, ಈ ಎಲ್ಲ ಬಗೆಯ ಉಸಿರಾಟದ ಪದ್ಧತಿಗಳೂ ಎರಡು ಬಗೆಯ ಉದ್ದೇಶವನ್ನು ಈಡೇರಿಸುತ್ತವೆ. ಅಂದರೆ ಮೊದಲನೆಯದಾಗಿ ಈ ಪದ್ಧತಿಯನ್ನು ಪ್ರಾಮಾಣಿಕವಾಗಿ ಅಭ್ಯಸಿಸುವ ವ್ಯಕ್ತಿ, ವ್ಯಾಯಾಮ ಮಾಡದೇ ಇರುವ ವ್ಯಕ್ತಿಗಿಂತ ಹೆಚ್ಚು ಗಾಳಿಯನ್ನು ಶ್ವಾಸಕೋಶಕ್ಕೆ ಪಡೆಯುತ್ತಾನೆ/ಳೆ; ಮತ್ತು ಎರಡನೆಯದಾಗಿ, ಪ್ರತಿ ಸಾರಿ ಉಸಿರಾಟದ ವ್ಯಾಯಾಮ ಮಾಡಿದಾಗಲೂ, ಅದನ್ನು ಒಂದು ಉದ್ದೇಶಕ್ಕಾಗಿ ಮಾಡಲಾಗುತ್ತದೆ, ಮತ್ತು ಮನಸ್ಸಿನಲ್ಲಿಟ್ಟುಕೊಂಡಿರುವ ಆ ಉದ್ದೇಶ ಸಾಕಾರಗೊಳ್ಳುತ್ತದೆ, ಏಕೆಂದರೆ ವಿಚಾರ ಕಾರ್ಯರೂಪ ತಳೆಯುತ್ತದೆ. ಪರೋಕ್ಷವಾಗಿ, ವ್ಯಾಯಾಮದೊಂದಿಗೇ ಸ್ವಯಂ ಸೂಚನೆಗಳೂ ತಿಳಿದೋ ತಿಳಿಯದೆಯೋ ಉಸಿರಾಟಕ್ಕೆ ಸಹಾಯ ಮಾಡಿ ಅಪೇಕ್ಷಿತ ಫಲಿತಾಂಶಗಳಿಗೆ ಹಾದಿ ಮಾಡುತ್ತವೆ.

ಸಾಮಾನ್ಯವಾಗಿ ಬಲಿಷ್ಠ ಹಾಗೂ ಆರೋಗ್ಯವಂತ ವ್ಯಕ್ತಿ ದೀರ್ಘವಾಗಿ ಉಸಿರಾಡುತ್ತಾನೆ. ಆದುದರಿಂದ ಪ್ರತ್ಯೇಕ ಪ್ರಯತ್ನ ಇಲ್ಲದೆಯೇ ತನಗೆ ಅಗತ್ಯವಾದಷ್ಟು ಪ್ರಮಾಣದ ಗಾಳಿಯನ್ನು ಪಡೆಯುತ್ತಾನೆ (ಳೆ). ಅಂಥವರಿಗೆ ಬೇರಾವುದೇ ಉಸಿರಾಟದ ವ್ಯವಸ್ಥೆ ಅಗತ್ಯವಿರುವುದಿಲ್ಲ. ಆದರೆ ದೈಹಿಕವಾಗಿ ದುರ್ಬಲನಾದ ವ್ಯಕ್ತಿ ದೀರ್ಘವಾಗಿ ಉಸಿರಾಡುವುದಿಲ್ಲ. ಏಕೆಂದರೆ ಅನಾರೋಗ್ಯದ ಪ್ರಮಾಣಕ್ಕೆ ಅನುಗುಣವಾಗಿ ಉಸಿರಾಟದ ಅವಯವಗಳಿಗೆ ತಲುಪುವ ಸಂವೇದನೆಗಳು ಕ್ಷೀಣವಾಗಿರುತ್ತವೆ. ಇಂಥ ವ್ಯಕ್ತಿಗಳಿಗೆಲ್ಲ ಅಗತ್ಯವಿರುವುದು ತಮ್ಮ ಶ್ವಾಸಕೋಶಗಳೊಳಕ್ಕೆ ಸಾಮಾನ್ಯವಾಗಿ ಪಡೆಯುವ ಗಾಳಿಗಿಂತ ಹೆಚ್ಚು ಗಾಳಿಯನ್ನು ಸೇವಿಸಿರುವುದಾಗಿ ಅವರಿಗೆ ಮನವರಿಕೆ ಆಗುವವರೆಗೆ ಉಸಿರೆಳೆದುಕೊಳ್ಳುವುದು. ಪ್ರತಿದಿನ ಕೆಲವು ನಿಮಿಷಗಳ ವರೆಗೆ ಎಂಟು ಅಥವಾ ಹತ್ತು ಸಾರಿ ದೀರ್ಘವಾಗಿ ಉಸಿರೆಳೆದುಕೊಂಡರೆ ಖಂಡಿತವಾಗಿ ಪ್ರಯೋಜನಕರ ಪರಿಣಾಮಗಳು ಉಂಟಾಗುತ್ತವೆ.

ಹೇಗೇ ಇದ್ದರೂ, ಕೇವಲ ಹೆಚ್ಚು ಗಾಳಿಯನ್ನು ಉಸಿರೆಳೆದುಕೊಳ್ಳಬೇಕೆಂದು ಒಬ್ಬ ವ್ಯಕ್ತಿಗೆ ಹೇಳಿದರಷ್ಟೇ ನಿರೀಕ್ಷಿತ ಫಲಿತಾಂಶಗಳನ್ನು ಪಡೆಯಲು ಸಾಕಾಗುವುದಿಲ್ಲ.

ಅವರಿಗೆ ಉಸಿರೆಳೆದುಕೊಳ್ಳುವ ಸರಿಯಾದ ವಿಧಾನವನ್ನು ತಿಳಿಸಬೇಕು. ನಾನು ನನ್ನ ರೋಗಿಗಳಿಗೆ ಬೋಧಿಸುವ ಸರಿಯಾದ ವಿಧಾನ ಕೆಳಕಂಡಂತಿರುವುದು :—

ಹೊಟ್ಟೆಯಿಂದ ದೀರ್ಘವಾಗಿ ಪೂರ್ತಿ ಉಸಿರೆಳೆದುಕೊಳ್ಳಿ. ಅದು ಎಷ್ಟು ದೀರ್ಘವಾಗಿರಬೇಕೆಂದರೆ ಉಸಿರೆಳೆದುಕೊಳ್ಳುವಾಗ ನಿಮ್ಮ ಎದೆ ಮೇಲಕ್ಕೆ ಉಬ್ಬುವುದಷ್ಟೇ ಅಲ್ಲದೆ ಹೊಟ್ಟೆಯ ಭಾಗ ಹಿಗ್ಗಿರುತ್ತದೆ ಎಂಬುದು ನಿಮಗೆ ತಿಳಿದಿರುವುದು. ಈಗ ಎದೆಯನ್ನು ಮೇಲಕ್ಕೇ ಇಟ್ಟುಕೊಂಡು ನಿಧಾನವಾಗಿ ಹೊಟ್ಟೆಯನ್ನು ಒಳಗೆ ಹಾಗೇ ಮೇಲೆ ಎಳೆದುಕೊಳ್ಳುತ್ತಾ ಉಸಿರನ್ನು (ಶ್ವಾಸ) ಬಿಡಿ. ಹೊಟ್ಟೆಯನ್ನು ಸಂಕೋಚನಗೊಳಿಸಿ ಅದನ್ನು ಮೇಲಕ್ಕೆ ಎಳೆದುಕೊಳ್ಳುವುದರಿಂದ ಶ್ವಾಸಕೋಶದಲ್ಲಿರುವ ಗಾಳಿ ಬಲವಂತದಿಂದ ಹೊರಬಂದಾಗ, ಮತ್ತೆ ಹೊಟ್ಟೆ ಹಿಗ್ಗುವವರೆಗೆ ಇನ್ನೊಂದು ಬಾರಿ ಉಸಿರೆಳೆದುಕೊಳ್ಳಿ. ಮತ್ತು ಇದೇ ರೀತಿ ಉಸಿರಾಟವನ್ನು ಮುಂದುವರಿಸಿ. ಈ ಎಲ್ಲ ಸಮಯದಲ್ಲೂ ಹೆಚ್ಚು ಚಲನೆಯಿಲ್ಲದಂತೆ ಎದೆಯನ್ನು ಮೇಲಕ್ಕೆ ಹಿಡಿದಿಟ್ಟುಕೊಳ್ಳಿ.

ಹೀಗೆ ಹೊಟ್ಟೆಯ ಮೂಲಕ ಉಸಿರಾಡುವುದರಿಂದ ಮೂರು ಬಗೆಯ ಅನುಕೂಲಗಳಿರುವುದು :

(1) ಇದರಿಂದ ಒಬ್ಬ ವ್ಯಕ್ತಿಯ ಶ್ವಾಸಕೋಶಗಳನ್ನು ಅದರ ಪೂರ್ತಿ ಸಾಮರ್ಥ್ಯಕ್ಕೆ ತಕ್ಕಂತೆ ತುಂಬಲು ಸಾಧ್ಯವಾಗುವುದು.

(2) ಹೊಟ್ಟೆಯ ಚಲನೆಯು ಕರುಳುಗಳಿಗೆ ಮತ್ತು ಹೊಟ್ಟೆಗೆ ಒಂದು ಸಂದೇಶದಂತೆ ಕಾರ್ಯ ನಿರ್ವಹಿಸುವುದು.

(3) ಹಲವು ವರ್ಷಗಳಿಂದ ಬಾಧಿಸುತ್ತಿರುವ ಮಲಬದ್ಧತೆ ಕೆಲವೇ ವಾರಗಳಲ್ಲಿ ನಿವಾರಣೆಯಾಗಬಹುದು.

ಈ ವ್ಯಾಯಾಮವನ್ನು ಕುಳಿತು ಅಥವಾ ನಿಂತು ಅಥವಾ ಮಲಗಿ ಅಭ್ಯಾಸ ಮಾಡಬಹುದು. ಆದರೆ ಎಚ್ಚರದಿಂದ ಪ್ರತಿಸಾರಿ ಕೆಲವು ನಿಮಿಷಗಳ ವರೆಗೆ ಮಾಡಬೇಕು, ಮತ್ತು ಅದು ಪೂರ್ತಿ ಒಂದು ಹವ್ಯಾಸವಾಗುವವರೆಗೆ ದಿನಕ್ಕೆ ಎಂಟು ಅಥವಾ ಹತ್ತು ಸಾರಿ ಮಾಡಬೇಕು.

ಈಗ ಮುಖ್ಯ ವಿಷಯಕ್ಕೆ ಬರೋಣ. ಒಬ್ಬ

### ಲೋಕಜ್ಞಾನ ಉತ್ತರಗಳು

1 ಕಳೆದ ವರ್ಷ ಅಗ್ನಿಗೆ ಆಹುತಿಯಾದ, ಶತಮಾನದಷ್ಟು ಹಳೆಯದಾದ ಕಲ್ಕತ್ತಾದ ಸ್ಟಾರ್ ಥಿಯೇಟರ್.

2 ಖ್ಯಾತ ಅಮೆರಿಕ ಪತ್ರಿಕೋದ್ಯಮಿ ಆರ್ಟ್ ಬುಕ್‌ವಾಲ್ಡ್.

3 ಮ್ಯೆನ್‌ಮಾರ್ ದೇಶ.

4 1963 : ಸ್ಟೆಫಿ ಡಿ, ಸೌಜಾ, 1975 : ವಿ. ಅನಸೂಯಾ ಬಾಯಿ, 1976 : ಗೀತಾ ಝುತ್ಸಿ, 1978-79 : ಏಂಜೆಲ್ ಮೇರಿ ಜೋಸೆಫ್, 1982 : ಎಂ. ಡಿ. ವಲ್ಸಮ್ಮಾ, 1983 : ಪಿ. ಟಿ. ಉಷಾ, 1984 : ಶೈನಿ ಅಬ್ರಹಾಂ, 1985 : ಆಶಾ ಅಗರವಾಲ್, 1986 : ಸುಮನ್‌ರಾವತ್, 1987 : ವಂದನಾರಾವ್, ವಂದನಾ ಶಾನಭಾಗ್, 1988 : ಅಶ್ವಿನಿ ನಾಚಪ್ಪ.

5 ಅತ್ತಿಮಬ್ಬೆ. ಈಕೆ ಸಾಹಿತಿಯೂ ಹೌದು. ಈಕೆ ಪೊನ್ನನ 'ಶಾಂತಿಪುರಾಣ'ದ ಓಲೆಗರಿಯ ಸಾವಿರ ಪ್ರತಿಮಾಡಿಸಿ ದಾನಮಾಡಿದ್ದೂ ಇದೆ.

6 ಆಟ್ಟೋಪಾನ್ ಗ್ರೀಕ್ (ಜರ್ಮನಿ)

7 ದಕ್ಷಿಣ ಆಫ್ರಿಕದ ಕಿಂಬರ್ಲಿಯಲ್ಲಿ.

## 'ಎಲೆಮರೆಯ ಹೂವುಗಳು'

### ಕು॥ ಸತ್ಯವತಿ—ಕು॥ ಗುಣವತಿ



ತುಮಕೂರು ಸೋದರಿಯರಾದ ಕು. ಸತ್ಯವತಿ, ಮತ್ತು ಕು. ಗುಣವತಿ ಭರತನಾಟ್ಯ ಕ್ಷೇತ್ರದಲ್ಲಿ ಹೊಳೆಯುತ್ತಿರುವ ಜೋಡಿ ನಕ್ಷತ್ರಗಳು. ಸಾಧನೆಯ ಮಾರ್ಗದಲ್ಲಿ ಸಾಕಷ್ಟು ದೂರ ಕ್ರಮಿಸಿರುವ ಈ ಯುವ ಕಲಾವಿದೆಯರ ನೃತ್ಯ ಕ್ಷೇತ್ರ ಪ್ರವೇಶ ಆಕಸ್ಮಿಕವೇನೂ ಅಲ್ಲ. ಇವರ ತಂದೆ ಶ್ರೀ ಕೆ. ಎಂ. ರಾಮನ್ ಸುಮಾರು ಮೂರು ದಶಕಗಳಿಂದ ತುಮಕೂರಿನಲ್ಲಿ 'ಶ್ರೀ ರಾಜರಾಜೇಶ್ವರಿ ನೃತ್ಯ ಕಲಾಮಂದಿರ'ದ ಸ್ಥಾಪಕ ನಿರ್ದೇಶಕರಾಗಿ ನೂರಾರು ಆಸಕ್ತರನ್ನು ತರಬೇತಿಗೊಳಿಸಿದ್ದಾರೆ. ಬೆಂಗಳೂರಿನಲ್ಲೂ ನೃತ್ಯ ತರಗತಿಗಳನ್ನು ನಡೆಸುತ್ತಿದ್ದಾರೆ. ಚಿತ್ರತಾರೆ ದಿ. ಮಂಜುಳಾ, ವೈಜಯಂತಿ ಕಾಶಿ, ನಳಿನಾಮೂರ್ತಿ ಇವರ ಶಿಷ್ಯವೃಂದದ ಪ್ರಮುಖರು. ಇಳಿವಯಸ್ಸಿನಲ್ಲೂ ಅಹರ್ನಿಶಿ ದುಡಿಯುತ್ತಿರುವ ರಾಮನ್ ಅವರಿಗೆ ಸರ್ಕಾರ, ಸಂಘ-ಸಂಸ್ಥೆಗಳಿಂದ ದೊರೆತಿರುವ ನೆರವು-ಪ್ರೋತ್ಸಾಹಗಳು ಅತಿ ಕಡಿಮೆ. ಇಂಥ ಶ್ರೇಷ್ಠ ಕಲಾವಿದರ ಮಾರ್ಗದರ್ಶನದಲ್ಲಿ ನುರಿತ ನೃತ್ಯಪಟುಗಳಾಗಿ ರೂಪುಗೊಂಡಿರುವ ಕು. ಸತ್ಯವತಿ ಮತ್ತು ಕು. ಗುಣವತಿ ನೃತ್ಯಶಾಲೆ ನಡೆಸುವಲ್ಲಿ ತಂದೆಗೆ ಹೆಗಲು ಕೊಟ್ಟು ಸಹಕರಿಸುತ್ತಿದ್ದಾರೆ.

ಈ ಸೋದರಿಯರ 'ಪ್ರಥಮ ನೃತ್ಯಪ್ರದರ್ಶನ' 1971 ರಲ್ಲಿ ಕೇರಳದಲ್ಲಿ ನಡೆಯಿತು. ಅಲ್ಲಿಂದ ಮುಂದೆ ನಾನ್ನೂರಕ್ಕೂ ಹೆಚ್ಚಿನ ನೃತ್ಯ ಪ್ರದರ್ಶನಗಳನ್ನು ನೀಡಿರುವ ಇವರ ಪ್ರಮುಖ ಕಾರ್ಯಕ್ರಮಗಳು ; ಬಿಜಾಪುರದಲ್ಲಿ ಕರ್ನಾಟಕ ಸಂಗೀತ ನೃತ್ಯ ಅಕಾಡೆಮಿಯ ಪ್ರಶಸ್ತಿ ವಿತರಣಾ ಸಮಾರಂಭ, ದಸರಾ ವಸ್ತುಪ್ರದರ್ಶನ.

ಭಾರತ ಸರ್ಕಾರದ ನಾಟಕ-ಸಂಗೀತ ವಿಭಾಗ ಸಾದರಪಡಿಸಿದ ಧ್ವನಿ ಮತ್ತು ಬೆಳಕಿನ ಕಾರ್ಯಕ್ರಮ, ಬಂಗಾರಪೇಟೆಯ ವಿಶ್ವಕನ್ನಡ ಸಮ್ಮೇಳನ, ಕರ್ನಾಟಕ ನೃತ್ಯ ಕಲಾ ಪರಿಷತ್



ಕನ್ನಡ ಮತ್ತು ಸಂಸ್ಕೃತಿ ಇಲಾಖೆ ವತಿಯಿಂದ ನೀಡಿರುವ ಕಾರ್ಯಕ್ರಮಗಳು ಹಾಗೂ ಕೇರಳದ ವಿವಿಧ ಭಾಗಗಳಲ್ಲಿ ಯಶಸ್ವೀ ನೃತ್ಯ ಪ್ರದರ್ಶನ. ಶಾರೀರ ಪಟುತ್ವಗಳನ್ನು ಹೊಂದಿರುವ ಇವರ ಕಾರ್ಯಕ್ರಮದಲ್ಲಿ ಪದ ವರ್ಣ, ಅಷ್ಟ ರಾಗ ಮಾಲಿಕಾ-ನಿತ್ಯಕಲ್ಯಾಣಿ, ದಶಾವತಾರ ಇವರ ಪರಿಣತಿಯನ್ನು ಸಮರ್ಥವಾಗಿ ಬಿಂಬಿಸುವ ನೃತ್ಯಾಂಶಗಳು. ನೃತ್ಯಕ್ಕೆ ಮೊದಲ ಆದ್ಯತೆಯಾದರೂ ಇವರ ಪ್ರತಿಭೆ ಏಕಮುಖವಲ್ಲ. ಅಕ್ಕ ಸತ್ಯವತಿ ಅಂಚೆ ತೆರಪಿನ ಶಿಕ್ಷಣದಲ್ಲಿ ಪ್ರಥಮ ಎಂ. ಎ. ಮುಗಿಸಿದ್ದಾರೆ. ತಂಗಿ ಗುಣವತಿಯೂ ಪದವೀಧರೆ. ಬೆಂಗಳೂರಿನ ಶ್ರೀ ಕೃಷ್ಣಮೂರ್ತಿಯವರ ಬಳಿ ಇಬ್ಬರೂ ಕರ್ನಾಟಕ ಸಂಗೀತದ ವಿದ್ವತ್ ಪರೀಕ್ಷೆಗಾಗಿ ಅಭ್ಯಾಸ ಮಾಡುತ್ತಿದ್ದಾರೆ.

**—'ಕಸ್ತೂರಿ', ತುಮಕೂರು**

---

ವ್ಯಕ್ತಿ ಹೊಟ್ಟೆಯ ಮೂಲಕ ಉಸಿರಾಡುವ ವ್ಯಾಯಾಮವನ್ನು ಮಾಡುತ್ತಿರುವಾಗ ಜತೆ ಜತೆಯಲ್ಲೇ ಒಂದು ಉದ್ದೇಶವನ್ನು ಸಾಧಿಸಲು ಪ್ರಯತ್ನಿಸಬೇಕು. ನಿರ್ದಿಷ್ಟ ಸ್ವಯಂಸೂಚನೆಗಳ ನಂತರ ಮಾಡುವ ಪ್ರತಿಯೊಂದು ವ್ಯಾಯಾಮವೂ ಅದ್ಭುತ ಫಲಿತಾಂಶಗಳನ್ನು ನೀಡುವುದು. ಆದುದರಿಂದ, ನನ್ನ ಪ್ರತಿಯೊಬ್ಬ ಓದುಗರು ತಮ್ಮ ಸ್ವಯಂಸೂಚನೆಯನ್ನು ರೂಪಿಸಲು ದೀರ್ಘ ಉಸಿರಾಟದ ಅಭ್ಯಾಸವನ್ನು ಮಾಡಬೇಕೆಂದು ನಾನು ಮತ್ತೆ ಶಿಫಾರಸು ಮಾಡುತ್ತೇನೆ. ತಮ್ಮ ಮನಸ್ಸಿನ ಪ್ರೇರಣೆಯಂತೆ ಪ್ರತಿಸಾರಿ ಈ ವ್ಯಾಯಾಮವನ್ನು ಮಾಡುವುದರಿಂದ ಅದರ ಪರಿಣಾಮವನ್ನು ಹೆಚ್ಚಿಸಬಹುದು.

ಸ್ವಯಂಸೂಚನೆಯ ಬುದ್ಧಿಶಾಲೀ ಬಳಕೆಯ ಮೂಲಕ, ಶಾರೀರಕ ಆರೋಗ್ಯವನ್ನು ಉತ್ತಮಪಡಿಸುವುದಷ್ಟೇ ಅಲ್ಲದೆ, ಅಪೇಕ್ಷಿತ ಮಾನಸಿಕ ಪರಿಸ್ಥಿತಿಗಳನ್ನು ಉಂಟುಮಾಡುವಲ್ಲಿ ಮತ್ತು ನಮ್ಮ ದೈನಂದಿನ ಜೀವನಗಳಲ್ಲಿ ಪ್ರಭಾವ ಬೀರುವಲ್ಲಿ ಬಹಳಷ್ಟು ಸಹಾಯಕವಾಗುವುದು. ನಮಗೆ ಪ್ರಯೋಜನವಾಗುವಂಥ ಸ್ವಯಂ ಸೂಚನೆಗಳನ್ನು ಅಧ್ಯಯನ ಮಾಡಿ ಅವುಗಳನ್ನು ನಿಷ್ಠೆಯಿಂದ ಬಳಸಿಕೊಳ್ಳುವುದು ಒಳ್ಳೆಯದು. ಆದರೆ ಕೆಲವು ಸಂದರ್ಭಗಳಲ್ಲಿ ಸ್ವಯಂಸೂಚನೆಗಳ ಉಪಯೋಗವನ್ನು ನೆನಪಿಡುವುದು ಕಷ್ಟವಾಗುವುದು. ಈ ಕಾರಣಕ್ಕಾಗಿ, ಅವುಗಳನ್ನು ನೆನಪುಮಾಡಿಕೊಳ್ಳಲು ಸಾಧ್ಯವಾಗುವಂತೆ ಏನಾದರೂ ವ್ಯಾವಹಾರಿಕ ಕಾರ್ಯವನ್ನು ಮಾಡುವುದು ಅಪೇಕ್ಷಣೀಯ. ಆ ಕೆಲಸವನ್ನು ಉಸಿರಾಟದ ವ್ಯಾಯಾಮಗಳು ಅದ್ಭುತವಾಗಿ ನಿರ್ವಹಿಸಬಲ್ಲವು. ವಾಸ್ತವವಾಗಿ, ನಾನು ಅದು ಅಗತ್ಯವಿಲ್ಲದ ರೋಗಿಗಳಿಗೂ ಸಹ ದೀರ್ಘ ಉಸಿರಾಟದ ವ್ಯಾಯಾಮಗಳನ್ನು ಮಾಡಲು ವಿಧಿಸುತ್ತೇನೆ. ಏಕೆಂದರೆ, ಪ್ರತಿ ಸಾರಿ ಈ ವ್ಯಾಯಾಮಗಳನ್ನು ಮಾಡಿದಾಗ, ನನ್ನ ರೋಗಿಗಳು ಪುನರಾವರ್ತಿ ಮಾಡಬೇಕೆಂದು ನಾನು ಅಪೇಕ್ಷಿಸುವ ಸ್ವಯಂಸೂಚನೆಗಳು ರೋಗಿಯ ಮನಸ್ಸಿಗೆ ನೆನಪಿಗೆ ಬರುವುದು. ಈ ವಿಧಾನದಲ್ಲಿ ಹಲವು ಮಾನಸಿಕ ತೊಂದರೆಗಳನ್ನು ನಿವಾರಿಸಲಾಗಿದೆ.

ತಮ್ಮ ಸಾಮಾನ್ಯ ಆರೋಗ್ಯವನ್ನು ಉತ್ತಮ-ಪಡಿಸಿಕೊಳ್ಳುವ ಅಗತ್ಯವಿರುವವರು ಈ ಕೆಳಗೆ ನೀಡಿರುವ ಸ್ವಯಂ ಸೂಚನೆಗಳನ್ನು ಬಳಸಬಹುದು :

"ಗಾಳಿಯು ಜೀವನದ ಅತ್ಯಾವಶ್ಯಕತೆಗಳಲ್ಲೊಂದು. ನಾನು ಈಗ ದೀರ್ಘವಾಗಿ ಉಸಿರಾಡುತ್ತಿದ್ದೇನೆ. ಈ ಸ್ವಚ್ಛಗಾಳಿ ನನ್ನ ಶ್ವಾಸಕೋಶಗಳೊಳಕ್ಕೆ ಹೋಗುತ್ತಿರುವುದು ನನಗೆ ಒಳ್ಳೆಯ ಸುಖಾನುಭವ ಆಗುತ್ತಿದೆ. ಈ ಸ್ವಚ್ಛ ಗಾಳಿ ನನ್ನ ಇಡೀ ವ್ಯವಸ್ಥೆಯ ಮೇಲೆ ಪ್ರಯೋಜನಕರ ಪರಿಣಾಮ ಬೀರುವುದು. ಅದರಿಂದ ನನಗೆ ಒಳ್ಳೆಯದಾಗುವುದು ಎಂದು ನನಗೆ ಗೊತ್ತಿದೆ. ಅದು ನಾನು ಸೇವಿಸಿದ ಆಹಾರ ಜೀರ್ಣವಾಗುವಂತೆ ಮಾಡುವುದು. ಪ್ರತಿದಿನ ಬೆಳಗ್ಗೆ ಕರುಳುಗಳು ಚಲಿಸುವಂತೆ ಮಾಡುವುದು, ಚೆನ್ನಾಗಿ ನಿದ್ರೆ ಮಾಡಲು ಸಾಧ್ಯವಾಗುವುದು. ಈ ದೀರ್ಘ ಉಸಿರಾಟ ಮಾನಸಿಕವಾಗಿಯೂ ನನ್ನನ್ನು ಚುರುಕುಗೊಳಿಸುವುದು. ನನ್ನ ಮನಸ್ಸು ಶುದ್ಧವಾಗಿರುವಂತೆ ತೋರುತ್ತಿದೆ. ಪ್ರತಿಯೊಂದು ದೀರ್ಘ ಶ್ವಾಸವೂ ನನ್ನ ಹೃದಯದ ಕ್ರಿಯೆಗಳನ್ನು ಪ್ರಚೋದಿಸುವುದು, ಮತ್ತು ನನ್ನ ಶರೀರದ ಪ್ರತಿಯೊಂದು ಕೋಶಕ್ಕೂ ಒಳ್ಳೆಯ ಪೋಷಣೆಯನ್ನು ಒದಗಿಸುವುದು. ದೀರ್ಘ ಉಸಿರಾಟದ ವ್ಯಾಯಾಮವನ್ನು ನಾನು ಆನಂದಿಸುತ್ತೇನೆ ಮತ್ತು ಅದನ್ನು ಆಗಾಗ್ಗೆ ಮಾಡುವುದನ್ನು ನೆನಪಿಟ್ಟುಕೊಳ್ಳುತ್ತೇನೆ."

ಧಾರಾವಾಹಿ




## 2

ಇಲ್ಲಿಯವರೆಗೆ...

ಬದುಕಿಸಲಾಗದಿದ್ದರೂ ರುಗ್ಣಶಯ್ಯೆಯಲ್ಲಿರುವ ತಾಯಿಯನ್ನು ಶುಚಿಯಾಗಿಡಲಾಗದ ಆಸ್ಪತ್ರೆಯ ಸಿಬ್ಬಂದಿಯ ಮೇಲಿನ ಕೋಪ ಸಾಧನಾ ನರ್ಸ್ ಆಗುವಂತೆ ಮಾಡಿತ್ತು. ಸೇವಾ ಮನೋಭಾವನೆಯಿಂದ ದುಡಿಯುತ್ತಿದ್ದ ಆಕೆಯನ್ನು 'ಆರಂಭದಲ್ಲಿ ಎಲ್ಲರೂ ಹೀಗೆ' ಎಂದು ಸಹೋದ್ಯೋಗಿಗಳು ಮೂಗು ಮುರಿದಿದ್ದರೂ ಸಾಧನಾ ದಿನಕಳೆದಂತೆ ಕರ್ತವ್ಯಕ್ಕೆ ಹೆಚ್ಚು ಹೆಚ್ಚು ನಿಷ್ಠಳಾಗುತ್ತ ನಡೆದಳು. ಇಂತಹ ಸಮಯದಲ್ಲಿ. ಬಂದ ರೋಗಿ ದಸ್ತಗೀರ್ ಹಾಗೂ ಆತನ ಮಡದಿ ಹಸೀನಾ ಸಾಧನಾಳ ಮನಸ್ಸನ್ನು ಕಲಕಿದರು.

—ಇನ್ನು ಮೇಲೆ

"ಇವನ ಹೆಂಡತಿಯೇನು ?"—ಎಂದು ಕೇಳಿದಳು.

"ಹೂಂ" ಎನ್ನುವಂತೆ ತಲೆ ಹಾಕಿದಳು.

"ಹೆಸರು ?" ........................

"ಹಸೀನಾ..."—ಕೋಮಲವಾದ ಸ್ವರ ಬುರಖಾದೊಳಗಿಂದ ಬಂದಿತು.

"ಅಂದ್ರೆ...ಸೌಂದರ್ಯವತಿ...ಅಂತಾನಾ ?" ಮೃದುವಾಗಿ ನಗುತ್ತಾ ಕೇಳಿದಳು.

"ಅರೆ ! ಕನ್ನಡ ಚೆನ್ನಾಗಿ ಬರುತ್ತಲ್ಲ ?"— ಚಕಿತಳಾಗಿ ಕೇಳಿದಳು.

"ನಾನು ಸ್ಕೂಲಿನಲ್ಲಿ ಕನ್ನಡಾನೇ ಓದಿದ್ದು..."–

"ಓಹ್ !..."-- ಎಂದಳು.

ಅವನ ತಲೆಯ ಬಳಿ ಬಂದು ನಿಂತು ಮೃದುವಾಗಿ ಅವನ ಹಣೆಯ ಮೇಲೆ ಮೃದುವಾಗಿ ಕೈಯಾಡಿಸಿದಳು. ದಂತದ ಬಣ್ಣದ ಕೋಮಲ ಹಸ್ತ ಅವನ ತಲೆಗೂದಲ ನಡುವೆ ಓಡಾಡುತ್ತಿದ್ದಂತೆಯೇ ಸಾಧನಾ,

"ನಾಳೆ...ಅಥವಾ...ನಾಡಿದ್ದು ಆಪರೇಷನ್‌ಗೆ ರೆಡಿ ಮಾಡಿದ್ದಾರೆ...ಅದರ ಮೇಲೆ ಯಾವಾಗ ಬೇಕಾದ್ರೂ...ಎಮರ್ಜನ್ಸೀಂತ ಮಾಡಬಹುದು... ಎರಡು, ಮೂರು ಬಾಟಲುಗಳಷ್ಟು ರಕ್ತ ಬೇಕಾಗುತ್ತೆ...ಆಸ್ಪತ್ರೀಲೇ ಸಿಕ್ಕದ್ರೆ..ಸರಿ...ಇಲ್ಲದಿದ್ದರೆ ಹೊರಗೆ ಕೊಂಡುಕೊಂಡು ತರ್ಬೇಕಾಗುತ್ತೆ ..."—ಎಂದಳು ಆಕೆಯತ್ತ ತಿರುಗಿ.

"ಹೂಂ..."—ಎಂದಳು ನಿಧಾನವಾಗಿ.

"ನಾಳೆ ಬೆಳಿಗ್ಗೆಗಿಂತ, ಈ ದಿನವೇ ಒಂದು ಬಾಟಲು ರಕ್ತ ಹಾಕ್ಬೇಕು...ಇಲ್ಲೇ ನಿಂತಿರು...ರಕ್ತ ತೆಗೆದು ಕೊಡ್ತೀನಿ"—ಎನ್ನುತ್ತಾ ರೂಮಿನೊಳಗೆ ಬಂದಳು.

"ಅಯ್ಯೋ...! ಅಮ್ಮ..."— ಹಿಂದೆಯೇ ವಾರ್ಡಿನಿಂದ ಬಂದ ಆರ್ತಸ್ವರಕ್ಕೆ ಗಡಬಡಿಸಿ ಹೊರಗೆ ಓಡಿಬಂದಳು.

ಆಪರೇಷನ್ ಮಾಡಿಸಿಕೊಂಡಿದ್ದ ರೋಗಿಯೊಬ್ಬ ನೋವಿನಿಂದ ಹಾವಿನಂತೆ ನುಲಿದಾಡುತ್ತಿದ್ದ... ಗಾಬರಿಯಿಂದ ಅತ್ತ ಧಾವಿಸಿದಳು.

"ಏನು ? ಏನಾಯ್ತು ?"

"ನಾನು...ಹೊರಗ್ಹೋಗ್ಬೇಕಿತ್ತು..."—ಎಂದ ಅವನ ಸ್ವರ ನಡುಗುತ್ತಿತ್ತು.

"ಅದಕ್ಕೆ ಮೇಲೇಳೋಕೆ ಯಾಕೆ ಹೋಗಿದ್ದೆ? ಆಪರೇಷನ್ ಆಗಿ ಇನ್ನೂ ಎರಡು ಮೂರು ದಿನಗಳೂ ಆಗಿಲ್ಲ...ಯಾರಾದ್ರೂ ಜವಾನನನ್ನು ಕರೆಯಬಾರದಿತ್ತೆ ?"—ಎಂದಳು ಕೋಪದಿಂದ.

"ನಾನು ಆಗ್ಲಿಂದಾನೂ...ಕರೀತಾ ಇದ್ದೀನಿ... ಆಪಯ್ಯ...ಇತ್ತ ನೋಡ್ತಾನೂ ಇಲ್ಲ...ಆ ನರ್ಸಮ್ಮನೂ ಸುಮ್ನೆ...ಹೊಂಟೋದಾ...... ತಡ್ಕೊಳ್ಳೋಕ್ಕಾಗದೆ...ಇಲ್ಲೇ ಮಾಡ್ಕೊಂಬಿಟ್ಟಿದ್ದೀನಿ..."—ಎಂದ ಅವನ ಸ್ವರ ನಡುಗುತ್ತಿತ್ತು... ಮುಖ ನಾಚಿಕೆ. ಅವಮಾನ, ದುಃಖದಿಂದ ಹಿಡಿಯಾಗಿತ್ತು.

ಅವಳ ಕೋಪ ಭುಗಿಲ್ಲೆಂದಿತು.

"ಸಿಸ್ಟರ್..."—ದನಿ ಎತ್ತರಿಸಿ ಕರೆದಳು. ದಡದಡನೆ ಓಡಿಬಂದು ನಿಂತಳು. ಸಂದರ್ಭ ಊಹಿಸಿ ಮುಂದೆ ಬರಲು ಹಿಂಜರಿದಳು.

"ಏನಿದು..."—ಎಂದಳು ಆದಷ್ಟೂ ತಾಳ್ಮೆ ತಂದುಕೊಳ್ಳುತ್ತಾ.

"ವಾರ್ಡ್ ಬಾಯ್‌ನ ಕರೆದೆ...ಆದರೂ ಅವನು ಬರ್ತಾನೇ ಇಲ್ಲ..."—ಅಂಜಿಕೆಯಿಂದ ಹಿಂಜಿ ಹಿಂಜಿ ಹೇಳಿದಳು. ಅಷ್ಟರಲ್ಲಿಯೇ ಹಿಂದೆಯೇ ಬಂದ ವಾರ್ಡ್ ಬಾಯ್,

"ಸ್ಪೆಷಲ್ ವಾರ್ಡ್ ಕಡೆ ಹೋಗಿದ್ದೇಮ್ಮ... ಅದಕ್ಕೆ ಬೆಡ್-ಪ್ಯಾನ್ ಕೊಡಲಾಗಲಿಲ್ಲ...ಅಷ್ಟರಲ್ಲಿ..."

"ನಿನಗೆ ಡ್ಯೂಟಿ ಇರೋದು ಎಲ್ಲಿ ?..."— ಅವನ ನುಡಿಯನ್ನು ಅರ್ಧದಲ್ಲಿಯೇ ಕಡಿದು ಬುಸುಗುಟ್ಟಿದಳು.

ಮೌನವಾಗಿ ನಿಂತಿದ್ದ.

ಸಿಟ್ಟಿನಿಂದ ಸೀದಾ ರೂಮಿಗೆ ಹೋದ ಸಾಧನಾ ರಿಪೋರ್ಟ್ ಬರೆಯುವ ಪುಸ್ತಕ ಬಿಡಿಸಿ,

"ತಾಳ್ಮೆ ಕಳ್ಕೋಬೇಡೀಂತಾ ಹೇಳ್ತಾರೆ ?... ಈ ತರಹಾ ಮಾಡಿದ್ರೆ ಯಾವ ಶುಕ ಮುನಿಗೂ ಸಿಟ್ಟು ಬರದಿರುತ್ತದೆಯೆ ? ತಾಳ್ಮೆ, ಮಾನವೀಯತೆಯನ್ನು ಅದೆಷ್ಟು ಸುಲಭವಾಗಿ, ನಿಷ್ಕರುಣೆಯಿಂದ ಕೊಲ್ಲುತ್ತಾ ಬರ್ತಾ ಇದ್ದಾರೆ...ಸ್ಟುಪಿಡ್ಸ್ ..."—ಧುಮುಗುಟ್ಟುತ್ತಾ ಬರೆಯತೊಡಗಿದಳು.

ಹಿಂದೆಯೇ ಬಂದ ವಾರ್ಡ್ ಬಾಯ್,

"ಅಮ್ಮಾವ್ರೆ...ಇದೊಂದ್ಸಾರಿ ಕ್ಷಮಿಸಿಬಿಡಿ... ಒಂದು ವಾರದ ಸಂಬಳ ಹಿಡಿದು ಬಿಡ್ತಾರೆ..."— ಅಂಗಲಾಚುತ್ತಿದ್ದ.

ಸಾಧನಾ ಕಲ್ಲಾಗಿದ್ದಳು.

ರಿಪೋರ್ಟ್ ಬರೆದು ಮುಗಿಸಿ, ನಿಂತೇ ಇದ್ದ ಅವನತ್ತ ತಿರುಗಿ, "ನೀನಿನ್ನು ಹೋಗಬಹುದು..." ಎಂದಳು ಗಂಭೀರವಾಗಿ. ಹೋಗಲಾರದೆ...ಚಡಪಡಿಸಿ ಕೊನೆಗೆ ಗೊಣಗುತ್ತಾ ಹೋದ. ಅಲ್ಲೇ ನಿಂತಿದ್ದ ಜ್ಯೂನಿಯರ್ ನರ್ಸ್‌ತ್ತ ತಿರುಗಿ,

"ಬೇರೆ ವಾರ್ಡ್ ಬಾಯ್ ಕರೆಯಿಸಿ ಕ್ಲೀನ್ ಮಾಡಿಸಿಬಿಡು..."—ಎತ್ತಲೋ ಹೋಗುತ್ತಿದ್ದ ಅವಳನ್ನು ಕರೆದು ಹೇಳಿದಳು.

"ಬಡವರ ಮೈಯ್ಯಲ್ಲೂ ಹರೀತಾ ಇರೋದು ರಕ್ತಾನೆ...ನೀರಲ್ಲ. ಶ್ರೀಮಂತರ...ನೀರಿಗೆ ಕೊಡೋ ಬೆಲೆ ಬಡವರ ರಕ್ತಕ್ಕೆ ಕೊಡಲ್ಲ...ಇನ್ನೊಂದು... ಬಾರಿ...ಈ ತರಹಾ...ಅಲಕ್ಷ್ಯ...ಮಾಡಿದ್ರೆ... ನಾನೇ ಸೂಪರಿಂಟೆಂಡೆಂಟ್‌ಗೆ......ಕಂಪ್ಲೇಂಟ್ ಮಾಡ್ತೀನಿ..."

ಸಾಧನಾಳ ಕೋಪವಿನ್ನೂ ಆರಿರಲಿಲ್ಲ.

ಮೇಲೆದ್ದಿದ್ದ ಆ ರೋಗಿಯ ಹಸಿಗಾಯದಿಂದ ಹೊಲಿಗೆಗಳು ಪಟಪಟನೆ ಬಿಚ್ಚಿದ್ದರೆ ? ಅಬ್ಬಾ ! ಮೈ...ಜುಂ...ಎಂದಿತು. ತಮ್ಮ ಕಣ್ಣೆದುರಿಗೇ ಶ್ರೀಮಂತರಿಗೊಂದು, ಬಡವರಿಗೊಂದು ಮಾಡುತ್ತಾ, ಶ್ರೀಮಂತರ ಕೆಲಸಕ್ಕೆ ತಾಮುಂದು ನಾಮುಂದು...ಎಂದು ಬರುವ ಸಿಬ್ಬಂದಿ ವರ್ಗದವರನ್ನು ಕಂಡು ಮಲಗಿದ್ದಲ್ಲಿಯೇ ಅಸಹಾಯಕತೆಯಿಂದ ದಿಟ್ಟಿಸಿ ನೋಡುತ್ತಾ, ನಿಟ್ಟುಸಿರು ಬಿಡುವ ರೋಗಿಗಳನ್ನು ಕಂಡು ಸಾಧನಾಳ ಎದೆಯಲ್ಲಿ ಚೇಳು ಕುಟುಕಿದ ಹಾಗಾಗುತ್ತಿತ್ತು... ನರ್ಸಾಗಿರುವ ತಾನು ಹೇಗೆ ? ಯಾರಿಗೆ ? ಘಟ್ಟಿಸಿ ಹೇಳಲಿ ? ಆಡಲಾರದೆ, ಅನುಭವಿಸಲಾರದೆ...ಚಡಪಡಿಸಿದಳು. ತನ್ನಿಂದಾದ ಸಹಾಯ

## ಯಾತನೆ

ಬುವಿಗಿಳಿಯುವಾಗ
ತಾಯ ಗರ್ಭಕೆ
ನೀಡುವ ಮೊದಲ ನೋವು
ಪರೆಯ ಪಕ್ಕಿಯಾದಾಗ
ಮನ್ಮಥ ಬಿಟ್ಟ
ಬಾಣದಾ ನೋವು
ಮುದ್ದಿಸಿದ ಮಕ್ಕಳೆ
ಮುದಿತನದಲ್ಲಿ
ತಿಪ್ಪೆಗೆ ಎಸೆಯುವಾ ನೋವು

## ಅನಿಸಿಕೆ

ಹೆಣ್ಣು ಜನಿಸಿದಾಗ
ಅಯ್ಯೋ ಹೆಣ್ಣಾ
ಎನ್ನುವುದ ಕಂಡು
ಜಗದಲ್ಲಿ ಹೆಣ್ಣೆ
ಇಲ್ಲದಿದ್ದರೇ ?
ಎಂದುಕೊಳ್ಳುತ್ತೇನೆ

## ಕಾಲಧರ್ಮ

ಇಪ್ಪತ್ತಕ್ಕೆ
ಲಿಪ್‌ಸ್ಟಿಕ್
ಎಪ್ಪತ್ತಕ್ಕೆ
ವಾಕಿಂಗ್‌ಸ್ಟಿಕ್ !

## ಚತುರ

ಬಲು ಚತುರ
ನನ್ನಿನಿಯ
ಪ್ರೀತಿಸೆಂದರೆ
ಈಗ ಸಮಯ
ಇಲ್ಲ ಎನ್ನುವ
ಸರಿ ಬರುವೆನೆಂದರೆ
ಒಬ್ಬಳೆ ತಿರುಗಾಡಬೇಡ
ಎನ್ನುವ
ನನ್ನ ನಂಬುವ
ಅವ ನನ್ನ
ರೂಪವನ್ನು ನಂಬಲಾರ !
ಬಲು ಚತುರ
ನನ್ನಿನಿಯ !

## ಕನಸು

ಕನಸುಗಳ ಕೊಳ್ಳುವಿರಾ ?
ಕೊಳ್ಳಲಾಗದಿದ್ದರೆ ಸುಮ್ಮನಿರಿ
ಹೂಮನಸ್ಸಿಗೆ ಕಲ್ಲಿನಿಂದ ಹೊಡೆದು
ಗಾಯ ಮಾಡಬೇಡಿರಿ
ಇಂದಲ್ಲ ನಾಳೆ ಬರಬಹುದು
ನನ್ನ ಅಂದಚೆಂದದ
ಕುಸುರಿ ಕನಸುಗಳ
ಬೆಲೆ ಕಟ್ಟಿ ಕೊಳ್ಳಬಲ್ಲ
ಶ್ರೀಮಂತ ವ್ಯಾಪಾರಿ
ಕೊಳ್ಳಲಾಗದಿದ್ದರೆ ಸುಮ್ಮನಿರಿ
ಹೂಮನಸ್ಸಿಗೆ ಕಲ್ಲಿನಿಂದ ಹೊಡೆದು
ಗಾಯ ಮಾಡಬೇಡಿರಿ

—ಕಮಲಾಮೂರ್ತಿ, ತುಮಕೂರು

ಮಾಡಬಹುದು...ಆದರೆ ಸಾಕಲಾದೀತೆ?... ಛತ್!! ಏನೇನೋ ಯೋಚನೆಯಲ್ಲಿಯೇ ಮಗ್ನಳಾಗಿದ್ದ ಸಾಧನಾಳಿಗೆ, ಯಾರೋ ದಢದಢನೆ ಓಡಿ ಬಂದ ಶಬ್ದಕ್ಕೆ ಬೆಚ್ಚಿ...ತಲೆ ಎತ್ತಿ ನೋಡಿದಳು. ಹಸೀನಾ ಧಾವಿಸಿ ಬರುತ್ತಿದ್ದಳು. ಸಾಧನಾ 'ಏನು? ಏನಾಯ್ತು?' ಎಂದು ಹೇಳುವ ಮೊದಲೇ, "ಡಾಕ್ಟರ್ ಬೇಗ ಬನ್ನಿ...ಅವರಿಗೆ ತುಂಬಾ..."— ಹೇಳ ಹೊರಟ ಮುಂದಿನ ಮಾತುಗಳನ್ನು ನುಗ್ಗಿ ಬಂದ ಅಳು ನುಂಗಿತು. ತರಗೆಲೆಯಂತೆ ಕಂಪಿಸುತ್ತಿದ್ದ ಅವಳೊಡನೆ ವಾರ್ಡಿನತ್ತ ಧಾವಿಸಿದಳು.

ಅಕ್ಕಪಕ್ಕದ ಹಾಸಿಗೆಯ ರೋಗಿಗಳು ಅವನ ಸುತ್ತಲೂ ಗುಂಪುಗೂಡಿದ್ದರು. ದಸ್ತಗೀರ್ ಹಾಸಿಗೆಯ ತುಂಬಾ ನೋವಿನಿಂದ ಹೊರಳಾಡುತ್ತಿದ್ದ. ಕ್ಷೀಣವಾಗಿ ಚೀರುತ್ತಾ ಮುಖವನ್ನು ನೋವಿನಿಂದ ದಿಂಬಿನೊಳಗೆ ಹುದುಗಿಸಿ ಒದ್ದಾಡುತ್ತಿದ್ದ. ಅವನನ್ನು ಕಂಡು ಒಂದು ಕ್ಷಣ ಸಾಧನಾಳ ಎದೆ ನಡುಗಿತು. ಹಸೀನಾ ಬಿಕ್ಕಿ ಅಳುತ್ತಿದ್ದಳು. ತಕ್ಷಣ ಚೇತರಿಸಿಕೊಂಡ ಸಾಧನಾ, ಒಳಗ್ಹೋಡಿ ಸಿರಿಂಜ್ ತುಂಬಿಕೊಂಡು ತಂದು ಅವನಿಗೊಂದು ಇಂಜೆಕ್ಷನ್ ಕೊಟ್ಟಳು. ಹಸೀನಾಳನ್ನು ಸಾಂತ್ವನಗೊಳಿಸುತ್ತಾ,

ಗುಂಪುಗಟ್ಟಿದ್ದ ರೋಗಿಗಳನ್ನು ಗದರಿಸಿ ಕಳುಹಿಸುತ್ತಾ ದಸ್ತಗೀರನ ಬಳಿ ಬಂದು ನಿಂತಳು. ಪುನಃ ನೋವೇನಾದರೂ ಬಂದರೂ, ತಾನು ಸಲಹೆ ಪ್ರಕಾರ ನೀಡಿದ್ದ ಇಂಜೆಕ್ಷನ್‌ಗೆ ನೋವು ಕಡಿಮೆಯಾಗದಿದ್ದರೂ ಡ್ಯೂಟಿ ಡಾಕ್ಟರರನ್ನು ಕರೆದು ತರುವ ಬಗ್ಗೆ ಯೋಚಿಸುತ್ತಾ ದಸ್ತಗೀರನ ನಾಡಿ ಬಡಿತವನ್ನು ಪರೀಕ್ಷಿಸುತ್ತಾ ನಿಂತಳು. ಸ್ವಲ್ಪ ಹೊತ್ತಿನ ನಂತರ ಅವನ ನರಳಾಟ ನಿಂತಿತು. ನಿದ್ದೆ ಬರುವ ಇಂಜೆಕ್ಷನ್ ಕೊಟ್ಟಿದ್ದರಿಂದ ಅವನ ಕಣ್ಣಿಗೆ ಮಂಪರು ಕವಿಯತೊಡಗಿತ್ತು. ನಿಧಾನವಾಗಿ ಎದ್ದು ಬಂದ ಸಾಧನ. ಉಳಿದ ರೋಗಿಗಳತ್ತ ಗಮನ ಹರಿಯಿಸಿದಳು. ಅವಳನ್ನು ಹಿಂಬಾಲಿಸಿ ಬಂದಿದ್ದ ಹಸೀನಾ,

"ಆಪ್ರೇಶನ್ನಾದ್ರೂ ಬೇಗ ಮಾಡೋಕೆ ಹೇಳಿ ...ಸಿಸ್ಟರ್...ದೊಡ್ಡೋರಿಗೆ ನಾನ್ಹೇಗೆ ಹೇಳಲಿ? ಕಷ್ಟಸುಖದ ಬಗ್ಗೆ ಬಂದು ಕೇಳೋರು ಯಾರೂ ಇಲ್ಲ...ದುಡ್ಡು ಎಲ್ಲಿಂದ ತರಲಿ? ಎಷ್ಟು ತಿಂಗಳೂಂತ ಆಸ್ಪತ್ರೆಗೆ ಔಷಧಿಗಳಿಗೆ ಖರ್ಚು ಮಾಡಲಿ? ...ಇಷ್ಟಾದ್ರೂ ಇವ್ರು ಬದುಕಿ ಉಳೀತಾರೆ ಅಂತ ಆದ್ರೂ ಹೇಳ್ತೀರಾ? ಊಹೂಂ...ಅದನ್ನೂ ಹೇಳೋಲ್ಲ..."—ಮುಸುಕು ಮುಚ್ಚಿದ ಮುಖವನ್ನು ಮುಚ್ಚಿಕೊಂಡು ಅಳತೊಡಗಿದಳು.

"ಆಪರೇಷನ್ ಮಾಡಿ ನೋಡ್ತಾರಲ್ಲ... ಸುಮ್ನಿರು...ಎಲ್ಲಾ...ಸರಿಯಾಗುತ್ತೆ..."—ಎಂದು ಹೇಳುವಾಗ ಅವಳ ಸ್ವರ ನಡುಗಿತು ಎನ್ನಿಸಿತು.

"ಊಹೂಂ...ಎಲ್ಲಾ , ಸುಳ್ಳು...ರಾತ್ರಿ... ಇದ್ದಿದ್ದರಲ್ಲ ಆ ಸಿಸ್ಟರ್...ಎಲ್ಲಾ ಹೇಳಿದ್ರು... ಕ್ಯಾನ್ಸರ್ ಜಾಸ್ತಿಯಾಗ್ಬಿಟ್ಟಿದೆ...ಅದೂ ಅಲ್ದೇ ಸಾರಾಯಿ ಕುಡ್ದು ಕುಡ್ದು...ಹೊಟ್ಟೇಲಿ ನೀರು ತುಂಬ್ಕೊಂಡ್‌ಬಿಟ್ಟಿತೆ.....ಆಪ್ರೇಶನ್ ಆದ್ರೂ, ಆಗದಿದ್ರೂ ಉಳಿಯೋದು ಕಷ್ಟಾಂತ...ಅದು ನಿಮ್ಗೂ ಗೊತ್ತು..."

ಸಾಧನಾ ಪೆಚ್ಚಾದವಳಂತೆ ಕುಳಿತಳು. ಮರುಕ್ಷಣದಲ್ಲಿ ಮಾತು ಬದಲಿಸುವವಳಂತೆ,

"ಆಸ್ಪತ್ರೇಲೂ ನೀನ್ಯಾಕೆ ಬುರಖಾ ಹಾಕ್ತೀಯಾ?...ಈಗೀಗ ಹಾಕೋದು ಕೆಲವರಲ್ಲಿ

---

**ಹೊಸ ಶೀರ್ಷಿಕೆ:**

## ಅಡಿಗೆ ಮನೆಯಲ್ಲಿ ನನ್ನ ಯಜಮಾನರು

ಪುರುಷ ಪ್ರಧಾನ ಈ ಸಮಾಜದಲ್ಲಿ ಅಡಿಗೆ ರುಚಿಯ ವಿಷಯದಲ್ಲೂ 'ನಳಪಾಕ' -'ಭೀಮಪಾಕ' ಎಂದೆಲ್ಲ ಗಂಡಿನ ಹೆಸರನ್ನೇ ಮೆರೆಸಲಾಗುತ್ತಿದೆ. ಆದರೂ ತಲೆ-ತಲಾಂತರದಿಂದ ಅಡಿಗೆ ಮನೆಯನ್ನು ಹೆಂಗಸರಿಗೆ ಗುತ್ತಿಗೆ ಬಿಡಲಾಗಿದೆ. ಇಂತಹುದರಲ್ಲಿ ಆಗೀಗ ಅಪರೂಪಕ್ಕೊಮ್ಮೆ ಅನಿವಾರ್ಯವಾಗಿ ಗಂಡು ಅಡಿಗೆ ಮನೆಗೆ ಕಾಲಿಟ್ಟು, ಅಡಿಗೆ ಮಾಡಬೇಕಾಗುತ್ತದೆ. ಇಂತಹ ಸನ್ನಿವೇಶದಲ್ಲಿ ಪತಿರಾಯನ ನಳಪಾಕವನ್ನು ಸವಿದ ಕಟ್ಟಿಕೊಂಡವಳ ಅನುಭವ ಹೇಗಿರುತ್ತದೆ. ಪತಿರಾಯರ ಅಡುಗೆ ಮಾಡುವ ವಿಧಾನ,ತಯಾರಾದ ಅಡಿಗೆಯ ರುಚಿ, ಹೀಗೆ ಅವರ ಸಾಧನೆಯ ಕುರಿತು ಅಚ್ಚುಕಟ್ಟಾಗಿ (300 ರಿಂದ 350 ಪದಗಳೊಳಗೆ) ಬರೆದು 'ವನಿತಾ'ಗೆ ಕಳಿಸಿರಿ. ಅಡಿಗೆ ಮಾಡಿದ ನಿಮ್ಮ ಪತಿರಾಯರ ಪಾಸ್‌ಪೋರ್ಟ್ ಅಳತೆಯ ಭಾವಚಿತ್ರ ಕಳಿಸಲು ಮರೆಯದಿರಿ.

ಲೇಖನ ಬಂದು ತಲುಪುವ ಕೊನೆಯ ದಿನಾಂಕ 30-6-'92.

ಆಯ್ಕೆಯಾಗಿ ಪ್ರಕಟಿತ ಲೇಖನಗಳಿಗೆ ಸೂಕ್ತ ಗೌರವಧನ ಇದೆ.

ಲೇಖನ ಕಳಿಸುವ ವಿಳಾಸ :

**ವನಿತಾ**
**ಕಮಾಂಡರ್ಸ್ ಪ್ಲೇಸ್ (ಮಹಡಿ),**
**ರಾಜಾರಾಮ ಮೋಹನರಾಯ್ ರಸ್ತೆ,**
**ಬೆಂಗಳೂರು – 560 025**




ಕಡಿಮೆಯಾಗ್ತಿದೆ..."—ಎಂದಳು.

"ನನ್ ಗಂಡ ಇಷ್ಟ ಪಡೋದಿಲ್ಲ..."—ಎನ್ನುತ್ತಾ, ನಿಧಾನವಾಗಿ ಬುರಖಾ ತೆಗೆದಳು. ಏನನ್ನೋ ಮಾತನಾಡಲು ಹೊರಟ ಅವಳ ನಾಲಿಗೆ ಸ್ತಬ್ಧವಾಯಿತು.

ಅವಳು ಅತ್ಯಂತ ಸುಂದರಿಯಾಗಿದ್ದಳು !

ಐವತ್ತರ ಗಡಿ ದಾಟಿದ್ದ ದಸ್ತಗೀರನ ಹೆಂಡತಿ ಈ ಹರೆಯದ ಸುಂದರ ಹೆಣ್ಣೆ ?...ಪುನಃ ಪುನಃ ನೋಡಿದಳು...ಹೆಸರಿಗೆ ತಕ್ಕಂತೆ ಸುಂದರ ವಿಗ್ರಹ ದಂತಿದ್ದಳು.

"ನಿಜವಾಗಿಯೂ...ನೀನು ಅವನ ಹೆಂಡತಿಯೇನು ?" ಅಸಂಬದ್ಧವಾಗಿ ಪ್ರಶ್ನಿಸಿದಳು. ಮೌನವಾಗಿ ಒಪ್ಪಿಗೆ ಸೂಚಿಸಿದ ಅವಳ ಮುಖ ಮ್ಲಾನವಾಗಿತ್ತು.

'ಇದೆಂಥಾ ಅನ್ಯಾಯ ? ದೇವರೇ !' ಅವ್ಯಕ್ತ ಭಯದಿಂದ ಸಾಧನಾಳ ಹೃದಯ ಕಂಪಿಸಿತು.

ಸಾಧನಾಳ ಒತ್ತಾಯದ ಮೇರೆಗೆ ಅವಳು ಹೇಳಿದ್ದು ಇಷ್ಟು.

ದಸ್ತಗೀರ ಮೊದಲ ಹೆಂಡತಿ ಇವಳ ಅಕ್ಕ. ಅವಳು ಮೂರು ಮಕ್ಕಳನ್ನು ಹೆತ್ತು ರೋಗದಿಂದ ಹಾಸಿಗೆ ಹಿಡಿದು ಬಿಟ್ಟು... ಮೇಲೇಳದಷ್ಟಾದಾಗ ಮಕ್ಕಳ ಲಾಲನೆ, ಪಾಲನೆಗಾಗಿ ಅವಳ ತಂಗಿ ಹಸೀನಾಳನ್ನೇ ತಂದಿಟ್ಟಿದ. ಕಿತ್ತು ತಿನ್ನುವ ಬಡತನ...ಕಾಯಿಲೆಯಿಂದ ದಿನೇ ದಿನೇ

— ಸಂದರ್ಶನ :

**ಡಾ॥ ಕೆ. ಪೂರ್ಣಿಮಾ ಭಟ್**



ನಾಭಿಮೂಲದಿಂದ ಹೊರಡುವ ಹಸುಗಂದಗಳ ಆಕ್ರಂದನ, ತುಂಬು ಗರ್ಭಿಣಿಯರ, ನೋವು ನಲಿವುಗಳ ಮಧ್ಯೆ, ತಮ್ಮ ಕರ್ತವ್ಯ ನಿಷ್ಠೆಯನ್ನುಳಿಸಿಕೊಂಡು, ಕೆಲಸ ಮಾಡುತ್ತಿರುವ ಪ್ರಾಮಾಣಿಕ ವೈದ್ಯೆ ಡಾ॥ ಎಚ್. ಗಿರಿಜಮ್ಮ ಅವರು, ಉತ್ತಮ ವೈದ್ಯೆ, ವಾಗ್ಮಿ, ಒಳ್ಳೆಯ ಸಾಹಿತಿಯೂ ಹೌದು. ಮೂಲತಃ ದಾವಣಗೆರೆಯವರಾಗಿದ್ದು ಬೆಂಗಳೂರಿನ ಬೌರಿಂಗ್ ಮತ್ತು ಲೇಡಿ ಕರ್ಸ್ ಆಸ್ಪತ್ರೆಯಲ್ಲಿ, ಪ್ರಸೂತಿ ಮತ್ತು ಸ್ತ್ರೀರೋಗ ತಜ್ಞೆಯಾಗಿ ಕೆಲಸ ಮಾಡುತ್ತಿರುವ ಇವರಿಗೆ, ಹೆಣ್ಣು, ಶೋಷಣೆ...ನೋವು, ಈ ಮೂರು ಪದಗಳು. ಕಾಡುವ ಶಬ್ದಗಳು, ಹೆಣ್ಣಿನ ಆಸೆ. ಆಕಾಂಕ್ಷೆಗಳು, ನೋವು–ನಲಿವು, ಸೋಲು–ಗೆಲುವುಗಳು, ಇವುಗಳನ್ನು ಸೂಕ್ಷ್ಮವಾಗಿ, ನವಿರಾದ ಶೈಲಿಯಲ್ಲಿ, ಕಥೆ, ಕಾದಂಬರಿಗಳಾಗಿಸುವುದರಲ್ಲಿ, ತಮ್ಮದೇ ಆದ ಒಂದು ಸೊಗಸನ್ನು ಸಾಧಿಸಿದ್ದಾರೆ. ಶಾಲಾ ವಿದ್ಯಾರ್ಥಿನಿಯಾಗಿದ್ದಾಗ, ಪುಟ್ಟ-ವಾರ್ಷಿಕ ಸಂಚಿಕೆಗಳಿಗೆ ಬರೆಯುವುದರ ಮೂಲಕ ಇವರ ಬರವಣಿಗೆ ಪ್ರಾರಂಭವಾಯಿತು. 'ಹೂಬಳ್ಳಿಗೆಲ್ಲಿ ಆಸರೆ...' ಮೊದಲು ಪ್ರಕಟವಾದ ಕತೆ. ಆಗಿನ್ನೂ ಎರಡನೆಯ ವರ್ಷದ ವೈದ್ಯಕೀಯ–ವಿದ್ಯಾರ್ಥಿನಿಯಾಗಿದ್ದರು. ನಂತರ ಪ್ರಕಟವಾದದ್ದು "ಹೂಬನ" ಕಾದಂಬರಿ. ಧಾರಾವಾಹಿಯಾಗಿ ಸುಧಾದಲ್ಲಿ ಮೂಡಿಬಂದಿತು. ನಂತರದಲ್ಲಿ ಅವರ ಲೇಖನಿಯಿಂದ, ಇದುವರೆಗೂ, ಒಟ್ಟು ಒಂಭತ್ತು ಕಾದಂಬರಿಗಳು, ಮೂರು ಕಥಾ ಸಂಕಲನಗಳು ಬಂದವು. ಕನ್ನಡದ ಅನೇಕ ಪ್ರಮುಖ ಪತ್ರಿಕೆಗಳಲ್ಲಿ, ಇವರ ಕಥೆ, ನೀಳ್ಗತೆಗಳು, ವೈದ್ಯಕೀಯ ಲೇಖನಗಳು. ಪ್ರಕಟವಾಗಿವೆ. ಕನ್ನಡದಲ್ಲಿ ದಾದಿಯರಿಗಾಗಿ ಪಠ್ಯ ಪುಸ್ತಕ ಬರೆದ ಕೀರ್ತಿ ಇವರದು. ದೂರದರ್ಶನದ ಕಿರುತೆರೆಯಲ್ಲೂ ಇವರ ಕತೆಗಳು ಜನಪ್ರಿಯವಾಗಿವೆ.

ಹೆಣ್ಣು, ಶೋಷಣೆಯಿಂದ ತಪ್ಪಿಸಿಕೊಳ್ಳಬೇಕಾದರೆ, ಶಿಕ್ಷಣ ಬೇಕೇಬೇಕು... ದೊರೆತ ಸ್ವಾತಂತ್ರ್ಯವನ್ನು ಯುಕ್ತವಾದ ರೀತಿಯಲ್ಲಿ ಬಳಸಿಕೊಳ್ಳಬೇಕೆಂಬ ಪ್ರಜ್ಞೆ ಹೆಣ್ಣಲ್ಲಿರಬೇಕೆಂಬ ಧೋರಣೆ ಇವರದು.

ಹಿಂಜರಿಯುತ್ತಲೇ, ಅರೆ ಮನಸ್ಸಿನಿಂದ, ಸಂದರ್ಶನಕ್ಕೆ ಒಪ್ಪಿದ ಇವರದು, 'ತಾನು ವೃತ್ತಿಯಲ್ಲಿ ಸಾಹಿತಿಯಲ್ಲ...ಸಂದರ್ಶನವೇಕೇ?' ಎಂಬ ಅಭಿಪ್ರಾಯ, ಮಾತನಾಡುತ್ತಿದ್ದ ಹಾಗೆಯೇ ಮರೆಯಾಯಿತು.

● ಕಾದಂಬರಿ, ಸಣ್ಣ ಕಥೆಗಳನ್ನೇ ಅಭಿವ್ಯಕ್ತಿ ಮಾಧ್ಯಮವನ್ನಾಗಿಸಿದ್ದು ಏಕೆ?

— ನನ್ನ ಯೋಚನಾ ಸರಣಿಗೆ, ಸಣ್ಣಕಥೆ ಕಾದಂಬರಿ, ಮಾಧ್ಯಮಗಳೇ ಹೊಂದಿಕೆಯಾದವು. ಕವನಗಳನ್ನು ಓದುವುದು ನನಗೆ ತುಂಬಾ ಇಷ್ಟ. ಆದರೆ, ಬರೆಯುವುದು ಮಾತ್ರ ಕಷ್ಟ.

● ಕಥೆಗಳಲ್ಲಿ ನೀವು ಮೂಲವಾಗಿ ಹೇಳಹೊರಟಿದ್ದೇನು?

— (ಮೆಲುವಾಗಿ ನಕ್ಕು) ಯಾರಿಗೂ ಏನನ್ನೂ ಹೇಳುವ ಆಸೆಯಿಂದಂತೂ ಖಂಡಿತಾ ಅಲ್ಲ. ನನಗನ್ನಿಸಿದ, ನನ್ನ ಹೃದಯವನ್ನು ಸ್ಪಂದಿಸುವಂತೆ ಮಾಡಿದ ಘಟನೆಗಳನ್ನು ಬರೆಯದಿದ್ದರೆ, ಹೃದಯ ಒಡೆದು ಹೋದೀತೆಂಬ ಭಯದಿಂದ! ಬರೆಯುವಾಗ ನನ್ನ ಮೆದುಳು ಸ್ತಬ್ಧವಾಗಿರುತ್ತದೆ. ಹೃದಯ ಅತ್ಯಂತ ಚುರುಕಾಗಿರುತ್ತದೆ. ಬುದ್ಧಿ ಜೀವಿಗಳನ್ನು ಹೆಚ್ಚಾಗಿ ಆಕರ್ಷಿಸದೇ ಇರಬಹುದು!

● ನಿಮ್ಮ ಕಥೆಗಳಲ್ಲಿ ಹೆಣ್ಣು ಪಾತ್ರಗಳು ಪ್ರಧಾನವಾಗಿ ಬರುವುದು. ನಿಮ್ಮ ದೌರ್ಬಲ್ಯವೆ? ಅಥವಾ ಹೆಣ್ಣು ಪಾತ್ರಗಳು ನಿಮ್ಮನ್ನು ಅಷ್ಟು ಕಾಡುತ್ತವೆಯೋ?

— ದೌರ್ಬಲ್ಯ ಹೇಗಾದೀತು? ದುರ್ಬಲರನ್ನು ನಾನು ದ್ವೇಷಿಸುತ್ತೇನೆ. ಹೆಣ್ಣಾಗಿ ನಾನೇ ಹೆಣ್ಣಿನ ನೋವು, ನಲಿವುಗಳನ್ನು ಚಿತ್ರಿಸದಿದ್ದರೆ ಹೇಗೆ?

● ನಿಮ್ಮ ಸಾಹಿತ್ಯ ರಚನೆಗೆ ಸ್ಪೂರ್ತಿ?

— ನನ್ನ ಕ್ಷೇತ್ರದಲ್ಲಿ ಸಿಗುವ ವಿಶಿಷ್ಟವಾದ ಅನುಭವಗಳು. ಎಷ್ಟೋ ಘಟನೆಗಳು ಕಥೆಗಳಾಗಿ, ಕಾದಂಬರಿಗಳಾಗಿ ಬಂದಿದೆ. ಏನೇ ಬರೆದರೂ, 'ಪ್ರಾಮಾಣಿಕತೆ' ನನ್ನ ಬರವಣಿಗೆಯಲ್ಲಿರ ಬೇಕೆಂಬುದೇ ನನ್ನ ಆಶಯ.

● ವೈದ್ಯಕೀಯ ವೃತ್ತಿ, ಸಾಹಿತ್ಯಿಕ ಪ್ರವೃತ್ತಿಗಳನ್ನು ಒಟ್ಟಿಗೆ ತರುತ್ತಿರುವ ನಿಮಗೆ, ಎಡರು–ತೊಡರುಗಳು ಬಂದಿವೆಯೇ?

— ಊಹೂಂ...ಖಂಡಿತಾ ಇಲ್ಲ. ನನ್ನ ಪ್ರವೃತ್ತಿಗೆ, ನನ್ನ ವೃತ್ತಿ ಪೂರಕವಾಗಿಯೇಇದೆ.

● ನಿಮ್ಮ ಹವ್ಯಾಸಗಳು?

— ಓದುವುದು ... ಸಂಗೀತವನ್ನಾಲಿಸುವುದು...ಕನಸು ಕಾಣುವುದು.

● ನಿಮ್ಮ ಮುಂದಿನ ಕಥೆ–ಕಾದಂಬರಿ ಯಾವುದರಿಂದ ಸ್ಪೂರ್ತಿ?

— ಪ್ರಾಮಾಣಿಕವಾಗಿ, ನನ್ನದೇ ಆತ್ಮಚರಿತ್ರೆ ಬರೆಯುವ ಆಸೆ... ಅಭಿಲಾಷೆ ಕೂಡ. ●

ಕ್ಷೀಣಿಸುತ್ತಾ, ಹಾಸಿಗೆಯಲ್ಲಿ ಹಾಸಿಗೆಯಾಗಿ ಮೂಲೆ ಹಿಡಿದಿದ್ದ ಅಕ್ಕನನ್ನು ಔಷಧಿಗಳಿಂದ ಗುಣಪಡಿಸಲು ಹೆಚ್ಚು ಅಪೇಕ್ಷೆ ಪಡದ ದಸ್ತಗೀರ್, ಅವಳದ್ದು 'ವಾಸಿಯಾಗದ ಕಾಯಿಲೆ' ಯೆಂಬ ಪಟ್ಟಕಟ್ಟಿ, ಹಸೀನಾಳನ್ನು ಮದುವೆಯಾದ... ಅಕ್ಕನ ಮಕ್ಕಳ ಹೊಣೆ, ಅವಳ ಶುಶ್ರೂಷೆಗಾಗಿ ಅಲ್ಪ ಸ್ವಲ್ಪ ಹಣವಿದ್ದ ದಸ್ತಗೀರನಿಗೆ ಹಿಂದೆ ಮುಂದೆ ನೋಡದೆ ಹಸೀನಾಳನ್ನು ಕಟ್ಟಿದ್ದರು. ತನ್ನೆಲ್ಲಾ ಬಯಕೆಗಳನ್ನು ಕೊಂದು, ರೋದಿಸುತ್ತಾ, ಹಸೀನಾ ಗಂಡನ ಮನೆಗೆ ಕಾಲಿಟ್ಟಿದ್ದಳು. ಅಲ್ಲಿಂದ. ಅವಳ ಬಾಳು ಯಾತನಮಯವಾಗಿ ಸಾಗಿತ್ತು. ಅವಳಿಗೆ ಎರಡು ಮಕ್ಕಳಾಗುವ ವೇಳೆಗೆ, ಕುಡಿತ ಹೆಚ್ಚಾಗಿ, ದಸ್ತಗೀರ್ ಹಾಸಿಗೆ ಹಿಡಿದಿದ್ದ.

ಮನೆಯಲ್ಲಿ ಬಡತನ. ಸಾಯದೆ ಇನ್ನೂ ಬದುಕಲು ಚಡಪಡಿಸುತ್ತಾ, ಮಲಗಿದ್ದ ಅಕ್ಕ,... ಬಡತನ...ಹಸಿವಿನಿಂದ ನರಳುತ್ತಿದ್ದ ಮಕ್ಕಳು...

ಮುಂದೆ ಕೇಳಲಾರದವಳಂತೆ ಸಾಧನಾ. "ಸಾಕು...ನಾನು ಕೇಳಲಾರೆ..."—ಎಂದು ನೊಂದು ನುಡಿದಳು.

ರೌಂಡ್ಸಿಗೆ ಬಂದ, ಹಿರಿಯ, ಕಿರಿಯ ವೈದ್ಯರ ಗುಂಪಿನಲ್ಲಿ ದಸ್ತಗೀರನ ವಿಷಯದ ಬಗ್ಗೆ ಗಂಭೀರವಾದ ಚರ್ಚೆಯಾಗಿ, ಅದೇ ದಿನ ಸಾಯಂಕಾಲ ನಾಲ್ಕು ಘಂಟೆಗೆ ಎಮರ್ಜನ್ಸಿ ಆಪರೇಷನ್ ಮಾಡುವ ನಿರ್ಧಾರ ತೆಗೆದುಕೊಳ್ಳಲು ತೀರ್ಮಾನವಾಯಿತು. ನಂತರದ ಎಲ್ಲಾ ತಯಾರಿಗಳು ತೀವ್ರಗತಿಯಲ್ಲಿ ನಡೆದವು. ಅತ್ಯಂತ ಕಷ್ಟದಿಂದ, ಆಸ್ಪತ್ರೆಯಲ್ಲೇ ಒಂದು ಬಾಟಲಿನಷ್ಟು ರಕ್ತವನ್ನು ಹೊಂದಿಸಿಯಾಗಿತ್ತು. ಆಪರೇಷನ್ನಿನ ಥಿಯೇಟರಿಗೆ ಕರೆದೊಯ್ಯುವಾಗ ಅವನು ಬೀರಿದ ನೋಟ ಕಂಡು ಸಾಧನಾಳ ಹೊಟ್ಟೆಯಲ್ಲಿ ಕಲಕಿದಂತಾಯಿತು.

ಶಸ್ತ್ರಕ್ರಿಯೆ ಪ್ರಾರಂಭವಾಗಿದ್ದಂತೆಯೇ, ಅರ್ಧ ಗಂಟೆಯಲ್ಲಿ, ಹೊರಗೆ ಬಂದ ಡಾಕ್ಟರ್ ರಮೇಶ್, "ಸಿಸ್ಟರ್...ಇನ್ನೊಂದು ಬಾಟಲ್ ರಕ್ತ ಬೇಕು" ಎಂದು ವಾರ್ಡಿಗೆ ಬಂದು ಸಾಧನಾಳಿಗೆ ಹೇಳಿ. "ದಸ್ತಗೀರನ ಕಡೆಯವರಾರು?...ಬೇಗ ರಕ್ತ ತನ್ನಿ"—ಎಂದ ಆತುರದಿಂದ. ಹತಾಶಳಾಗಿ ಗೋಡೆಗೊರಗಿ ನಿಂತಿದ್ದ ಹಸೀನಾಳನ್ನು ಕಂಡ ಸಾಧನಾ,

"ಡಾಕ್ಟರ್—ಒ ಂದ್ನಿ ಮಿ ಷ...ಬಂದೆ..."—ಎನ್ನುತ್ತಾ ಅವನ ಹಿಂದೆ ಹೋಗಿ.

"ನನ್ನದು ಅದೇ ಗ್ರೂಪಿನ ಬ್ಲಡ್...ಬೆಳಿಗ್ಗೆ ಬ್ಲಡ್ ಬ್ಯಾಂಕಿನಿಂದ ಬ್ಲಡ್ ತರೋವಾಗ ಬೇಕಾಗಬಹುದೇನೋ ಅಂತ...ಕ್ರಾಸ್ ಮ್ಯಾಚಿಂಗ್ ಮಾಡಿಸಿದ್ದೆ...ದಸ್ತಗೀರನಿಗೆ ಮ್ಯಾಚ್ ಆಗುತ್ತೆ... ನನ್ನದೇ ತಂದುಕೊಡ್ತೀನಿ...ಈಗಲೇ...ತರ್ತೀನೀಂತ ಹೇಳಿ..." ಎಂದು ವೇಗವಾಗಿ, ಬ್ಲಡ್ ಬ್ಯಾಂಕಿನತ್ತ ನಡೆದ ಸಾಧನಾಳನ್ನು ಕಂಡು ರಮೇಶ್ ಮೂಕನಂತೆ ನಿಂತ.

ಪ್ರತಿದಿನಾ ವಾರ್ಡಿನಲ್ಲಿ ನೋಡುತ್ತಿದ್ದರೂ, ಎಂದೂ ತನ್ನ ಗಮನಕ್ಕೆ ಬಾರದಂತೆ ಭಾಸವಾದ ಸಾಧನಾಳನ್ನು ಮರೆಯಾಗುವವರೆಗೂ ನೋಡುತ್ತಾ ನಿಂತಿದ್ದ.

ತೆಳು ನೀಳಕಾಯದ, ದಂತದ ಬಣ್ಣದ, ಕಂದು ಬಣ್ಣದ ದಟ್ಟ ರೆಪ್ಪೆಯ, ಅಗಲ ಕಣ್ಣಿನ, ಮುಗ್ಧ ಮುಖದ ಸಾಧನಾ ಎಂದೂ ಆಸಕ್ತಿ ಹುಟ್ಟಿಸಿರ

ಲಿಲ್ಲ...ಆದರೆ ಇಂದು ?

"ಡಾಕ್ಟರ್ ರಮೇಶ್...ಬ್ಲಡ್...ತೆಗೆದ್ಕೊಂಡ್ ಬನ್ನಿ... ಬೇಗಾ..."—ಒಳಗಡೆಯಿಂದ ಸ್ವರ ಬಂದ ಕೂಡಲೇ ವಾಸ್ತವಕ್ಕೆ ಬಂದವನಂತೆ,

"ಸಿಸ್ಟರ್...ತರ್ತಾ ಇದ್ದಾರೆ..."—ಎನ್ನುತ್ತಾ ಆಪರೇಷನ್ ಥಿಯೇಟರಿನೊಳಗೆ ನಡೆದ.

ಮುಂದಿನ ಕೆಲಸಗಳು ಮಿಂಚಿನಂತೆ ನಡೆದವು. ತನ್ನ ದೇಹದಿಂದಲೇ ಬಾಟಲಿಗೆ ಹರಿಯಿಸಿಕೊಂಡು ಕಾತುರ, ಆತಂಕದಿಂದ ಓಟಿಯತ್ತ ಬಂದ ಸಾಧನಾಳಿಗೆ ಹಸೀನಾಳ ಕೃತಜ್ಞತೆಯ ನೋಟ. ಉಳಿದ ರೋಗಿಗಳ ಮೆಚ್ಚುಗೆಯ ನೋಟಗಳತ್ತ ಗಮನವೇ ಇರಲಿಲ್ಲ...ಓಡುವ ನಡಿಗೆಯಲ್ಲಿ ಬಂದ ಅವಳು ಮೇಲುಸಿರು ಬಿಡುತ್ತಿದ್ದಳು. ಅವಳ ಹೆಜ್ಜೆಯ ಸಪ್ಪಳ ಕೇಳಿದ ಡಾಕ್ಟರ್ ರಮೇಶ್,

"ಡಾಕ್ಟರ್...ಕಲ್ಯಾಣಿ...ಬ್ಲಡ್ ತಂದ್ರೂಂತ ಕಾಣು[illegible]... ಹೋಗಿ ನೋಡಿ..."— ಎಂದ ತಲೆ ಎತ್ತದೆ. ಆಪರೇಷನ್ ಮುಂದುವರೆದಿತ್ತು...ಯೂನಿಟ್‌ನ ಬಾಸ್‌ಗೆ ಅಸಿಸ್ಟ್ ಮಾಡುತ್ತಿದ್ದ ರಮೇಶ್,

"ಪೋಸ್ಟ್...ಆಪರೇಟಿವ್...ವಾರ್ಡ್‌ನ ಸಿಸ್ಟರ್ ...ತಮ್ಮದೇ ಬ್ಲಡ್...ಡೋನೇಟ್ ಮಾಡಿದ್ರು ಸರ್..." ಎಂದ. ಒಮ್ಮೆ ತಲೆ ಎತ್ತಿ ನೋಡಿದ ಬಾಸ್,

"ಯಾಕೆ ? ಆಸ್ಪತ್ರೇಲಿ ಇಲ್ವಾ ?...ಇಲ್ಲದಿದ್ರೆ ಹೊರಗಡೆಯಿಂದ ತರಿಸಬಹುದಿತ್ತಲ್ಲ?...ಇವರ್‍ಯಾಕೆ ಕೊಡೋಕೆ ಹೋದ್ರು ?..." [illegible]ದು,

"ಕಮಾನ್...ಸಿಸ್ಟರ್...ಬೇಗ ಬ್ಲಡ್ ಸ್ಟಾರ್ಟ್ ಮಾಡ್ಸಿ...ನೋಡೀಪ್ಪಾ...ಬ್ಲಡ್ ಪ್ರೆಶರ್... ಎಷ್ಟಿದೇಂತಾ......" ಅನೆಸ್ತೀಷಿಯಾ ನೀಡುತ್ತಿದ್ದ ವೈದ್ಯರತ್ತ ತಿರುಗಿ ಕಾತುರ, ಆತಂಕ ವ್ಯಕ್ತಪಡಿಸಿದರು.

ಎಲ್ಲರ ಕೈಗಳೂ ಯಂತ್ರದಂತೆ ಕೆಲಸ ಮಾಡಿದವು. ಆದರೆ ದಸ್ತಗೀರ್...ನಿರೀಕ್ಷಿಸಿದ್ದಕ್ಕಿಂತ ಮುಂಚಿತವಾಗಿಯೇ...ಎಲ್ಲರ ಕೈಜಾರಿ ನಡೆದಿದ್ದ...

ಗ್ಲೌಸ್ ತೆಗೆದು ಹಾಕಿ ಕೈಗಳನ್ನು ತೊಳೆದುಕೊಂಡು ಹೊರಗೆ ಬಂದ ರಮೇಶನಿಗೆ, ಗೋಡೆಗೊರಗಿ ನಿಂತಿದ್ದ ಹಸೀನಾ, ಅವಳ ಪಕ್ಕದಲ್ಲಿ ಸಾಂತ್ವನಗೊಳಿಸುವವಳಂತೆ ಮಾತನಾಡುತ್ತಾ ನಿಂತಿದ್ದ ಸಾಧನಾ ಕಾಣಿಸಿದರು. "ಸಿಸ್ಟರ್...ಬನ್ನಿ ...ಇಲ್ಲಿ..." ರಮೇಶ್ ಮೃದುವಾಗಿ ಕರೆದ... ಸಾಧನಾ ಕಾತುರದಿಂದ ಕಣ್ಣರಳಿಸಿ ಅವನ ಮುಂದೆ ನಿಂತಳು. ಒಮ್ಮೆ ಸ್ಥೂಲವಾಗಿ ಅವಳತ್ತ ನೋಡಿದ ರಮೇಶ್,

"ನಿಮ್ಮ ರಕ್ತ ಉಪಯೋಗಕ್ಕೆ ಬರಲಿಲ್ಲ..." ಎಂದ ಮೆಲುವಾಗಿ. ಮುಖಕ್ಕೆ ಮಾಸ್ಕ್ ಹಾಕಿದ್ದುದರಿಂದ ಅವನ ಮುಖದಲ್ಲಿ ಕಾಣುತ್ತಿದ್ದ ತೀಕ್ಷ್ಣವಾದ ಕಣ್ಣುಗಳತ್ತಲೇ ನೋಡಿದ ಸಾಧನಾ,

"ಯಾಕೆ ಸರ್ ?...ಕ್ರಾಸ್ ಮ್ಯಾಚಿಂಗ್... ಮಾಡಿಸಿಯೇ ತಂದಿದ್ದೆ..." ಉಸಿರುಕಟ್ಟಿ ಹೇಳಿದಳು.

"ಹಾಗಲ್ಲ...ನೀವು ಕೊಟ್ಟ ರಕ್ತ ಕೊಟ್ವಾಯ್ತು. ...ಆದರೆ...ಪೇಶಂಟ್ ಉಳಿಯಲಿಲ್ಲ..."

ಸಾಧನಾಳ ಹೃದಯ ಸ್ತಬ್ಧವಾಯಿತು.

"ಕಾರ್ಡಿಯಾಕ್ ಅರೆಸ್ಟ್ ಆಯ್ತು...ಎಷ್ಟೇ ಪ್ರಯತ್ನಿಸಿದರೂ ಉಳಿಸಿಕೊಳ್ಳಲಾಗಲಿಲ್ಲ... ತುಂಬಾ ಕುಡೀತಾ ಇದ್ದಾಂತ ಕಾಣುತ್ತೆ...ಲಿವರ್ ...ಫೇಯಿಲ್ ಬೇರೆ ಆಗಿತ್ತು..." ರಮೇಶ್ ಇನ್ನೂ ಏನೇನೋ ಹೇಳುತ್ತಿದ್ದ. ಆದರೆ ಸಾಧನಾಳಿಗೆ ಕೇಳಿಸಿದ್ದು,

"ನಿಮ್ಮ ರಕ್ತ ಉಪಯೋಗಕ್ಕೆ ಬರಲಿಲ್ಲ... ರೋಗಿ ಸತ್ತ..." ಎಂಬುದಷ್ಟೇ...ಅವಳ ಕಣ್ಣುಗಳಲ್ಲಿ ನೀರು ತುಂಬಿ ಬಂದು ಗಂಟಲು ಕಟ್ಟಿ ಬಂದಿತು.

"ದಾನ ನೀಡೋಕೂ ಪುಣ್ಯ ಪಡೆಕೊಂಡು ಬಂದಿರ್ಬೇಕು ಸರ್..." ಎಂದವಳೇ...ನಿಲ್ಲಲಾರದವಳಂತೆ, ವಾರ್ಡಿನತ್ತ ಓಡುವ ನಡಿಗೆಯಲ್ಲಿ ನಡೆದು ಬಂದಳು. (ಮುಗಿಯಿತು)

## ವನಿತಾ
### ವಿಶೇಷ ಸೂಚನೆ

"ವಾರ್ತಾ ವನಿತಾ", "ಹುಟ್ಟಿದ ಹಬ್ಬ", "ವನಿತಾ ವಾಣಿ", "ವನಿತಾ ಪದ ಸಂಪದ" ಹಾಗೂ "ನವ ದಂಪತಿಗಳು" ಇವುಗಳನ್ನು ಮಾತ್ರ "ವನಿತಾ ಡಾಲ್ಟನ್ ಪಬ್ಲಿಕೇಷನ್ಸ್, ಚಂದಮಾಮ ಬಿಲ್ಡಿಂಗ್ಸ್, ವಡಪಳನಿ, ಮದರಾಸು-26" ಈ ವಿಳಾಸಕ್ಕೆ ಕಳಿಸಿರಿ. ಮಿಕ್ಕಂತೆ ಲೇಖನ, ಕತೆಗಳನ್ನು ಬೆಂಗಳೂರಿನ ಪ್ರಾದೇಶಿಕ ಕಚೇರಿಗೆ ಕಳಿಸಿ ಸಹಕರಿಸಬೇಕಾಗಿ ಕೋರುತ್ತೇವೆ.

—ಸಂ.

# ಕಲ್ಯಾಣಮ್ಮ ಜನ್ಮ ಶತಮಾನೋತ್ಸವ

ಇದೇ ಮಾರ್ಚ್ ಒಂದರಂದು ಶ್ರೀಮತಿ ಆರ್. ಕಲ್ಯಾಣಮ್ಮನವರ ಜನ್ಮ ಶತಮಾನೋತ್ಸವವನ್ನು ನಡೆಸುವುದರ ಮೂಲಕ ಕರ್ನಾಟಕ ಲೇಖಿಕಿಯರ ಸಂಘ ಅವರನ್ನು ಸ್ಮರಿಸಿದೆ. ಡಾ॥ ಬಿ. ಎನ್. ಸುಮಿತ್ರಾಬಾಯಿಯವರು ಸಂಪಾದಿಸಿರುವ "ಕಲ್ಯಾಣ ಸರಸ್ವತಿ" ಎಂಬ ಕೃತಿಯ ಬಗ್ಗೆ ಮಾತನಾಡಿದ ಡಾ॥ ವಿಜಯಾ ದಬ್ಬೆಯವರು ಕಲ್ಯಾಣಮ್ಮನವರ ಅಪ್ರಕಟಿತ ಕೃತಿಗಳು ಇನ್ನೂ ಪತ್ತೆಯಾಗಿಲ್ಲ. ಅವುಗಳು ದೊರಕಿದರೆ ಅವರ ಸಾಹಿತ್ಯವನ್ನು ಸಮಗ್ರವಾಗಿ ಪರಿಶೀಲಿಸಬಹುದು ಎಂದರು.

'ಕಲ್ಯಾಣ ಸರಸ್ವತಿ' ಯನ್ನು ಬಿಡುಗಡೆ ಮಾಡಿದ ಕರ್ನಾಟಕ ಸಾಹಿತ್ಯ ಅಕಾಡೆಮಿಯ ಅಧ್ಯಕ್ಷ ಶ್ರೀ ಬರಗೂರು ರಾಮಚಂದ್ರಪ್ಪನವರು ಕಲ್ಯಾಣಮ್ಮನವರು ಸ್ವತಃ ಶಿಕ್ಷಣ ಪಡೆಯುವುವರೊಂದಿಗೆ ಇತರರಿಗೂ ಶಿಕ್ಷಣ ಒದಗಿಸುವಂತಹ ಸದುದ್ದೇಶವನ್ನು ಹೊಂದಿದ್ದರು ಎಂದು ಹೇಳಿದರು.

ಸಮಾರಂಭದ ಅಧ್ಯಕ್ಷತೆ ವಹಿಸಿದ್ದ ಪ್ರೊ॥ ಚಿ. ನ. ಮಂಗಳಾರವರು, ಬಾಲ ವಿಧವೆಯಾಗಿದ್ದ ತಮ್ಮ ತಾಯಿಯ ಮರುವಿವಾಹದ ವಿಷಯದಲ್ಲಿ ದಿ॥ ಕಲ್ಯಾಣಮ್ಮನವರು ತಮ್ಮ ಅಜ್ಜಿಗೆ ನೀಡಿದ ಉತ್ತೇಜನವನ್ನು ಸ್ಮರಿಸಿಕೊಂಡು ಅಂದಿನ ಸಾಮಾಜಿಕ ವ್ಯವಸ್ಥೆಯಲ್ಲಿ ವಿಧವಾ ವಿವಾಹಕ್ಕೆ ಕಲ್ಯಾಣಮ್ಮನವರು ನೀಡುತ್ತಿದ್ದ ಪ್ರೋತ್ಸಾಹಕ್ಕೆ ಅದೊಂದು ಸಾಕ್ಷಿ ಎಂದು ಹೇಳಿದರು. * ಇದೇ ಸಂದರ್ಭದಲ್ಲಿ 'ಲೇಖಿಕಿ' ಪತ್ರಿಕೆಯ ವಿಶೇಷ ಸಂಚಿಕೆ ಹಾಗೂ 'ಅಚಲಾ' ಪತ್ರಿಕೆಯ ವಿಶೇಷ ಸಂಚಿಕೆಗಳನ್ನೂ ಬಿಡುಗಡೆ ಮಾಡಲಾಯಿತು. **

* ಕಲ್ಯಾಣಮ್ಮನವರ ನಿಕಟವರ್ತಿಯಾಗಿದ್ದ ಶ್ರೀಮತಿ ಬನಶಂಕರಮ್ಮನವರು, ಅವರನ್ನು ಕುರಿತು ಮಾತನಾಡಿದರು.





# ಸಂಪ್ರದಾಯದ ಕಾರ್ಗತ್ತಲಲ್ಲಿ ಬೆಳಗಿದ ಜ್ಯೋತಿ

— ಟಿ. ಸಿ. ಪೂರ್ಣಿಮಾ

ಆಗ ಮಹಿಳೆಯರು ನಾಲ್ಕು ಗೋಡೆಗಳ ಮಧ್ಯದಿಂದ ಹೊರಗಿನ್ನೂ ಬಂದಿರಲಿಲ್ಲ. ಅದರಲ್ಲೂ ಸಾಮಾಜಿಕವಾಗಿ ಹೋರಾಡುವ ಸಾಹಸವನ್ನಂತೂ ಮಾಡಿರಲೇ ಇಲ್ಲ. ಸಂಪ್ರದಾಯದ ಲಕ್ಷ್ಮಣರೇಖೆಯನ್ನು ದಾಟಿ ಬರುವುದೂ ಸುಲಭದ ಮಾತಾಗಿರಲಿಲ್ಲ. ಅಂತಹ ಸಾಮಾಜಿಕ ವ್ಯವಸ್ಥೆಯ ನಡುವೆಯೇ ಮಹಿಳೆಯೊಬ್ಬರು ಬೆಳವಣಿಗೆಯ ಚಿಹ್ನೆ ತೋರಿದರು. ಸಾಹಿತ್ಯಕ, ಸಾಮಾಜಿಕ, ಸಾರ್ವಜನಿಕ ರಂಗಗಳಲ್ಲಿ ಅನುಪಮ ಸೇವೆ ಸಲ್ಲಿಸಿ, ಕರ್ನಾಟಕದ ಸಾಂಸ್ಕೃತಿಕ ಚರಿತ್ರೆಯಲ್ಲಿ ತಮ್ಮ ಹೆಸರನ್ನು ಉಳಿಸಿ ಹೋದರು. ವಿಶೇಷವೆಂದರೆ ಬಾಲ್ಯ ವೈಧವ್ಯಕ್ಕೆ ತುತ್ತಾಗಿದ್ದ ಆ ಮಹಿಳೆ ಸಂಪ್ರದಾಯ ನಿಷ್ಠ ಸಮಾಜಕ್ಕೆ ಎದುರಾಗಿ ಹೊಮ್ಮಿ ಬಂದದ್ದು ಅವರಲ್ಲಿದ್ದ ಸ್ಥೈರ್ಯ, ಛಲ, ಸಾಮರ್ಥ್ಯಗಳಿಗೆ ಸಾಕ್ಷಿಯಾಗುತ್ತದೆ.

ಶ್ರೀಮತಿ ಆರ್. ಕಲ್ಯಾಣಮ್ಮನವರು ಹುಟ್ಟಿದ್ದು ಈಗ್ಗೆ ನೂರು ವರ್ಷಗಳ ಹಿಂದೆ. ಮಧ್ಯಮವರ್ಗದ ಸಂಪ್ರದಾಯಸ್ಥ ಕುಟುಂಬದಲ್ಲಿ ಕುಂಬಕೋಣಂನ ಶ್ರೀ ರಾಮಸ್ವಾಮಿ ಅಯ್ಯಂಗಾರ್, ಶ್ರೀಮತಿ ಜಾನಕಮ್ಮನವರ 8 ಮಕ್ಕಳಲ್ಲಿ ಎರಡನೆ ಮಗಳೇ ಕಲ್ಯಾಣಿ. ಅಂದಿನ ಸಾಮಾಜಿಕ ಕಟ್ಟುಪಾಡುಗಳಿಗೆ ಸಿಕ್ಕಿ, ಬಾಳಿನ ಸುಂದರ ಕನಸುಗಳನ್ನು ಹೆಣೆಯುವ ಮೊದಲೇ, ಹನ್ನೆರಡರ ಬಾಲೆ ವೈಧವ್ಯಕ್ಕೆ ಬಲಿಯಾದಳು. ಶೋಚನೀಯವೆಂದರೆ ಆ ಕುಟುಂಬದ ಏಳು ಜನ ಹೆಣ್ಣು ಮಕ್ಕಳಲ್ಲಿ ಮೊದಲ ಐವರೂ ವಿಧವೆಯರು.

ಚಿಕ್ಕಪ್ಪನವರ ಸಹಾಯದಿಂದ ಕಲ್ಯಾಣಮ್ಮನವರಿಗೆ ಲೋಯರ್ ಸೆಕೆಂಡರಿಯವರೆಗೆ ಶಿಕ್ಷಣ ಲಭಿಸಿತು. ಮುಂದೆ ಓದಬೇಕೆನ್ನುವ ಅವರ ಹಂಬಲಕ್ಕೆ ತಂದೆ ತಾಯಿಯರ ಸಂಪ್ರದಾಯಶೀಲತೆ ತೆರೆ ಎಳೆಯಿತು. ಆದರೂ ಕಲ್ಯಾಣಮ್ಮ ಪ್ರಾಚೀನ ಗ್ರಂಥಾಧ್ಯಯನಕ್ಕೆ ತೊಡಗಿಕೊಂಡರು. ಚಿಕ್ಕಪ್ಪನ ಸಹಾಯದಿಂದ ತಮಿಳು, ಸಂಸ್ಕೃತ ಗ್ರಂಥಗಳನ್ನು ಅಭ್ಯಸಿಸುವುದು ಸಾಧ್ಯವಾಯಿತು. ಅಧ್ಯಯನದಿಂದಾಗಿ ಚಿಂತನೆಗಳು ಪಕ್ವವಾದವು, ವಿಮೋಚನಾಶಕ್ತಿ ಹೆಚ್ಚಿತು.

"ಎಲ್ಲ ವಿಧವೆಯರ ಹಾಗೆ ನಾನು ಮಾತ್ರ ಗೋಳಾಟದಲ್ಲಿ ಮುಳುಗಲಾರೆ" ಎಂಬ ನಿರ್ಧಾರದೊಂದಿಗೆ, ಸಾಮಾಜಿಕ, ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ತಮ್ಮನ್ನು ತೊಡಗಿಸಿಕೊಂಡರು. ಮೊದಮೊದಲು ಕಥೆಗಳನ್ನೂ, ಲೇಖನಗಳನ್ನೂ ಬರೆದು ಪತ್ರಿಕೆಗಳಿಗೆ ಕಳಿಸುತ್ತಿದ್ದರು. ನಂತರ ತಮ್ಮ ಸಮಯವನ್ನು ಅಬಲೆಯರ ಕ್ಷೇಮಾಭಿವೃದ್ಧಿಗಾಗಿ ಬಳಸತೊಡಗಿದರು. ಅಂದಿನ ನಮ್ಮ ಸಾಮಾಜಿಕ ಸಂರಚನೆಯಲ್ಲಿ ಮಹಿಳೆಯರ ಬಗೆಗಿದ್ದ ದೃಷ್ಟಿಕೋನ ಬದಲಾಗಬೇಕಾದ ಅಗತ್ಯವೂ ಇತ್ತು. ಈ ದಿಶೆಯಲ್ಲಿ ಕಲ್ಯಾಣಮ್ಮ ಕೈಗೆತ್ತಿಕೊಂಡ ಕಾರ್ಯ ಅತ್ಯಂತ ಅರ್ಥಪೂರ್ಣ ಹಾಗೂ ಪ್ರಸ್ತುತ ಎನಿಸಿಕೊಳ್ಳುತ್ತದೆ.

ತಮ್ಮ ಬಾಳಿನ ಕಹಿಯನ್ನು ಮರೆತು ಇತರ ಕಹಿ ಬಾಳುಗಳಿಗೆ ಸಿಹಿ ತುಂಬುವ ಕೆಲಸ ಪ್ರಾರಂಭಿಸಿದರು ಕಲ್ಯಾಣಮ್ಮ. ಸಂಘಟನೆಯ ಮೂಲಕ ಸಾಮಾಜಿಕ ಚಳವಳಿಗೆ ಕೈ ಹಾಕಿದರು. ಸ್ತ್ರೀಪರವಾದ ನಿಲುವಿನೊಂದಿಗೆ, 1913 ರಲ್ಲಿ "ಶಾರದಾ ಸ್ತ್ರೀ ಸಮಾಜ" ಸ್ಥಾಪಿಸಿದರು.

ಉಪನ್ಯಾಸ, ಚರ್ಚೆಗಳ ಮೂಲಕ ಮಹಿಳೆಯರ ಬೌದ್ಧಿಕ ಮಟ್ಟವನ್ನು ಎತ್ತರಿಸುವ ಪ್ರಯತ್ನ ದೊಂದಿಗೆ, ವೃತ್ತಿಪರ ತರಬೇತಿ ನೀಡಿ ಅವರನ್ನು ಆರ್ಥಿಕವಾಗಿ ಸ್ವತಂತ್ರಗೊಳಿಸುವ ಪ್ರಯತ್ನವೂ ನಡೆಯಿತು. ವರದಕ್ಷಿಣೆ, ಬಾಲ್ಯವಿವಾಹದಂತಹ ಸಾಮಾಜಿಕ ಪಿಡುಗುಗಳ ವಿಷಯದಲ್ಲಿ ಸ್ತ್ರೀಯ ರನ್ನು ಜಾಗೃತಗೊಳಿಸುವ ಸಾಹಸವನ್ನೂ, ತಮ್ಮ ಕೃತಿಗಳ ಮೂಲಕ ಮಾಡಿದರು. "ಪ್ರಿಯಂವದೆ", "ನಿರ್ಭಾಗ್ಯ ವನಿತೆ" ಕಾದಂಬರಿಗಳು, "ನಿರ್ಮಲಾ" "ಸ್ನೇಹಲತೆ" "ಬಾರಿಸ್ಟರ್ ರಾಮಚಂದ್ರನ್" ಹಾಗೂ "ಇಪ್ಪತ್ತನೆ ಶತಮಾನದ ಅಳಿಯ" ನಾಟಕಗಳು ಸಾಮಾಜಿಕ ಲೋಪದೋಷಗಳನ್ನು ಎತ್ತಿ ಹೇಳುತ್ತವೆ. ವಿಧವಾ ವಿವಾಹಕ್ಕೆ ಹೆಚ್ಚು ಉತ್ತೇಜನ ನೀಡಿ ಕತ್ತಲ ತುಂಬಿದ ಹಲವರ ಬದುಕಿಗೆ ಬೆಳಕು ನೀಡಿದ್ದಾರೆ.

ಹತಭಾಗ್ಯ ಮಹಿಳೆಯರ ಕಲ್ಯಾಣಕ್ಕಾಗಿ ಸಂಘ ವೊಂದನ್ನು ಸ್ಥಾಪಿಸಿ, ಯೋಜನೆಗಳನ್ನು ಹಮ್ಮಿ ಕೊಳ್ಳುವುದರ ಜೊತೆಗೆ ಅವರು ಪಾಕ್ಷಿಕ ಪತ್ರಿಕೆ ಯೊಂದನ್ನು ಹೊರತಂದರು. ಅಕ್ಟೋಬರ್ 1917 ರಲ್ಲಿ "ಸರಸ್ವತಿ" ಹೊರಬಂತು. ವಿಶೇಷವೆಂದರೆ ಈ ಪತ್ರಿಕೆಯಲ್ಲೂ ಸ್ತ್ರೀಪರ ಚಿಂತನೆಯನ್ನೇ ಮಾಡುತ್ತಿದ್ದರು. ಧಾರಾವಾಹಿಗಳನ್ನು ಪ್ರಕಟಿಸು ವುದನ್ನೂ ಪ್ರಾರಂಭಿಸಿದರು. ವೈಚಾರಿಕ ಲೇಖನ ಗಳಿಂದ ಮೊದಲ್ಗೊಂಡು ಮಕ್ಕಳ ಸಾಹಿತ್ಯದ ವರೆಗೂ ವಿಷಯ ವ್ಯಾಪ್ತಿಯಿದ್ದ "ಸರಸ್ವತಿ"ಗೆ ಕಲ್ಯಾಣಮ್ಮ ನವರು 43 ವರ್ಷಗಳ ಕಾಲ ಸಂಪಾದಕರಾಗಿದ್ದರು.

ಶಾರದಾ ಸ್ತ್ರೀ ಸಮಾಜ, ಸರಸ್ವತಿಗಳ ಮೂಲಕ ಅಬಲೆಯರ ಕ್ಷೇಮಾಭಿವೃದ್ಧಿ ಕಾರ್ಯಗಳನ್ನು ಕೈಗೊಂಡ ಅವರು ಏಪ್ರಿಲ್ 1938 ರಲ್ಲಿ "ಅಖಿಲ ಕರ್ನಾಟಕ ಮಕ್ಕಳ ಕೂಟ" ಸಂಸ್ಥೆಯನ್ನು ಪ್ರಾರಂ ಭಿಸಿದರು. ಮಕ್ಕಳ ಸರ್ವತೋಮುಖ ವಿಕಾಸಕ್ಕೆ ಕಾರಣವಾಗುವಂತಹ ಪರಿಸರವನ್ನು ಸೃಷ್ಟಿಸಿ ಸಂಸ್ಥೆಯನ್ನು ಬೆಳೆಸಿದರು ಕಲ್ಯಾಣಮ್ಮ.

ಸಾಹಿತ್ಯಕ, ಸಾಮಾಜಿಕ ಚಟುವಟಿಕೆಗಳೊಂದಿಗೆ ಸಾರ್ವಜನಿಕ ರಂಗದಲ್ಲೂ ಕಾರ್ಯೋನ್ಮುಖರಾದರು. ಪ್ರಥಮ ಮಹಿಳಾ ಬೆಂಚ್ ಮ್ಯಾಜಿಸ್ಟ್ರೇಟರಾಗಿ, ಪುರಸಭೆಯ ಪ್ರಥಮ ಮಹಿಳಾ ಸದಸ್ಯೆಯಾಗಿ, ಪ್ರಥಮ ಮಹಿಳಾ ಉಪಾಧ್ಯಕ್ಷರಾಗಿ, ಕನ್ನಡ ಸಾಹಿತ್ಯ ಪರಿಷತ್ತಿನ ಕಾರ್ಯಕಾರಿ ಸಮಿತಿಯ ಮಹಿಳಾ ಸದಸ್ಯೆಯಾಗಿ ಕಲ್ಯಾಣಮ್ಮನವರು ತೋರಿದ ಕ್ರಿಯಾಶೀಲತೆ ಅದ್ಭುತವಾದದ್ದು. ಬಂಗಾಳದ ಆರ್ಯ ಸಾಹಿತ್ಯ ಪರಿಷತ್ತು 1919 ರಲ್ಲಿ 'ವಿದ್ಯಾವಿನೋದಿನಿ' ಎಂಬ ಬಿರುದನ್ನು ನೀಡಿ ಗೌರವಿಸಿದೆ. 1935 ರಲ್ಲಿ ಮೈಸೂರು ಮಹಾರಾಜರು ಸಾರ್ವಜನಿಕ ಸೇವಾ ಪದಕವನ್ನು ನೀಡಿದ್ದಾರೆ.

ಅಂದಿನ ಸಾಮಾಜಿಕ ವ್ಯವಸ್ಥೆಯ ಕಟ್ಟುಕಟ್ಟಳೆ ಗಳ ಮಧ್ಯೆ, ಹಣಕಾಸಿನ ಅಡಚಣೆ, ಕುಟುಂಬ ದವರ ಅಸಮಾಧಾನಗಳ ಮಧ್ಯೆಯೂ ಅಸಾ ಧಾರಣ ಸೇವೆ ಸಲ್ಲಿಸಿರುವ ಚೇತನ ಕಲ್ಯಾಣಮ್ಮ ನವರದು. ಜೀವನದುದ್ದಕ್ಕೂ ಅವರಿಗೆ ಅಂಟಿ ಬಂದಿದ್ದ ಮೂರ್ಛೆರೋಗ ಸಾವಿನಲ್ಲೂ ದೂರಾಗ ಲಿಲ್ಲ. ಫೆಬ್ರವರಿ 21, 1965 ರಂದು ರೋಗ ಉಲ್ಬಣಿಸಿ, ವಿಧಿವಶರಾದರು. ತಾನು ಹೊತ್ತಿ ಉರಿದು ಇತರರಿಗೆ ಬೆಳಕು ನೀಡುವ ಸೋಡರಿ ನಂತಹ ಜೀವನ ಕಲ್ಯಾಣಮ್ಮನವರದು. **

# ಆದರ್ಶ ಶಿಕ್ಷಕಿ ಗಿರಿಜಾ ಹುಲ್ಲತ್ತಿ

ದೆಹಲಿಯ 'ಸೆಂಟರ್ ಫಾರ್ ಕಲ್ಚರಲ್ ರಿಸೋರ್ಸಸ್ ಆ್ಯಂಡ್ ಟ್ರೈನಿಂಗ್' (C. C. R. T.) ಸಂಸ್ಥೆ ಪ್ರತಿವರ್ಷ ದೇಶದ ಶಿಕ್ಷಕರ ಸೇವೆಯನ್ನು ಗುರ್ತಿಸಿ 60 ಜನ ಶಿಕ್ಷಕರಿಗೆ ಉತ್ತಮ ಶಿಕ್ಷಕರೆಂದು ಪ್ರಶಸ್ತಿ ವಿತರಿಸುತ್ತದೆ. 1972 ರಲ್ಲಿ ಸ್ಥಾಪನೆಯಾದ ಈ ಸಂಸ್ಥೆ ಪ್ರತಿ ವರ್ಷ ಉತ್ಸಾಹಿ ಶಿಕ್ಷಕರಿಗೆ ಭಾರತದ ಪ್ರಾಚೀನ ಶಿಲ್ಪಕಲೆ, ಸಂಸ್ಕೃತಿ, ನೃತ್ಯ ಹಾಗೂ ಕರಕುಶಲ ಕಲೆಗಳ ಬಗ್ಗೆ ತರಬೇತಿ ನೀಡುತ್ತದೆ. ಇವುಗಳ ಬಗ್ಗೆ ಜನಸಾಮಾನ್ಯರಲ್ಲಿ ಮತ್ತು ಮಕ್ಕಳಲ್ಲಿ ಕುತೂಹಲ ಪ್ರಜ್ಞೆ ಮೂಡಿಸಿ, ಅವುಗಳನ್ನು ಹೇಗೆ ಉಳಿಸಿ, ಬೆಳೆಸಿಕೊಂಡು ಹೋಗಬೇಕು ಎನ್ನುವುದರ ಬಗ್ಗೆ ಸೂಕ್ತ ತಿಳುವಳಿಕೆ ನೀಡುವಲ್ಲಿ ಶಿಕ್ಷಕರಿಗೆ ಈ ತರಬೇತಿ ನೆರವಾಗುತ್ತದೆ. ತರಬೇತಿ ಹೊಂದಿದ ಶಿಕ್ಷಕರು ಸಂಸ್ಥೆಯಿಂದ ಕೊಡಮಾಡ ಲ್ಪಟ್ಟ 'ಕಲ್ಚರಲ್ ಕಿಟ್'ಅನ್ನು ಮಕ್ಕಳ ಅಧ್ಯ ಯನ ಕಾರ್ಯದಲ್ಲಿ ಎಷ್ಟರಮಟ್ಟಿಗೆ ಉಪಯೋಗಿ ಸಿದ್ದಾರೆ, ಮಕ್ಕಳಲ್ಲಿ ಎಷ್ಟರಮಟ್ಟಿಗೆ ಪ್ರಾಚೀನ ಪರಂಪರೆ ಬಗ್ಗೆ ಪ್ರಜ್ಞೆ ಮೂಡಿಸಿದ್ದಾರೆ ಎಂಬು ದನ್ನು ಗಮನಿಸಿ ಈ ಪ್ರಶಸ್ತಿ ನೀಡಲಾಗುತ್ತದೆ. ಕರ್ನಾಟಕದ ಇಬ್ಬರು ಶಿಕ್ಷಕಿಯರು ಹಾಗೂ ಮೂವರು ಶಿಕ್ಷಕರು ಈ ಬಾರಿ ಈ ಪ್ರಶಸ್ತಿ ಯನ್ನು ಪಡೆದಿದ್ದಾರೆ.

ಶ್ರೀಮತಿ ಗಿರಿಜಾ ಎಚ್. ಹುಲ್ಲತ್ತಿಯವರೂ ಸಹ ಪ್ರೌಢಶಾಲಾ ಶಿಕ್ಷಕಿಯಾಗಿದ್ದು 1990 ನೇ, ಸಾಲಿನಲ್ಲಿ ಪ್ರಶಸ್ತಿ ಪಡೆದವರಲ್ಲೊಬ್ಬರಾಗಿದ್ದಾರೆ. ಶ್ರೀಮತಿ ಗಿರಿಜಾ ಹಿರೇಕೇರೂರ ತಾಲ್ಲೂಕಿನ ಹಂಸಭಾವಿ ಗ್ರಾಮದಲ್ಲಿ ಜನಿಸಿದರು. ಇವರ ತಂದೆ ಸಹ ಒಬ್ಬ ಶಾಲಾ ಶಿಕ್ಷಕರಾಗಿದ್ದರು. ಪ್ರಾಥಮಿಕ ಶಿಕ್ಷಣದಿಂದ ಪದವಿಯವರೆಗಿನ ಇವರ ಶಿಕ್ಷಣವೆಲ್ಲ ಹಂಸಭಾವಿಯಲ್ಲೇ ನಡೆಯಿತು. 1970 ರಲ್ಲಿ ಹಂಸಭಾವಿಯ ಮೃತ್ಯುಂಜಯ ವಿದ್ಯಾಪೀಠದಿಂದ ಕಲಾಪದವಿ ಪಡೆದ ಗಿರಿಜಾ ಅವರು ಅದೇ ವರ್ಷ ಬ್ಯಾಡಗಿಯ ಶ್ರೀ ಶಿವ ಯೋಗೀಶ್ವರ ಪ್ರಸಾದ ನಿಲಯದ ಹೆಣ್ಣುಮಕ್ಕಳ ಪ್ರೌಢಶಾಲೆಯಲ್ಲಿ ಶಿಕ್ಷಕಿಯಾಗಿ ಸೇರಿದರು. 1974 ರಲ್ಲಿ ವಿವಾಹವಾದರು. ಇವರ ಪತಿ ಶ್ರೀ ಎಸ್. ಬಿ. ನಂದೀಹಳ್ಳಿಯವರೂ ಸಹ ಇದೇ ಶಾಲೆಯಲ್ಲಿ ಶಿಕ್ಷಕರಾಗಿದ್ದರು. ಆದರೆ ಈಗ ಅವರು ಮನೆತನದ ಜವಾಬ್ದಾರಿಯೊಂದಿಗೆ ವೃತ್ತಿಯನ್ನೂ ನಿರ್ವಹಿಸಲಾಗದೇ ರಾಜೀನಾಮಾ ನೀಡಿದ್ದಾರೆ. ಇವರ ಇಬ್ಬರು ಸಹೋದರರು ಅಮೆರಿಕದಲ್ಲಿ ಉನ್ನತ ಹುದ್ದೆಯಲ್ಲಿದ್ದಾರೆ.





ಎರಡು ಗಂಡುಮಕ್ಕಳ ತಾಯಿಯಾಗಿರುವ ಇವರು ಮಕ್ಕಳ ಭವಿಷ್ಯದ ಬಗ್ಗೆ ಕಾಳಜಿ ವಹಿಸಿದ್ದಾರೆ. 'ನಮ್ಮ ಕರ್ತವ್ಯವನ್ನು ನಾವು ಶ್ರದ್ಧೆಯಿಂದ ಮಾಡಬೇಕು, ಫಲ ಕೊಡುವುದು ಭಗವಂತನ ಇಚ್ಛೆ' ಎನ್ನುವ ಇವರು 'ಕರ್ಮಣ್ಯೇ ವಾಧಿಕಾರಸ್ತೆ ಮಾಫಲೇಷ ಕದಾಚನಃ' ಎಂಬ ತತ್ವಕ್ಕೆ ಅಂಟಿಕೊಂಡವರು.

ಗೃಹಿಣಿಯರು ಸಂಸಾರದೊಂದಿಗೆ ವೃತ್ತಿಯ ಜವಾಬ್ದಾರಿಯನ್ನೂ ಹೊರಬೇಕಾಗಿರುವುದರಿಂದ ಎರಡನ್ನೂ ಸಮರ್ಥವಾಗಿ ತೂಗಿಸಿಕೊಂಡು ಹೋಗುವುದು ಕಷ್ಟವೇ ಆದರೂ ಮನೆಯವ ರೆಲ್ಲರ ಸಹಕಾರ ದೊರೆತರೆ ಅಂಥ ತೊಂದರೆ ಬರಲಾರದು ಎನ್ನುವ ಗಿರಿಜಾ ತಮಗೆ ದೊರೆ ಯುತ್ತಿರುವ ಮನೆಯವರೆಲ್ಲರ ಸಹಕಾರಕ್ಕೆ ಕೃತಜ್ಞ ರಾಗಿದ್ದಾರೆ.

ತಾವು ಕಲಿಸುತ್ತಿರುವ ಶಾಲೆಯಲ್ಲಿ ಮಕ್ಕಳೆಲ್ಲರ ಮೆಚ್ಚಿನ ಶಿಕ್ಷಕಿಯಾಗಿರುವ ಶ್ರೀಮತಿ ಗಿರಿಜಾ ಸಹೋದ್ಯೋಗಿಗಳೊಂದಿಗೂ ಉತ್ತಮ ಸಂಬಂಧ ಹೊಂದಿದ್ದಾರೆ. ಶಿಸ್ತಿಗೆ ಮೊದಲ ಆದ್ಯತೆ ಕೊಡು ತ್ತಾರೆ. ತಮ್ಮ ಶಾಲೆಯ ಬಗ್ಗೆ ಉತ್ಸಾಹದಿಂದ ಮಾತನಾಡುತ್ತಾರೆ. ಶಾಲೆಯಲ್ಲಿ ಶಿಕ್ಷಕ-ಶಿಕ್ಷಕಿಯ ರೊಂದಿಗೆ ಮುಕ್ತ ಮನಸ್ಸಿನಿಂದ ವಿದ್ಯಾರ್ಥಿಗಳ ಕಲಿಯುವಿಕೆಯ ಸಮಸ್ಯೆಗಳ ಬಗ್ಗೆ ಚರ್ಚಿಸು ತ್ತಾರೆ. ತಮಗಿಂತ ಅನುಭವಿ ಶಿಕ್ಷಕರಿಂದ ಮಾರ್ಗ- ದರ್ಶನ ಪಡೆಯುತ್ತಾರೆ. ಈ ಯಾಂತ್ರಿಕ ಜಗತ್ತಿ ನಲ್ಲಿ ಶಿಕ್ಷಕರೂ ಯಂತ್ರಗಳಂತಾಗದೇ ಮಕ್ಕಳಲ್ಲಿ ಮಾನವೀಯ ಮೌಲ್ಯಗಳನ್ನು ಬೆಳೆಸುವಲ್ಲಿ, ನಮ್ಮ ಸಾಂಸ್ಕೃತಿಕ ಪರಂಪರೆಯನ್ನು ಕಾಪಾಡಿ ಕೊಂಡು ಹೋಗುವಂತೆ ಅವರಿಗೆ ಮಾರ್ಗದರ್ಶನ ನೀಡುವಲ್ಲಿ ಮಹತ್ತರ ಪಾತ್ರ ವಹಿಸಬೇಕು ಎನ್ನುತ್ತಾರೆ ಶ್ರೀಮತಿ ಗಿರಿಜಾ.

— ಮಂಜುಳಾ ಕಮಡೊಳ್ಳಿ

ಚಿತ್ರಗಳು : ಶಿವಯೋಗಿ ಮುಕರಿ



# ರಾಮನಾಮದಲ್ಲಿ ಚಿತ್ರರಚನೆ





ಚಿತ್ರ: ಬಿ. ಕೆ. ನಾಗೇಶ್

ಗೃಹಿಣಿಯಾದವಳು ಅಡುಗೆ, ಮನೆಗೆಲಸ, ಗಂಡ, ಮಕ್ಕಳ ಯೋಗಕ್ಷೇಮಕ್ಕೆ ಮಾತ್ರ ಸೀಮಿತವಾಗಿರದೆ ಯಾವುದಾದರೂ ಒಂದು ಹವ್ಯಾಸದಲ್ಲಿ ತೊಡಗಿರಬೇಕೆಂದು ಹೇಳುತ್ತಾರೆ ಶಿಶುರೋಗ ತಜ್ಞರಾದ ಡಾ॥ ಗೋವಿಂದರಾಜುರವರು.

ಪತಿಯ ಪ್ರೋತ್ಸಾಹದಿಂದ ಬಹುಮುಖ ಪ್ರತಿಭೆಯನ್ನು ಹೊಂದಿರುವ ಉಮಾ ಗೋವಿಂದ್ ರಾಜು, ಅಕ್ಕಿ ಕಾಳಿನಲ್ಲಿ ಅಕ್ಷರಗಳನ್ನು ಮೂಡಿಸುವಂತೆ ರಾಮನಾಮದಲ್ಲಿ ಚಿತ್ರಗಳನ್ನು ಬರೆಯುವ ಕಲೆಯಲ್ಲಿ ಪರಿಣತಿ ಹೊಂದಿದ್ದಾರೆ.

ಆಸೆಗಾಗಿ ಚಿತ್ರಿಸುವುದನ್ನು ಕಲಿತು, ಕಡೆಗೆ ಹವ್ಯಾಸವಾಗಿಟ್ಟುಕೊಂಡು ನೂರಕ್ಕೂ ಹೆಚ್ಚು ದೇವರ ಚಿತ್ರಗಳನ್ನು ರಾಮನಾಮದಿಂದ ಬಿಡಿಸಿದ್ದಾರೆ.

ಸಂಪೂರ್ಣ ರಾಮಾಯಣ, ಕನ್ನಿಕಾಪರಮೇಶ್ವರಿಯ ಜೀವನ ಚರಿತ್ರೆ, ಅಷ್ಟಲಕ್ಷ್ಮಿ, ವಿನಾಯಕ, ಆಂಜನೇಯ ಹೀಗೆ ಅನೇಕ ಚಿತ್ರಗಳನ್ನು ಬಿಡಿಸಿರುವರು. ಚಿತ್ರದ ರೇಖೆಯನ್ನು ಬಿಡಿಸಿ ಸ್ಕೆಚ್ ಪೆನ್ನು ಮತ್ತು ವಾಟರ್ ಕಲರ್‌ನಿಂದ ಹೊಂದಿಕೆಯಾಗುವ ಬಣ್ಣದಿಂದ ರಾಮನಾಮದಿಂದ ತುಂಬಿಸಿ ಆಕರ್ಷಕವಾಗಿ ಚಿತ್ರ ಮೂಡಿಸುತ್ತಾರೆ. ಅಪರೂಪದ ಈ ಕಲೆ ಕರ್ನಾಟಕ ಮತ್ತು ಆಂಧ್ರ ಪ್ರದೇಶಗಳಲ್ಲಿ ಪ್ರದರ್ಶನಗೊಂಡು ಜನರಿಂದ ಪ್ರಶಂಸೆಗೊಳಗಾಗಿದೆ.

ನಮ್ಮ ದೇಶದಲ್ಲಿ ಮಾತ್ರವಲ್ಲದೆ ಇವರ ಕಲೆ ಹೊರ ದೇಶದಲ್ಲೂ ಮೆಚ್ಚಿಗೆಗೆ ಪಾತ್ರವಾಗಿದೆ.

'ಹಿಂದೂ ಹೆರಿಟೇಜ್' ಎಂಬ ಸಂಸ್ಥೆ ವಿಶ್ವಕೋಶಕ್ಕಾಗಿ ಆಯ್ಕೆಮಾಡಿದೆ. ಟೊರಾಂಟೋದಲ್ಲಿ ಮತ್ತು ಅಮೇರಿಕಾದಲ್ಲಿ ಇವರ ಕಲಾಕೃತಿಗಳು ಪ್ರದರ್ಶನಗೊಂಡಿವೆ.

ಇವರ ಚಿತ್ರಗಳ ರಚನೆಗೆ ಹೆಚ್ಚು ಗಮನ ಕೊಡುವ ಉಮಾರವರಿಗೆ ಅನೇಕ ದೇವಸ್ಥಾನಗಳಿಂದ ತಮಗೆ ಬೇಕಾದ ಚಿತ್ರಗಳನ್ನು ಮಾಡಿಕೊಡುವಂತೆ ಬೇಡಿಕೆ ಬಂದಿದೆ.

ಇವರ ಕಲಾಕೃತಿಗಳನ್ನು ಮೆಚ್ಚಿ ಪಡೆಯಲಿಚ್ಛಿಸುವವರಿಗೆ ಯಾವ ರೀತಿ ಫಲಾಪೇಕ್ಷೆಗಳು ಇಲ್ಲದೆ ಕಾಣಿಕೆಯಾಗಿ ನೀಡಿರುವರು.

ಬೆಂಗಳೂರಿನ ಮಹಾಲಕ್ಷ್ಮಿ ಲೇ ಔಟ್‌ನಲ್ಲಿರುವ ಆಂಜನೇಯ ದೇವಸ್ಥಾನದವರು ಇವರ ಕಲೆಯನ್ನು ಮೆಚ್ಚಿ ಸನ್ಮಾನ ಮಾಡಿದ್ದಾರೆ. ಇನ್ನೂ ಅನೇಕ ಚಿತ್ರಗಳನ್ನು ರಾಮನಾಮಾವಳಿಯಿಂದ ಚಿತ್ರಿಸುವ ಆಸೆ ಹೊಂದಿರುವ ಉಮಾ ಗೋವಿಂದರಾಜುರವರು ಮುಂದೆ ಕೋಟಿ ರಾಮನಾಮವನ್ನು ಬರೆಯುವ ಆಸೆ ಹೊಂದಿದ್ದಾರೆ.

ಚಿತ್ರರಚನೆಯ ಜೊತೆ ಲಘು ಸಂಗೀತ, ಮೈದಾದಲ್ಲಿ ಹೂವಿನ ರಚನೆ, ಕ್ರೋಷಾ, ಬಟ್ಟೆಯಲ್ಲಿ ಚಿತ್ರ ಬಿಡಿಸಿ ಬಣ್ಣ ಹಾಕುವುದು, ಹೊಲಿಗೆ ಇವುಗಳು ಇವರ ಇತರ ಹವ್ಯಾಸಗಳು. ಕಿರುತೆರೆಯಲ್ಲಿ, ಸಂಘ ಸಂಸ್ಥೆಗಳಲ್ಲಿ ನಾಟಕದಲ್ಲಿ ಅಭಿನಯಿಸಿ ಬಹುಮಾನ ಗಳಿಸಿದ್ದಾರೆ.

— ಗೀತಾ ರಾವ್





# ಕಣ್ಮನ ತಣಿಸುವ ತಾಣ: ಕೊಡಗಿನ ನಿಸರ್ಗಧಾಮ





ಚಿತ್ರಗಳು :

ಪ್ರಕೃತಿ ದೇವಿಯ ತವರೂರು ಎನಿಸಿಕೊಂಡಿರುವ ಕೊಡಗು, ಪ್ರಕೃತಿ ಸೌಂದರ್ಯದೊಂದಿಗೆ ಪ್ರೇಕ್ಷಣೀಯ ಸ್ಥಳಗಳನ್ನು ಒಳಗೊಂಡಿದೆ. ಇವುಗಳಿಂದಲೇ ಕೊಡಗನ್ನು ಭಾರತದ ಸ್ವಿಟ್ಜರ್‌ಲ್ಯಾಂಡ್, ಕರ್ನಾಟಕದ ಕಾಶ್ಮೀರ ಎಂದೆಲ್ಲಾ ವರ್ಣಿಸುವರು. ಕೊಡಗಿನ ಸುಂದರ ತಾಣಗಳಿಗೆ ಇತ್ತೀಚೆಗಿನ ಸೇರ್ಪಡೆ 'ನಿಸರ್ಗ ಧಾಮ'. ಕುಶಾಲನಗರದ ಸಮೀಪ ಪ್ರೇಕ್ಷಕರ ಮನಸೆಳೆಯುವ ನಿಸರ್ಗಧಾಮವನ್ನು ನಿರ್ಮಿಸಲಾಗಿದೆ.

ತಲಕಾವೇರಿಯಲ್ಲಿ ಉಗಮಿಸುವ 'ಕರ್ನಾಟಕದ ಜೀವನದಿ' ಕಾವೇರಿ, ಕುಶಾಲನಗರದ ಸಮೀಪ ಮೂರು ಸೀಳಾಗಿ ಹರಿದು ಐದು ದ್ವೀಪಗಳನ್ನು ನಿರ್ಮಿಸಿ ಮುಂದೆ ಸಾಗಿದ್ದಾಳೆ. ಈ ದ್ವೀಪಗಳಲ್ಲಿ ಒಂದು ದ್ವೀಪ 65 ಎಕರೆ ವಿಸ್ತಾರವಿದೆ. ಇದನ್ನೇ 1990 ರಲ್ಲಿ ಕಾವೇರಿ ನಿಸರ್ಗಧಾಮವಾಗಿ ಅಭಿವೃದ್ಧಿ ಪಡಿಸಲಾಯಿತು. ಆಧುನಿಕ ನಾಗರಿಕತೆಯ ಜಂಜಾಟಗಳಿಂದ ದೂರವಿರಲು ಬಯಸುವ ಪ್ರಕೃತಿ ಆರಾಧಕನಿಗೆ, ವಿಶಿಷ್ಟ ರೀತಿಯ ಪ್ರವಾಸಿ ತಾಣವನ್ನು ಬಯಸುವ ಪ್ರವಾಸಿಗೆ, ಈ ನಿಸರ್ಗ ಧಾಮ ನಿಜವಾಗಿಯೂ ವಿಶಿಷ್ಟ ಪರಿಸರದ ವಾತಾವರಣವನ್ನು ಕಲ್ಪಿಸಿದೆ.

ಕುಶಾಲನಗರದಿಂದ ಮೂರು ಕಿ. ಮೀ. ದೂರವಿರುವ ನಿಸರ್ಗಧಾಮದ ಒಳಕ್ಕೆ ಟಿಕೇಟ್ ಪಡೆದು ಪ್ರವೇಶಿಸಿದರೆ ಮೊದಲು ಕಾಣುವುದು ತೂಗು ಸೇತುವೆ. ಕರ್ನಾಟಕದ ಪ್ರವಾಸೀ ಕೇಂದ್ರಗಳಲ್ಲೇ ಪ್ರಥಮವಾಗಿರುವ ಈ ತೂಗು ಸೇತುವೆ ನದಿಯ ಮೇಲ್ಭಾಗದಲ್ಲಿ ಕಟ್ಟಲ್ಪಟ್ಟಿದ್ದು, ಇದರಲ್ಲಿ ನಡೆಯುವ ವ್ಯಕ್ತಿಗೆ ಭಯಮಿಶ್ರಿತ ಆನಂದವನ್ನುಂಟು ಮಾಡುವುದು. ಎರಡು ದೊಡ್ಡ ಮರಗಳಿಗೆ ಬಲವಾಗಿ ಬಿಗಿದು ಕಟ್ಟಲಾಗಿರುವ ತೂಗು ಸೇತುವೆಯಲ್ಲಿ ಹಾದು ಮುಂದೆ ಹೋದರೆ ಬಿದಿರಿನ ಮೆಳೆಗಳ ದರ್ಶನವಾಗುವುದು. ಅಲ್ಲಿರುವ ಕಿರು ಹಾದಿಯಲ್ಲಿ ಮುಂದೆ ಸಾಗಿದರೆ ಬಿದಿರಿನ ವಿಶ್ರಾಂತಿ ತಾಣ, ಮರದ ಮೇಲಿನ ಕುಟೀರ, ಮಕ್ಕಳಿಗಾಗಿರುವ ಉಯ್ಯಾಲೆಗಳು ಮುಂತಾದವು ಗೋಚರಿಸುತ್ತವೆ. ಜಿಂಕೆ, ಸಾರಂಗಗಳ ಪುಟ್ಟ ವನವೂ ಇಲ್ಲಿದೆ. ತಂಗಾಳಿಯ ಆನಂದ ಸವಿಯುತ್ತಾ, ದ್ವೀಪದಲ್ಲಿ ಸಾಗಿದರೆ ಎಂತಹ ಬೇಸರದ ಮನಸ್ಸಿನವರಿಗೂ ಸಂತೋಷವಾಗದಿರಲಾರದು. ದ್ವೀಪವನ್ನು ಸುತ್ತುವರಿದಿರುವ ನದಿಯಲ್ಲಿ ಈಜುಪ್ರಿಯರು ಈಜಬಹುದಾದರೆ, ತಿಂಡಿಪ್ರಿಯರು ತಮ್ಮ ವನಭೋಜನ ಮಾಡಬಹುದು!

ಆಹಾ! ಈ ಸುಂದರವನ ಬಿಟ್ಟು ಹೋಗಲು ಮನಸ್ಸಿಲ್ಲವೇ? ಚಿಂತೆಯಿಲ್ಲ. ರಾತ್ರಿ ತಂಗಲು ಇಲ್ಲಿ ಮರದ ಮನೆಗಳ ವ್ಯವಸ್ಥೆ ಕಲ್ಪಿಸಲಾಗಿದೆ. ಹೊರಗಿನಿಂದ ಗುಡಿಸಲಿನಂತೆ ಕಂಡುಬರುವ ಈ ಮನೆಗಳ ಒಳ ಹೊಕ್ಕರೆ ಯಾವುದೇ ರೀತಿಯ ಆಧುನಿಕ ಸೌಲಭ್ಯಕ್ಕೆ ಕೊರತೆಯಿಲ್ಲದಂತೆ ವಿದ್ಯುತ್, ನೀರು, ಸ್ನಾನಗೃಹ ಮುಂತಾದವುಗಳನ್ನು ಇಲ್ಲಿ ಕಾಣಬಹುದು. 'ಅಗಸ್ತ್ಯ', 'ಲೋಪಮುದ್ರ', 'ಬ್ರಹ್ಮಗಿರಿ' ಮುಂತಾದ ವಿಶಿಷ್ಟ ಹೆಸರುಗಳುಳ್ಳ ಈ ಮನೆಗಳಲ್ಲಿ ರಾತ್ರಿ ಕಳೆಯಬಯಸುವವರು ಮಡಿಕೇರಿ ಅರಣ್ಯ ಇಲಾಖೆಯಲ್ಲಿ ಮುಂಗಡವಾಗಿ ಸ್ಥಳ ಕಾದಿರಿಸಬೇಕಾಗುವುದು. ಪ್ರತಿ ಮನೆಗೂ ತಲಾ ನೂರು ರೂಪಾಯಿಯ ಬಾಡಿಗೆ ವಿಧಿಸಲಾಗಿದೆ.

ಈ ವಸತಿಗೃಹಗಳ ಜತೆಗೆ ಬಿದಿರು ಬೊಂಬಿನ ಆರಾಮಗೃಹಗಳು, ಹಗಲುಕನಸು ಕಾಣಲು ಮರದ ಮೇಲಿರುವ ಬಿದಿರಿನ ಕುಟೀರಗಳು, ಭೋಜನಕೂಟ ನಡೆಸಲು ತೂಗು ಚಪ್ಪರ ಇವುಗಳೆಲ್ಲವೂ ಇವೆ.

ಹಿಂದೆ ಬರಡಾಗಿದ್ದ ಪ್ರದೇಶ, ಇಂದು ಪ್ರವಾಸಿಗರನ್ನು ಆಕರ್ಷಿಸುವಲ್ಲಿ ಸಫಲವಾಗಿ ರಾಜ್ಯದಲ್ಲಿಯೇ ವಿನೂತನ ಪ್ರವಾಸಿ ತಾಣವೆಂಬ ಹೆಸರು ಪಡೆದಿದೆ. ಕಾವೇರಿಯ ಜುಳುಜುಳು ನಿನಾದ, ಹಕ್ಕಿಗಳ ಕಲರವ, ಮರಗಳ ತಂಪು, ನಿಸರ್ಗದ ಸೊಂಪುಗಳಿಂದ ಕೂಡಿದ ಈ ನಿಸರ್ಗ ಧಾಮ ನವದಂಪತಿಗಳಿಗೆ ಮಧುಚಂದ್ರದ ತಾಣವಾದರೆ ರೋಮಿಯೋ-ಜ್ಯೂಲಿಯೆಟ್‌ರನ್ನು ಅನುಕರಿಸುವ ಇಂದಿನ ಯುವಪ್ರೇಮಿಗಳಿಗೆ ಲಲ್ಲೆಗರೆಯುವ ಸ್ಥಳವಾಗಿದೆ. ಸೃಷ್ಟಿಯ ಸೌಂದರ್ಯ ಸವಿಯಬಯಸುವವರಿಗೆ ಹೇಳಿ ಮಾಡಿಸಿದಂತಿರುವ 'ನಿಸರ್ಗಧಾಮ'ದಲ್ಲಿ ಹೊಸತನ್ನು ನೋಡುತ್ತ ಹೋಗಿ ಹೊತ್ತು ಮರೆತರೆ ಹೋಯಿತು. ವೇಳೆ ಜಾರುವುದೇ ತಿಳಿಯದ ಭಾವುಕತೆಯ ಕ್ಷಣಗಳು, ನರ್ತಿಸುತ್ತಾ ಸಾಗುವ ನದಿ ನೀರಿನಲ್ಲಿ ಇರುವ ಕಲ್ಲುಗಳಂತೆ ಸೌಂದರ್ಯ ಸವಿಯುತ್ತಾ, [illegible] ಸುಂದರತೆಯಲ್ಲೇ ಮುಳುಗಿಬಿಟ್ಟಿರುತ್ತೇವೆ.

— ಕೆ. ಜಿ. ಸುಭಾಷಿಣಿ



ಹಾಸ್ಯ ಲೇಖನ:

# ಗಡ್ಡ-ಗಂಡಾಂತರ

—ಗಂಗಾ ಹೆಗಡೆ



ದಿನ ನಿತ್ಯದ ಎಲ್ಲ ಕೆಲಸಗಳೊಡನೆ, ಗಂಡನ ಹಾಗೂ ಮಗನ "ಶೇವಿಂಗ್" ಸೆಟ್ಟನ್ನು ತೊಳೆದು ಒರಸಿ ಇಡುವುದು ನನ್ನ ಒಂದು ದೊಡ್ಡ ತಲೆನೋವಿನ ಕೆಲಸವಾಗಿತ್ತು. ನಾನು ಬೇಡ ಬೇಡವೆಂದರೂ ಅದು ನನ್ನ ಹೆಗಲಿಗೇ ಜೋತು ಬಿದ್ದಿತ್ತು. ಮದುವೆ ಆದಂದಿನಿಂದ ಗಂಡನ ಗಡ್ಡದ ಸೇವೆ ಮಾಡಿ ಆಯಿತು. ಈಗ ಮಗನದ್ದು ಬೇರೆ. ಹೀಗೇ ಆದರೆ ಮೊಮ್ಮಕ್ಕಳ ಮರಿಮಕ್ಕಳ ಗಡ್ಡದ ಸೇವೆಯನ್ನೂ ಮಾಡಬೇಕಾದೀತು ಎಂದು ಮಗನಿಗೆ "ನಿನ್ನ ಶೇವಿಂಗ್ ಸೆಟ್ಟನ್ನು ಗಡ್ಡ ಮಾಡಿಕೊಂಡ ನಂತರ ತೊಳೆದು ಒರೆಸಿಡು" ಎಂದು ಗದರಿಸಿದೆ. ಒಂದೆರಡು ದಿನ ಮಾಡಿ ನಂತರ ಪೂಸಿ ಹಚ್ಚಿ ನಾನೇ ತೊಳೆಯುವಂತೆ ಮಾಡಿದ. ಅವನು ಹೇಳುವದೇನೆಂದರೆ ಅವನ ಹೆಂಡತಿ ಬರುವ ತನಕ ಅದು ತಾಯಿಯ ಕೆಲಸವಂತೆ. ಇವರೂ ಅವನ ಪಕ್ಷ ಹಿಡಿದು ವಾದಿಸಿದಾಗ ನಾನು ಸೋತು ಹೋದೆ. ಆದರೂ ನನಗೆ ಆ ಕೆಲಸವನ್ನು ತಪ್ಪಿಸಿಕೊಳ್ಳಬೇಕಿತ್ತು. ಗಡ್ಡ ಅವರದ್ದಾದರೂ ತಲೆನೋವು ನಂದಾಗಿತ್ತು.

ಕಾರಣವಿಷ್ಟೇ. "ದಿನದಿನ ಟಿ. ವಿ. ಯಲ್ಲಿ ತೋರಿಸುವ ಬ್ಲೇಡು-ಶೇವಿಂಗ್ ಕ್ರೀಮ್‌ಗಳ ಜಾಹೀರಾತಿನಿಂದ ಮನಸೋತ ನನ್ನ ಮಗ ಅವನ್ನೆಲ್ಲಾ ಉಪಯೋಗಿಸಿ ಗಡ್ಡ ಮಾಡಿಕೊಳ್ಳುವುದನ್ನು ಶುರುಮಾಡಿದ. ಎಲ್ಲ ನಮೂನೆ ಬ್ಲೇಡು, ಲೋಷನ್, ಕ್ರೀಮ್ ಎಂದು ನನ್ನ ಡ್ರೆಸ್ಸಿಂಗ್ ಟೇಬಲ್ ಅನ್ನು ತಾನೇ ನನಗರಿವಿಲ್ಲದಂತೆ ಆಕ್ರಮಿಸಿಕೊಂಡಿದ್ದ. ನನ್ನ ಮುಖಕ್ಕೆ ಹಚ್ಚುವ ಕ್ರೀಮ್ ಹುಡುಕಬೇಕಾದರೆ ಎಲ್ಲವನ್ನೂ ಜಾಲಾಡಿ ಓದಿ, ಅದು ನನ್ನ ಮುಖಕ್ಕೆ ಹಚ್ಚುವ ಕ್ರೀಮ್ ಹೌದೊ ಅಲ್ಲವೋ ಎಂದು ಖಾತ್ರಿ ಮಾಡಿಕೊಂಡು ಹಚ್ಚಿಕೊಳ್ಳಬೇಕಿತ್ತು. ಇಲ್ಲದಿದ್ದರೆ, ಒಮ್ಮೆ ಮಹಿಳಾ ಮಂಡಲದ ಕಾರ್ಯಕ್ರಮಕ್ಕೆ ಅವಸರದಲ್ಲಿ ತಿಳಿಯದೇ ಶೇವಿಂಗ್ ಲೋಷನ್ ಹಚ್ಚಿಕೊಂಡು ಹೋಗಿದ್ದೆ. ಬದಿಗೆ ಕುಳಿತ ಸುಮಾ ವಾಸನೆ ಅರಿತು ಕಣ್ಣು ಹೊಡೆದು ಹೇಳಿದಾಗ ಬೆಪ್ಪಾಗಿ ಕುಳಿತಿದ್ದೆ. ಅಷ್ಟೇ ಅಲ್ಲ, ಗಂಡನ ಸಲುವಾಗಿ ಅಂಗಡಿಗೆ ಬ್ಲೇಡು ತರಲು ಹೋದಾಗ ಅಂಗಡಿಯವನೇ ಬ್ಲೇಡಿನ ಸಂಗಡ "ಹೇರ್ ರಿಮೂವರ್ ಹೊಸದಾಗಿ ಬಂದಿದೆ" ಎಂದು ಕೊಟ್ಟಾಗ ಪೆಚ್ಚಾಗಿ ಬಾಯಿ ಬಿಡದೇ ಅವನು ಹೇಳಿದಷ್ಟು ದುಡ್ಡು ಕೊಟ್ಟು ಓಡಿ ಬಂದಿದ್ದೆ. ಇವುಗಳಿಂದ ಬಿಡುಗಡೆ ಆಗಬೇಕಾದರೆ ಏನಾದರೂ ಉಪಾಯ ಮಾಡಬೇಕೆಂದು ಕೂತಲ್ಲಿ ನಿಂತಲ್ಲಿ, 'ಪ್ರಾಣಾಯಾಮ' ಮಾಡಹತ್ತಿದೆ. ಆರ್ಕಿಮಿಡಿಸ್ 'ಯುರೇಕಾ ! ಯುರೇಕಾ !' ಎಂದಂತೆ ಒಂದು ದಿನ ನಾನೂ 'ಯುರೇಕಾ, ಯುರೇಕಾ' ಎಂದು ಕೂಗಿದೆ.

ಊಟಕ್ಕೆ ಕುಳಿತಾಗ ಇಬ್ಬರಿಗೂ ಸ್ವಲ್ಪ ದಿನ ಗಡ್ಡ ಬಿಡುವಂತೆ ಹೇಳಿದೆ. 'ಯಾಕೆ ?' ಎಂದು ಇಬ್ಬರೂ ಹುಬ್ಬೇರಿಸಿದರು. "ಯಾರೋ ಹೇಳುತ್ತಿದ್ದರು, ಕನ್ನಡಿಗೆ ಚೌಕಟ್ಟು ಇದ್ದಂತೆ ಗಂಡಸರಿಗೆ ಗಡ್ಡ-ಮೀಸೆ. ಅದು ಇಲ್ಲದ ಗಂಡಸರು–ಗಂಡಸರೇ ಅಲ್ಲ ಅಂತ. ಅಕ್ಬರ್, ಜಹಾಂಗೀರ್, ಷಾಹಜಾನ್ ಎಲ್ಲರೂ ಎಷ್ಟು ನೀಟಾಗಿ ಗಡ್ಡ-ಮೀಸೆ ಬೆಳೆಸಿದ್ದರು.

"ರಷ್ಯದ 'ಟಾಲ್‌ಸ್ಟಾಯ್' ಗಡ್ಡ ಬಿಟ್ಟದ್ದರಿಂದಲೇ ಹೆಸರುವಾಸಿಯಾದರು. ರವೀಂದ್ರನಾಥ

ಟಾಗೂರ ಅವರೂ ಗಡ್ಡ ಬಿಟ್ಟಿದ್ದರು. ಇನ್ನು ಚಂದ್ರಶೇಖರ, ರಾಮಕೃಷ್ಣ ಹೆಗಡೆ, ಪರಮಹಂಸ, ಎಲ್ಲರೂ ಗಡ್ಡ ಬಿಟ್ಟವರೆ. ಗಡ್ಡ ಇದ್ದರೆ ಕಳೆ, ಗೌರವ ಇರುತ್ತೆ. ನೀವು ಬಿಟ್ಟು ನೋಡಿ. ಇದರಿಂದ ನೀವೂ ದೊಡ್ಡ ವ್ಯಕ್ತಿಗಳಾಗಬಹುದು" ಎಂದಿದ್ದಕ್ಕೆ "ಸರಿ, ಸರಿ ನೀನು ಹೇಳಿದಂತೆ ಈ ದಿನದಿಂದ ಗಡ್ಡ ಮಾಡುವದನ್ನು ಬಿಡುತ್ತೇವೆ" ಎಂದರು. ನನ್ನ ಪ್ಲಾನ್ ಸಕ್ಸೆಸ್ ಆಗಬಹುದೆಂದು ತಿಳಿದಿರಲಿಲ್ಲ. ಮೊದಲ ಸಲವೇ ಒಪ್ಪಿಬಿಟ್ಟರು. ದೇವರಿಗೆ ಅಭಿಷೇಕದ ಲಂಚ ತೋರಿಸಿದೆ.

ಮರುದಿನ ಮಗ ಬರುವಾಗ ಬಣ್ಣ ಬಣ್ಣದ ಪುಸ್ತಕವನ್ನು ತಂದು ಅಪ್ಪನ ಎದುರು ರಾಶಿ ಹಾಕಿದ. ಅಡಿಗೆ ಮಾಡುತ್ತಿದ್ದ ನನ್ನನ್ನೂ ಎಳೆದುಕೊಂಡು ಬಂದ, ನೋಡುವದೇನು ? ಎಲ್ಲ ನಮೂನೆಯ ಗಡ್ಡ, ಮೀಸೆ. ಹೊತ್ತ ಸಿನೇಮಾ ನಟರ, ರಾಜಕಾರಣಿಗಳ ಫೋಟೋ. ತಮ್ಮ ಮುಖಕ್ಕೆ ಯಾವ ತರಹದ ಮೀಸೆ ಗಡ್ಡ ಬೆಳೆಸಬೇಕು ಎಂದು ಇಬ್ಬರೂ ಒಂದು ತಾಸು ಚರ್ಚೆ ನಡೆಸಿದರು. ನಡುನಡುವೆ ನನ್ನನ್ನು ಕೇಳುವುದನ್ನು ಮರೆಯುತ್ತಿರಲಿಲ್ಲ. ಅಂತೂ ಗಡ್ಡ ಬಿಡಲು ಪ್ರಾರಂಭಿಸಿದರು. ಒಂದು ವಾರ ಎನ್ನುವುದರಲ್ಲಿ ಇಬ್ಬರಿಗೂ ಕುರುಚಲು. ಗಡ್ಡ ಬೇರು ಬಿಟ್ಟಿತ್ತು. ಇವರ ಸಹೋದ್ಯೋಗಿಗಳಲ್ಲಿ ಕೆಲವರು ಇವರಿಗೆ ಆರೋಗ್ಯ ಸರಿ ಇಲ್ಲವೆಂದು ಸಲಹೆ ಮಾಡಿದರೆ, ಕೆಲವರು ಹಾಸ್ಯಕ್ಕೋ, ದ್ವೇಷಕ್ಕೋ "ಏನ್ರೀ ! ಹೆಗಡೆ, ನೀವು ಗಡ್ಡ ಬಿಟ್ಟರೆ ಥೇಟ್– ಶಂಕರ್ ನಾಗ್ . ತರಹ ಕಾಣ್ತೀರಿ" ಎಂದೊ ಅಥವಾ "ಒಳ್ಳೆ ವಿಜ್ಞಾನಿ ತರಹ ಕಾಣ್ತೀರಿ ನೋಡ್ರಿ" ಎಂದಾಗ ಇವರು ಬಲೂನ್ ತರಹ ಉಬ್ಬಿ ಅವರಿಗೆಲ್ಲಾ ಕ್ಯಾಂಟಿನ್‌ನಲ್ಲಿ ಎಸ್. ಕೆ. ಟಿ. ಕೊಡಿಸಿ ತೃಪ್ತಿಪಡಹತ್ತಿದರು. ಮಗನಂತೂ ತನ್ನಲ್ಲಿ ಸಿನೆಮಾ ನಟರನ್ನು ರೂಢಿಸಿಕೊಂಡು ಮಾತು ನಟನೆಯಿಂದ, ಹೇರ್‌ಸ್ಟೈಲ್ ಗಡ್ಡದ ಸ್ಟೈಲ್‌ಗಳಿಂದ ಜಿಗಿದಾಡಹತ್ತಿದ. ಇವರಿಬ್ಬರನ್ನೂ ನೋಡಿ ನಾನು ಮನಸ್ಸಿನಲ್ಲೇ ನಗುತ್ತಿದ್ದೆ. ಅಂತೂ ನನ್ನ ಪ್ಲಾನ್ ಸಕ್ಸಸ್ ಆಗಿದ್ದಕ್ಕೆ ಸಂತೋಷದಿಂದ ನಾನೂ ಕುಣಿಯಹತ್ತಿದೆ.

ನನ್ನ ಡ್ರೆಸ್ಸಿಂಗ್ ಟೇಬಲ್ ಮೇಲೆ ನಾನು ಉಪಯೋಗಿಸುವ ಸೌಂದರ್ಯವರ್ಧಕಗಳನ್ನು ಮಾತ್ರ ಕಾಣಹತ್ತಿದೆ. ಶೇವಿಂಗ್ ಸೆಟ್ ಕಪಾಟಿನ ಒಳ ಸೇರಿತು. ಕ್ರೀಮ್, ಲೋಷನ್, ಪಾಶನ್‌ಗಳೆಲ್ಲಾ ಕಸದ ಬುಟ್ಟಿಯಿಂದ ಮುನಿಸಿಪಾಲಟಿಯ ತಿಪ್ಪೆ ಸೇರಿತು. ಬ್ಲೇಡಿನ, ಕ್ರೀಮ್, ಲೋಷನ್, ಗಾಯವಾದರೆ ಡೆಟ್ಟಾಲ್ ಎಂದು ಯಾವುದೇ ಖರ್ಚಿಲ್ಲ. ಮನೆ ಖರ್ಚಿನಲ್ಲಿ ಇದೂ ಒಂದು ಕಮ್ಮಿಯಾಯಿತು. ಶೇವಿಂಗ್ ಸೆಟ್ಸ್ ತೊಳೆಯುವ ಕೆಲಸವಿಲ್ಲಾ. ಕೆಲಸದಲ್ಲೂ ಸೇವಿಂಗ್. ಹಾಗೇ ನೋಡಿದರೆ ಸೇವಿಂಗ್ ಆಗಿದ್ದೇ ಹೆಚ್ಚು.. ಭಲೆ ಹೆಣ್ಣೆ ! ಎಂದು ಯಾರೂ ಹೇಳದಿದ್ದರೂ ನಾನೇ ಬೆನ್ನು ಚಪ್ಪರಿಸಿಕೊಂಡೆ. "ಮಹಿಳಾ ಮಂಡಲ"ದ ಮೀಟಿಂಗ್‌ಗೆ ಫಾರಿನ್ ಕ್ರೀಮ್, ಪೌಡರ್, ಸೆಂಟ್ ಬಳಿದುಕೊಂಡು ಬೇಕೆಂತಲೇ ಸುಮಾನ ಪಕ್ಕದಲ್ಲೇ ಹೋಗಿ ಕುಳಿತೆ. ನನ್ನ ನೋಡಿ ಸುಮಾ ಉದ್ದವಾಗಿ ಮೂಗೆಳೆದು ನಕ್ಕಳು. ಈ ದಿನ 'ಶೇವಿಂಗ್ ಲೋಷನ್' ಅಲ್ಲ. 'ಫಾರಿನ್ ಕ್ರೀಮ್' ಎಂದು ನಾನೇ ಕಣ್ಣು ಹೊಡೆದೆ. ಅಷ್ಟರಲ್ಲಿ "ಆಕಾಶವಾಣಿ ಧಾರವಾಡ" ಎಂದು ನಾಮಕರಣ ಮಾಡಿದ "ಸುನಂದಾ ಬಾಯಿ" ಅವ್ರು ಬಂದರು. ಸೀದಾ ಬಂದವರೇ ನನ್ನ ಪಕ್ಕದಲ್ಲೇ ಜಾಗ ಮಾಡಿ ಕುಳಿತುಕೊಂಡು ತಮ್ಮ ಗಡಸು ಧ್ವನಿಯಿಂದ ನನಗೊಬ್ಬಳಿಗೇ ಕೇಳುವಂತೆ ಹೇಳುವರೆಂದು ತಿಳಿಯುತ್ತಾ ಕಿವಿಯ ಹತ್ತಿರ ಊದ ಹತ್ತಿದರು.

"ಏನ್ರೀ ಗಂಗಾ ! ನಿಮ್ಮ ಯಜಮಾನರನ್ನು ನಿನ್ನೆ, ಬಸ್ ಸ್ಟಾಪ್‌ದಾಗ ನೋಡ್ದೆ. ಅಲ್ರೀ, ಅವರಿಗ ಏನಾತ್ರಿ ? ಆರಾಮ ಇಲ್ಲೇನ್ರೀ-ಪಾಪಾ ! ಎಷ್ಟು ಚಲೋ ಇದ್ದರು. ನನಗ ಗುರ್ತೇ ಸಿಗಲಿಲ್ಲ. ಯಾವದಾದರೂ ಚಲೋ ಡಾಕ್ಟರರಿಗೆ ತೋರಿಸಬೇಕಿತ್ತರಿ" ಎಂದರು. ಮಂಡಳದ ಸದಸ್ಯೆಯರ ಕಿವಿಯೆಲ್ಲಾ ಸುನಂದಾಬಾಯಿ ಅವರ ಕಡೆಗಿದ್ದರಿಂದ ಎಲ್ಲರೂ ನನ್ನ ನೋಡಿ 'ಪಾಪಾ ! ಪಾಪಾ !' ಎಂದು ಲೊಚಗುಟ್ಟ ಹತ್ತಿದರು. 'ಮಗನಿಗೆ ಯಾವ ಹುಡುಗಿ, "ಕೈಕೊಟ್ಟಳೆನೊ ! ಅವನೂ ಒಂದು ಥರಾ ಆಗ್ಯಾನ್ರಿ" ಎಂದು "ಒಂದೇ ಮಗಾ ಅಂತ ಮುದ್ದು ಮಾಡ್ಯಾರ್ರಿ. ಈಗ ಅನುಭವಿಸಬೇಕರಿsss" ಎಂದೆಲ್ಲಾ ಮಾತಾಡಲು ಹತ್ತಿದೊಡನೆ ಅಲ್ಲಿಂದ ಮನೆಗೆ ಕಾಲುಕಿತ್ತೆ.

ಮಗನಂತೂ ಮನೆಯಲ್ಲಿ ಇಂಗ್ಲೀಷ್ ರೆಕಾರ್ಡ್ ಹಾಕಿಕೊಂಡು ಕುಣಿಯುತ್ತಿದ್ದ. ನನ್ನ ನೋಡಿದವನೇ ಓಡಿ ಬಂದು "ಅಮ್ಮ ಈದಿನ ಕಾಲೇಜಿನಲ್ಲಿ ಎಲ್ಲರೂ ನನ್ನನ್ನು "ಜಾಂಗೊ !' ತರಹ ಕಾಣ್ತೆಯಲ್ಲೋ" ಎಂದರು. ನನ್ನನ್ನು 'ಜಾಂಗೋ !' ಎಂದೇ ಎಲ್ಲರೂ ಕರೆಯುತ್ತಿದ್ದಾರೆ. ನೀನು 'ಗಡ್ಡ ಬಿಡು' ಎಂದಿದ್ದು ಎಷ್ಟು ಒಳ್ಳೇದಾಯಿತು ನೋಡು" ಎಂದಾಗ ಯೋಚಿಸುವ ಕೆಲಸ ನನ್ನದಾಯಿತು. ಒಬ್ಬರು 'ಜಾಂಗೊ' ಆದರೆ ಇನ್ನೊಬ್ಬರು 'ವಿಜ್ಞಾನಿ'ಯಾಗಹತ್ತಿದರು.

ಮರುದಿನ ಎಂದಿನಂತೆ ಅಪ್ಪ ಯೂನಿವರ್ಸಿಟಿಗೆ, ಮಗ ಕಾಲೇಜಿಗೆ ತೆರಳಿದರು. ನಾನು ಹಾಗೇ ವರಾಂಡದಲ್ಲಿ ಪೇಪರ್ ಓದುತ್ತಾ ಕುಳಿತಿದ್ದೆ. ರಸ್ತೆಯಲ್ಲಿ ಜನರ ಓಡುವಿಕೆ, ಗದ್ದಲ ಶುರುವಾಗಿದ್ದನ್ನು ಕೇಳಿ ಹೊರಬಂದೆ. ಎದುರು ಮನೆ ಪಾಟೀಲ ಓಡುತ್ತಾ ಬರುತ್ತಿದ್ದ. "ಏನೊ ? ಏನಾಗೇದೊ ?" ಅಂದೆ. "ಅಂಟೀ ಸ್ಟ್ರೈಕ್ ಶುರು ಆಗೇದ. ರಾಮಜನ್ಮ ಭೂಮಿ ಸಂಬಂಧ. ಹಿಂದು—ಮುಸ್ಲಿಂ ಗಲಭೆ ಅಂತ. ಗಡ್ಡ ಬಿಟ್ಟವರನ್ನೆಲ್ಲಾ ಹಿಂದು ಮಂದಿ ಹೊಡಲಿಕ್ಕ ಹತ್ಯಾರ್ರಿsss" ಅಂದ. "ಹೌದೇನೋ !" ಅಂದೆ. ಆದರೆ ನನಗೆ ಹೆದರಿಕೆ ಶುರುವಾಯಿತು. ದೇವರೆ ಅಪ್ಪ, ಮಗ. ಇಬ್ಬರೂ ಗಡ್ಡ ಬಿಟ್ಟರಲ್ಲ ಅಂತ. ಮಗ ಕುಂಟುತ್ತಾ ಕುಂಟುತ್ತಾ ಓಡಿಬಂದ. "ಏನ್ ಅಮ್ಮಾ ! ನಾನು ಗಡ್ಡ ಬಿಟ್ಟಿವಕ್ಕೆ ನಾ ಮುಸ್ಲಿಂ ಅಂತ ತಿಳಿದು ನನಗ ಗೂಂಡಾ ಮಂದಿ ಹೊಡೆದು ಹಾಕಿದರು. ಸತೀಶ್ ಹೇಳದೇ ಇದ್ದಿದ್ದರೆ ನಾನು ಜೀವ ಸಹಿತ ಮನೀಗ ಬರ್ತಿದ್ದಿಲ್ಲಾ" ಎಂದಾಗ ನನಗೂ ದುಃಖ ಒತ್ತರಿಸಿ ಬಂತು. ಅವನ ಗಾಯಕ್ಕೆ ಬ್ಯಾಂಡೇಜ್ ಮಾಡಿ ನೋವಿನ ಜಾಗಕ್ಕೆ ಆಯೋಡೆಕ್ಸ್ ಹಚ್ಚಿ, ಗುಳಿಗೆ ಕೊಟ್ಟು ಮಲಗಿಸಿದೆ. ಸಂಜೆ ಆರು ಘಂಟೆ ಆಗುತ್ತಾ ಬಂದರೂ ಇವರ ಸುಳಿವಿಲ್ಲಾ. ಮಗನನ್ನು ಕಳಿಸುವಂತಿಲ್ಲ. ಏನು ಮಾಡಲಿ ? ಎಂದು ಚಡಪಡಿಸತೊಡಗಿದೆ. ಸ್ವಲ್ಪ ಹೊತ್ತಿನಲ್ಲಿ ಪ್ರೊಫೆಸರ್ ಸಾಹೇಬರ ಆಗಮನವಾಯಿತು. ಅವರೂ ಕುಂಟುತ್ತಾ ಬರುತ್ತಿದ್ದರು. "ವಿನ್ರೀ ಏನಾತು ? ನಿಮ್ಮ ಸ್ಕೂಟರ್ ಎಲ್ಲಿ" ಎಂದೆ. "ಅಲ್ಲಿ ಸ್ಕೂಟರನ್ನು ಗೆಳೆಯಾನ ಮನಿಲಿ ಇಟ್ಟು ಬಂದೇನಿ. ಇಲ್ಲದಿದ್ದರ ಅವರ ಸುಟ್ಟ ತೆಗಿತಿದ್ದರು" ಅಂದರು. "ನನ್ನ ಜೀವ ಉಳಸಗೊಂಡ ಬರಬೇಕಾದರೆ ಸಾಕಬೇಕಾತು" ಅಂದರು. ಪೋಲೀಸರಿಂದ ವಿಟು ಸಾಕಷ್ಟು ತಿಂದಿದ್ದರು. "ಅಲ್ರೀ ನೀವು ಹೇಳಬೇಕಿತ್ತರಿ ನಾನು ಪ್ರೊಫೆಸರ್ ಇದ್ದೇನೆ. ನನ್ನ ಬಿಟ್ಟಿ ಬಿಡಿರಿ" ಅಂತ. "ಅಯ್ಯೋ ! ಹೇಳಿದೆ· ಆದರೆ ಆ ನನ್ಮಕ್ಕಳು ಎಲ್ಲಿ ಕೇಳ್ತಾರೆ ? ಈಗ-ಪ್ರೊಫೆಸರ ಅಂತಿ. ಇನ್ನೂ ಸ್ವಲ್ಪಹೊತ್ತು ಬಿಟ್ಟರೆ ಪ್ರಿನ್ಸಿಪಾಲ್ ಅಂತಿ. ನಿನ್ನ ನೋಡಿದರೆ ನಕ್ಸಲೈಟ್-ಕಳ್ಳ ಕೊರಮನ ಹಾಂಗ ಕಾಣ್ತೆಯಲ್ಲೋ' ಅಂತ ಜಪ್ಪಿದರು. ಇದೆಲ್ಲಾ ಈ ಗಡ್ಡದಿಂದ್ಲೇ ಇಷ್ಟು ಆಗಿದ್ದು. ಚಂದ್ರ-ಶೇಖರ, ರಾಮಕೃಷ್ಣ ಹೆಗಡೆ, ಜಾಂಗೊ ಎನ್ನುವುದನ್ನು ಬಿಟ್ಟು `ಕಳ್ಳ' 'ಕೊರಮ' ಅನಿಸಿಕೊಳ್ಳಬೇಕಾತು" ಎಂದು ಮುಲುಗಿದರು.

ಅಯ್ಯೋ ! "ಗಡ್ಡ ಗಂಡಾಂತರವೇ" ಎನ್ನುತ್ತಾ ಇಬ್ಬರಿಗೂ ಚಹಾ ಮಾಡಿಕೊಟ್ಟು, ಗಡ್ಡ ತೆಗೆಯುವಂತೆ ಎಲ್ಲಾ ಸಾಮಾನನ್ನು ಅಣಿಗೊಳಿಸಿ ಡ್ರೆಸ್ಸಿಂಗ್ ಟೇಬಲ್ ಮುಂದೆ ಕೂರಿಸಿದೆ. ಇಬ್ಬರೂ ನರಳುತ್ತಾ ಗಡ್ಡ ತೆಗೆದು ಮುಗಿಸಿದಾಗ ಕನ್ನಡಿಯಲ್ಲಿ ಕಂಡ ಗಡ್ಡದ ಸಾಮಾನು ನನ್ನನ್ನು ಅಣಕಿಸುತ್ತಿತ್ತು. 'ಎಲೆ ಹೆಣ್ಣೇ ನಿನಗೆ ಈ ಕೆಲಸ ತಪ್ಪಿದ್ದಲ್ಲ' ಎಂದು. ●

### ಬೀದಿಗೆ ಬಂದ ಬಿರುದು ಬಾವಲಿಗಳು

ಕಮ್ಯೂನಿಸ್ಟ್ ನಾಯಕರ ಪ್ರತಿಮೆಗಳನ್ನು ಒಡೆದಿದ್ದು, ಕಿತ್ತೆಸೆದಿದ್ದು, ಮಾರಾಟ ಮಾಡಿದ್ದು, ಕಮ್ಯೂನಿಸ್ಟ್ ಸಾಹಿತ್ಯವನ್ನು ತೂಕಕ್ಕೆ ಹಾಕಿದ್ದು, ಭೂತಕಾಲದ ( ಎರಡು ವರ್ಷಗಳ ಹಿಂದೆ ) ಸೋವಿಯತ್ ಒಕ್ಕೂಟದಲ್ಲಿ ಕಮ್ಯೂನಿಸಂ ಮರಣಶಯ್ಯೆಯಲ್ಲಿದ್ದಾಗ ನಡೆದ ವಿದ್ಯಮಾನ. ವ್ಯವಸ್ಥೆಯ ವಿರುದ್ಧ ಸಿಡಿದೆದ್ದ ಅಲ್ಲಿನ ಜನತೆ ಆಕ್ರೋಶ ವ್ಯಕ್ತಪಡಿಸಿದ ಬಗೆ ಇದು. ಇಂದು ಚಿತ್ರ ಬದಲಾಗಿದೆ. ಒಕ್ಕೂಟ ಒಡೆದು ತಿಕ್ಕಾಟ ಆರಂಭವಾಗಿ ಆರ್ಥಿಕ ಮುಗ್ಗಟ್ಟಿನಲ್ಲಿ ರಷ್ಯ ತತ್ತರಿಸುತ್ತಿದೆ. ಇಂತಹ ಸನ್ನಿವೇಶದಲ್ಲಿ ರಷ್ಯದ ಸಶಸ್ತ್ರ ಪಡೆಯ ಅಧಿಕಾರಿಗಳು, ಬಿರುದು-ಬಾವಲಿಗಳು ಪದಕಗಳನ್ನೊಳಗೊಂಡ ತಮ್ಮ ಸಮವಸ್ತ್ರಗಳನ್ನು ತಲಾ ಒಂದಕ್ಕೆ 200 ಡಾಲರಿಗೆ ಮಾಸ್ಕೋದ ಬೀದಿಗಳಲ್ಲಿ ಮಾರಾಟ ಮಾಡುತ್ತಿದ್ದಾರಂತೆ. ಬೈಲೋ ರಷ್ಯದ ಸೈನ್ಯಕ್ಕೆ ಸೇರಿದ ಟ್ರಕ್‌ಗಳ ತಲಾ ಬೆಲೆ 50 ಡಾಲರ್. ಸ್ವಯಂ ಸೈನಿಕರೇ ಇದನ್ನು ಮಾರುತ್ತಿದ್ದಾರೆ. ಪಿಸ್ತೂಲುಗಳು, ಕದ್ದಾಲಿಸುವ ಉಪಕರಣಗಳನ್ನು ಅಳವಡಿಸಿದ ಟೆಲಿಫೋನ್ ಸೆಟ್‌ಗಳ ತಲಾ ಬೆಲೆ 200 ಡಾಲರ್. ಸೈನಿಕರ ಟೊಪ್ಪಿಗೆಯ ಬೆಲೆ 25 ಡಾಲರ್. ಜಾರ್ಜಿಯದಲ್ಲಿ ತಯಾರಾದ ಬಂದೂಕಿನ ಬೆಲೆ 100 ಡಾಲರ್. ಸೈನಿಕರ ಸಮವಸ್ತ್ರಗಳ ಸ್ಟಾರ್‌ಗಳು, ಬಕಲ್‌ಗಳು ಮತ್ತಿತರ ಸಣ್ಣಪುಟ್ಟ ವಸ್ತುಗಳನ್ನು ತುಂಬಿದ ಪ್ಲಾಸ್ಟಿಕ್ ತಟ್ಟೆಯೊಂದರ ಬೆಲೆ 5 ಡಾಲರ್. ರಷ್ಯದಲ್ಲೆಲ್ಲ ಇದರ ವ್ಯಾಪಾರ ತೇಜಿಯಲ್ಲಿದೆ. ಈ ವ್ಯಾಪಾರ ಉದರ ನಿಮಿತ್ತ. ಹೊಟ್ಟೆಗೆ ಹಿಟ್ಟಿಲ್ಲದಿರುವಾಗ ಜುಟ್ಟಿಗೆ ಮಲ್ಲಿಗೆ ಹೂವಿಟ್ಟು ಪ್ರಯೋಜನವೇನು ? ಅಂದ ಹಾಗೆ. ಮಾಜಿ ಸೋವಿಯತ್ ಒಕ್ಕೂಟದ ಮಾಜಿ ಅಧ್ಯಕ್ಷ ಗೊರ್ಬಚೆವ್ ಕೆಲ ವಿದೇಶ ಪತ್ರಿಕೆಗಳಿಗೆ ಅಂಕಣಗಳನ್ನು ಬರೆಯುತ್ತಿದ್ದಾರೆ. ಕಾರಣ ಅವರಿಗೆ ಪೆನ್ಷನ್ ಸಾಲುತ್ತಿಲ್ಲವಂತೆ.

## ಮುಖಪುಟ:

## ಸಂಗೀತ ನೃತ್ಯ ವಿಶಾರದೆ

# ಎಂ. ಎಸ್. ಶೀಲಾ



ಶೀಲಾ ದಂಪತಿಗಳು ಮಕ್ಕಳೊಡನೆ.



ಎರಡು ದೋಣಿಗಳ ಮೇಲೆ ಕಾಲಿಟ್ಟು ಯಶಸ್ವಿಯಾಗಿ ತೀರ ಸೇರುವುದು ಸುಲಭದ ಮಾತೇ ? ಎರಡು ಕಲಾ ಪ್ರಕಾರಗಳಲ್ಲಿ ವಿದ್ವತ್ತನ್ನು ಗಳಿಸುವುದೂ ಹಾಗೆಯೇ ಕಷ್ಟಸಾಧ್ಯವಾದುದು. ಪರಸ್ಪರ ಸಂಬಂಧಿತ ಕಲೆಗಳಾದ ನೃತ್ಯ ಹಾಗೂ ಸಂಗೀತ ಪ್ರಕಾರಗಳಲ್ಲಿ ಸಮಾನ ಯಶಸ್ಸನ್ನು ಪಡೆದ ಪ್ರತಿಭೆ ಶ್ರೀಮತಿ ಎಂ. ಎಸ್. ಶೀಲಾ.

ಸಂಗೀತಗಾರ್ತಿ ಶೀಲಾ ಭರತನಾಟ್ಯ ಕಲಾವಿದೆಯೂ ಹೌದು. ಪೇಂಟಿಂಗ್‌ನಲ್ಲಿ ಆಸಕ್ತಿ ಇರಿಸಿಕೊಂಡವರಾಗಿದ್ದು ಓದುವ ಹವ್ಯಾಸವನ್ನು ಮೈಗೂಡಿಸಿಕೊಂಡಿದ್ದಾರೆ. ತಾಯಿ ಶ್ರೀಮತಿ ಎಂ. ಎಸ್. ರತ್ನಾರ ಮಾರ್ಗದರ್ಶನದಲ್ಲಿ ಶೀಲಾ ಸಂಗೀತಾಭ್ಯಾಸಕ್ಕೆ ತೊಡಗಿದರು. ಆಗಿನ್ನೂ ಅವರಿಗೆ 7 ವರ್ಷ. ಶ್ರೀ ಆರ್. ಕೆ. ಶ್ರೀಕಂಠನ್ ಅವರ ಬಳಿ ಅಭ್ಯಾಸ ಮುಂದುವರೆಯಿತು. [illegible] ಕಣ್ಣಿನ ಬಾಲೆಯನ್ನು ತಂದೆ ತಾಯಿಯರು



ತಾಯಿ ಗಾಯಕಿ ಎಂ. ಎಸ್. ರತ್ನ ಮತ್ತು ಗುರು ನರ್ಮದಾರೊಂದಿಗೆ ಶೀಲಾ



ಚಿತ್ರಗಳು : ಡಿ. ಸಿ. ನಾಗೇಶ್

(ತಂದೆ ಶ್ರೀ ಶ್ರೀನಿವಾಸಮೂರ್ತಿ) ಭರತನಾಟ್ಯ ಕಲಿಯಲು ಕಳಿಸಿದರು. ಜೊತೆಗೆ ಶೀಲಾ ಆಕಾಶವಾಣಿ ಮಕ್ಕಳ ಕಾರ್ಯಕ್ರಮಗಳ ಮೂಲಕ ನಾಟಕ ವಲಯಕ್ಕೂ ಅಡಿಯಿರಿಸಿದರು. ಶಾಸ್ತ್ರೀಯ ಸಂಗೀತದಲ್ಲಿ ಪ್ರೌಢತೆ ಲಭಿಸುತ್ತಿದ್ದಂತೆಯೇ, ಆಕಾಶವಾಣಿಯ ಸಂಗೀತ ರೂಪಕಗಳಲ್ಲಿ ಪಾಲ್ಗೊಳ್ಳಲು ಶೀಲಾಗೆ ಕರೆ ಹೋಗುತ್ತಿತ್ತು. ಅಂತರ ಶಾಲಾ-ಕಾಲೇಜು ಸ್ಪರ್ಧೆಗಳಲ್ಲೂ ಜಯಗಳಿಸಿ ವಿದ್ಯಾಸಂಸ್ಥೆಗೆ ಕೀರ್ತಿ ತಂದ ಹೆಗ್ಗಳಿಕೆ ಅವರದು.

ನೃತ್ಯಕ್ಕೆ ಕರ್ನಾಟಕ ರಾಜ್ಯ ಸಂಗೀತ ನಾಟಕ ಅಕಾಡೆಮಿಯ ಸ್ಕಾಲರ್‌ಶಿಪ್ ಹಾಗೂ ಸಂಗೀತಕ್ಕೆ ಕೇಂದ್ರ ಸರ್ಕಾರದ ಸ್ಕಾಲರ್‌ಶಿಪ್ ಅನ್ನು ಪಡೆದಿರುವ ಶೀಲಾ ಸಂಗೀತದಲ್ಲಿ ಸ್ನಾತಕೋತ್ತರ ಪದವಿ ಪಡೆದಿದ್ದಾರೆ. ಸಂಗೀತದಲ್ಲೇ ಸಂಶೋಧನೆ ಮಾಡುವ ಆಶಯ ಹೊಂದಿದ್ದಾರೆ. ಅವರೊಂದಿಗೆ ಸಂದರ್ಶನದ ಮುಖ್ಯಾಂಶಗಳು:

● "ಶಾಸ್ತ್ರೀಯ ಸಂಗೀತದ ಬೇಡಿಕೆ ಕುಗ್ಗುತ್ತಿರುವಂತೆ ಕಾಣುವ ಈ ಕಾಲದಲ್ಲಿ ನಮ್ಮ ಪರಂಪರೆಯನ್ನು ಉಳಿಸಿಕೊಳ್ಳುವ ಅಗತ್ಯ ಇದೆಯಲ್ಲವೇ?"

— ಖಂಡಿತಾ. ಆದರೆ ಒಬ್ಬಿಬ್ಬರಿಂದ ಈ ಕಾರ್ಯ ಸಾಧ್ಯವಾಗದು. ಸಮೂಹ ಮಾಧ್ಯಮಗಳು ಅದರಲ್ಲೂ ದೂರದರ್ಶನ ಹೆಚ್ಚು ಪ್ರೋತ್ಸಾಹ ನೀಡಬೇಕು. ಕಾರ್ಯಕ್ರಮ ಏರ್ಪಡಿಸುವ ಸಂಘ ಸಂಸ್ಥೆಗಳೂ ಶಾಸ್ತ್ರೀಯ ಸಂಗೀತ ಕಚೇರಿಗಳನ್ನು ನಡೆಸುವತ್ತ ಗಮನ ಹರಿಸಬೇಕು.

● ನೃತ್ಯಗಾರ್ತಿ ಎನ್ನುವುದಕ್ಕಿಂತ ಸಂಗೀತಗಾರ್ತಿಯೆಂದೇ ಹೆಚ್ಚು ಪರಿಚಿತರಾಗಿದ್ದೀರಲ್ಲವೇ?

— ನಿಜ. ಜನತೆ ನನ್ನನ್ನು ಗಾಯಕಿಯೆಂದೇ ಗುರುತಿಸ ಬಯಸುತ್ತಾರೆ. ಅಲ್ಲದೆ ಕಾರ್ಯಕ್ರಮಗಳನ್ನು ಏರ್ಪಡಿಸುವ ಸಂಘ ಸಂಸ್ಥೆಗಳೂ ಜನರ ಬೇಡಿಕೆಯ ದೃಷ್ಟಿಯಿಂದ ನನ್ನನ್ನು ಹೆಚ್ಚಾಗಿ ಗಾಯನ ಕಚೇರಿಗಳಿಗೇ ಆಮಂತ್ರಿಸುತ್ತಾರೆ. ಆದರೂ ಅಮೆರಿಕಾ, ಇಂಗ್ಲೆಂಡ್‌ಗಳಲ್ಲಿ ನನ್ನ ನೃತ್ಯ ಕಾರ್ಯಕ್ರಮಗಳು ಬಹಳ ಜನಪ್ರಿಯವಾಗಿದ್ದವು.

● ಇಂದಿನ ಶಾಸ್ತ್ರೀಯ ಸಂಗೀತದ ಗುಣಮಟ್ಟದ ಬಗ್ಗೆ ನಿಮ್ಮ ಅಭಿಪ್ರಾಯ ಏನು?



— ಶಾಸ್ತ್ರೀಯತೆ ಖಂಡಿತಾ ಉಳಿದುಕೊಂಡಿದೆ. ಆದರೆ ಕೇಳುಗರಿಗೇ ಅದನ್ನು ಕೇಳುವಷ್ಟು ಸಮಯ, ವ್ಯವಧಾನ, ಆಸಕ್ತಿ ಕಡಿಮೆಯಾಗ್ತಾ ಇದೆ. ಇದೇ ಕಾರಣದಿಂದ ಕಚೇರಿಗಳೂ ಕಡಿಮೆಯಾಗ್ತಾ ಇವೆ. ಹಾಗಾಗಿ ನಮ್ಮ ಸಂಗೀತಗಾರರಿಗೂ ಅವಕಾಶಗಳು ಕಡಿಮೆಯಾಗ್ತಾ ಇವೆ.

● ಅವಕಾಶಗಳು ಕಡಿಮೆಯಾಗ್ತಾ ಇವೆ ಅಂದಿರಿ, ಅವಕ್ಕೆ ಕಾರ್ಯಕ್ರಮ ಏರ್ಪಡಿಸುವವರೇ ಕಾರಣರಾಗ್ತಾರಾ?

— ಅವರೊಬ್ಬರೇ ಅಂತ ಹೇಳಲ್ಲ. ಆದರೆ ಅವರೂ ಬಹಳ ಮಟ್ಟಿಗೆ ಕಾರಣರೇ. ಈಗ ನೋಡಿ. ಕರ್ನಾಟಕದಲ್ಲಿ ನಡೆಯುವ ಕಾರ್ಯಕ್ರಮಗಳಿಗೆ ಕರ್ನಾಟಕದ ಸಂಗೀತಗಾರರಿಗೇ ಅವಕಾಶ ನೀಡದೆ, ಹೊರ ರಾಜ್ಯಗಳಿಂದ ಕಲಾವಿದರನ್ನು ಕರೆಸಿಕೊಳ್ತಾರೆ. ಹೀಗಾದರೆ ನಮಗೆ ಅವಕಾಶ ಎಲ್ಲಿ?

● ಆ ರಾಜ್ಯಗಳಲ್ಲೂ ಉತ್ತಮ ಪ್ರತಿಭೆಗಳಿರಬಹುದಲ್ವಾ?

— ಇರಬಹುದು, ಇದ್ದಾರೆ. ಅವರನ್ನು ಆಹ್ವಾನಿಸೋದು ತಪ್ಪು ಅಂತ ಹೇಳ್ತಾ ಇಲ್ಲ. ನಮಗೂ ಸಾಕಷ್ಟು ಅವಕಾಶ ಕೊಟ್ಟು, ಅವರಿಗೂ ಕೊಡಲಿ, ನಾವು ಅವರನ್ನು ಪುರಸ್ಕರಿಸೋ ಹಾಗೆ, ಆ ರಾಜ್ಯಗಳಲ್ಲೂ ನಮಗೆ ಪುರಸ್ಕಾರ ಸಿಗಬೇಕಲ್ವ? ಇಷ್ಟೇ ಅಲ್ಲ. ನಮಗೆ ಅವಕಾಶಗಳು ಕಡಿಮೆ ಆಗೋದಕ್ಕೆ ಶ್ರೋತೃಗಳೂ ಕಾರಣರೇ. ಸುಗಮ ಸಂಗೀತ, ಸಿನಿಮಾ ಸಂಗೀತಕ್ಕೆ ಬೇಡಿಕೆ ಹೆಚ್ಚಾಗಿರೋದೂ ಇದಕ್ಕೆ ಮತ್ತೊಂದು ಕಾರಣ. ಈಗಂತೂ ಯಾವುದೋ ಒಂದು ನಿರ್ದಿಷ್ಟ ಸ್ಥಳಕ್ಕೆ ಹೋಗಿ ಕಚೇರಿ ಕೇಳಿ ಬರುವುದಂತೂ ಬಹಳ ಕಷ್ಟದ ಕೆಲಸ. ಅದಕ್ಕಿಂತ ಹೆಚ್ಚಾಗಿ ಮನೆಯಲ್ಲೇ ಕುಳಿತು ಕ್ಯಾಸೆಟ್ ಹಾಕಿಕೊಂಡು ಕೇಳಬಹುದಲ್ವಾ?

● ನರ್ತಕರಿಗೆ ನಿಮ್ಮ ಸಂದೇಶ ಏನು?

— ನೃತ್ಯ ಒಂದು ಅದ್ಭುತ ಕಲೆ. ಅದನ್ನು ಹೆಚ್ಚು ಮಂದಿ ಕಲೀತಾರಾದರೂ ಎಲ್ಲರೂ ಪರಿಪೂರ್ಣತೆ ಪಡೀತಾರೆ ಅನ್ನೋದಕ್ಕಾಗಲ್ಲ. ಸಂಪೂರ್ಣವಾಗಿ ಕಲಿಯೋ ಮೊದಲೇ ಕಮರ್ಷಿಯಲೈಸ್ ಮಾಡ್ಕೋತಾರೆ. ಪ್ರಶಸ್ತಿ, ಪ್ರತಿಷ್ಠೆಗಳ ಬೆನ್ನು ಹತ್ತದೆ, ಪರಿಣತಿ ಸಾಧಿಸಬೇಕು ಅನ್ನೋದು ನನ್ನ ಆಶಯ.

* * *





ಶಾಸ್ತ್ರೀಯ ಸಂಗೀತವನ್ನು ಮೈಗೂಡಿಸಿಕೊಂಡಿರುವ ಶೀಲಾ ಸುಗಮ ಸಂಗೀತವನ್ನೂ ಅಚ್ಚುಕಟ್ಟಾಗಿ ಹಾಡುವರೆಂದು ಬೇರೆ ಹೇಳಬೇಕಿಲ್ಲ. ಒಳ್ಳೆಯ ಮಾತುಗಾರ್ತಿಯಾದ ಅವರು "ಬಹಳ ಬ್ರೈಟ್ ಗರ್ಲ್" ಎನ್ನುವುದು ಹಿರಿಯ ಕಲಾವಿದೆ ಶ್ರೀಮತಿ ಯಮುನಾಮೂರ್ತಿಯವರ ಮಾತು. ಹಲವು ವಿವಿಧ ರಂಗಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿರುವುದನ್ನು ನೋಡಿದರೆ ಈ ಮಾತು ಸತ್ಯ ಎನ್ನಬಹುದು. ಎಲ್ಲಕ್ಕಿಂತ ಹೆಚ್ಚಾಗಿ ಅವರಲ್ಲಿರುವ ಪ್ರತಿಭೆ ಹೊರಹೊಮ್ಮಲು. ವಿಕಾಸವಾಗಲು ಪತಿ ಶ್ರೀ ರಾಮಸ್ವಾಮಿ ನೀಡುತ್ತಿರುವ ಪ್ರೋತ್ಸಾಹ, ಸಹಕಾರ ಕಾರಣ. "ಅವರ ಸಹಕಾರದ ಹೊರತಾಗಿ ವಿವಾಹೋತ್ತರ ಜೀವನದಲ್ಲಿ ನಾನು ಏನನ್ನು ಸಾಧಿಸುವುದೂ ಕಷ್ಟವಾಗುತ್ತಿತ್ತು" ಎನ್ನುವ ಕೃತಜ್ಞತಾಭಾವ ಶೀಲಾರಲ್ಲಿದೆ.

ಹಲವಾರು ಕ್ಯಾಸೆಟ್‌ಗಳಿಗೆ, ಡಿಸ್ಕ್‌ಗಳಿಗೆ ಹಾಡಿರುವ ಶೀಲಾ ಚಿತ್ರ ಗೀತೆಯನ್ನೂ ಹಾಡಿದ್ದುಂಟು 'ಸುಭದ್ರಾ ಕಲ್ಯಾಣ' ಎನ್ನುವ ಆ ಚಿತ್ರ ಹೆಸರು ಮಾಡಲಿಲ್ಲ. ಆಕಾಶವಾಣಿಯ 'ಎ' ಶ್ರೇಣಿಯ ಈ ಗಾಯಕಿ ದೂರದರ್ಶನದ ವೀಕ್ಷಕರಿಗೂ ಪರಿಚಿತರೇ. ಪ್ರತಿದಿನವೂ ಬೆಳಗಿನ ಜಾವ ಶೃಂಗೇರಿ ಮಠದಲ್ಲಿ ಅವರು ಹಾಡಿರುವ ಶಾರದಾ ಸುಪ್ರಭಾತ ಕೇಳಬಹುದು. ಹಲವಾರು ಗಾಯನ ಸಭಾಗಳಲ್ಲಿ, ಮೈಸೂರಿನ ದಸರಾ ಸಂಗೀತೋತ್ಸವವೂ ಸೇರಿದಂತೆ ಹಲವಾರು ಉತ್ಸವಗಳಲ್ಲಿ ಕಚೇರಿ ನೀಡಿದ್ದಾರೆ. ಮದರಾಸಿನ ಮ್ಯೂಸಿಕ್ ಅಕಾಡೆಮಿಯಿಂದಲೂ ಪುರಸ್ಕೃತರಾಗಿದ್ದಾರೆ.

ಸಂಗೀತವನ್ನು ಅನಿವಾರ್ಯ ಕಾರಣಗಳಿಂದ ಆಧರಿಸಿ ಸಾಗುತ್ತಿದ್ದರೂ, ನೃತ್ಯದ ಸಂಬಂಧಗಳಿಂದ ಹೊರಬಂದಿಲ್ಲ. ಅಬುದಾಬಿಯಲ್ಲಿ ಸಂಗೀತದೊಂದಿಗೆ ನೃತ್ಯವನ್ನೂ ಕಲಿಸಿಕೊಡುತ್ತಿದ್ದರು. ಕಾರ್ಯಕ್ರಮಗಳನ್ನು ನೀಡುತ್ತಿದ್ದರು. ಈಗಲೂ ಬೆಂಗಳೂರಿನಲ್ಲಿ ನೃತ್ಯ. ಸಂಗೀತ ಎರಡನ್ನೂ ಕಲಿಸಿಕೊಡುತ್ತಿದ್ದಾರೆ.

ಬೆಂಗಳೂರಿನ ಗಾಯನ ಸಮಾಜದ 'ಬಂಗಾರದ ಪದಕ' ವಿಜೇತೆ ಶೀಲಾರಿಗೆ ಚಿಕ್ಕಮಗಳೂರಿನ ಸಾಂಸ್ಕೃತಿಕ ಸಂಸ್ಥೆಯೊಂದು "ಸುಮಧುರ ಸಂಗೀತ ಧ್ರುವತಾರೆ" ಎನ್ನುವ ಬಿರುದನ್ನಿತ್ತು ಗೌರವಿಸಿದೆ. ●

— ಟಿ. ಸಿ. ಪೂರ್ಣಿಮಾ

# ಜನಪದರ ಸಂತಾನಾಪೇಕ್ಷೆ

— ಭಾರ್ಗವಿಶ್ರೀ

"ಮಕ್ಕಳೇ ಮನೆಗೆ ಮಾಣಿಕ್ಯ" ಎಂಬ ಮಾತು ಎಷ್ಟು ಅರ್ಥಪೂರ್ಣವಾದುದು. ಆದರೆ ಈಗಿನ ನಾಗರಿಕ ಜೀವನದಲ್ಲಿ, ಯಾಂತ್ರಿಕ ಬದುಕಿನಲ್ಲಿ, ಈ ಮಕ್ಕಳಿಗೆ ತಂದೆ-ತಾಯಿಯರ ತುಂಬು ವಾತ್ಸಲ್ಯ, ಹರಕೆ, ಆರೈಕೆ, ಎಷ್ಟರಮಟ್ಟಿಗೆ ಸಿಗುತ್ತದೆಯೋ ಆ ದೇವರೇ ಬಲ್ಲ. ಎಷ್ಟೋ ಸಂದರ್ಭದಲ್ಲಿ ಮಕ್ಕಳು ಹಾಗೂ ತಂದೆ-ತಾಯಿಗಳು ಪರಸ್ಪರ ಭೇಟಿಯಾಗುವ, ಮುಕ್ತವಾಗಿ ಮಾತನಾಡುವ, ಅವಕಾಶವೇ ಇಲ್ಲವಾಗಿ ಬಿಡುತ್ತದೆಂದರೆ ಈ ಮಾತಿನಲ್ಲಿ ಆಶ್ಚರ್ಯಕ್ಕಾಗಲಿ, ಅನುಮಾನಕ್ಕಾಗಲೀ ಆಸ್ಪದವೇ ಇಲ್ಲ. ಅದರಿಂದಾಗಿಯೇ ಇರಬೇಕು ಇಂದಿನ ಸಾಮಾಜಿಕ ಸ್ಥಿತಿ-ಏರುಪೇರಾಗಿ ಪರಸ್ಪರರಲ್ಲಿರಬೇಕಾದ ಪ್ರೀತಿ ವಾತ್ಸಲ್ಯಗಳೇ ಲೋಪವಾಗಿ ಬಿಡುತ್ತಿವೆ.

ಆದರೆ ನಮ್ಮ ಪೂರ್ವಿಕರ, ಅದರಲ್ಲೂ ಜನಪದರ ಜೀವನದಲ್ಲಿ ಕಣ್ಣು ಹಾಯಿಸಿದರೆ ಅವರದು ಎಂಥ ತುಂಬು ಜೀವನವಾಗಿತ್ತೆಂಬುದನ್ನು ನಾವು ಮನಗಾಣಬಹುದು. ಅದರಲ್ಲೂ ಮಕ್ಕಳ ಬಗೆಗೆ ಆ ಜನಪದ ತಾಯಂದಿರ ಹಂಬಲ, ಭಾವ, ಭಾವನೆಗಳನ್ನು ನೋಡಿದರೆ ಇಂದಿನ ಮಕ್ಕಳಿಗೆ ಎಂಥ ನಷ್ಟ, ಅನ್ಯಾಯ ಆಗುತ್ತಿದೆ ಎಂಬುದು ಸ್ಪಷ್ಟವಾಗುತ್ತದೆ. ಜನಪದ ಸಾಹಿತ್ಯದಲ್ಲಿ ಮಕ್ಕಳಿಗೆ ಅತಿ ಮಹತ್ವದ ಸ್ಥಾನ ಕೊಡಲಾಗಿದೆ. ಇದಕ್ಕೆ ಕಾರಣವಿಲ್ಲದೇ ಇಲ್ಲ. ಜನಪದ ಹೆಣ್ಣು ಮಕ್ಕಳ ಸಂತಾನಾಪೇಕ್ಷೆ, ತಾಯ್ತನ ಹಾಗೂ ಮಕ್ಕಳ ಆಟಪಾಟಗಳನ್ನು ಕಾಣುವ ಹಂಬಲ, ಇತ್ಯಾದಿ, ಇತ್ಯಾದಿಗಳು, ಮಕ್ಕಳ ಬದುಕಿಗೆ ಬಹಳ ಪ್ರಾಮುಖ್ಯತೆ ತಂದುಕೊಟ್ಟಿವೆ.

ಜನಪದರು ತಮ್ಮ ಮನದ ಬೇನೆ-ಬವಣೆಗಳನ್ನು, ಸಂಕಟ-ವೇದನೆಗಳನ್ನು, ಅತ್ಯಂತ ಮನೋಜ್ಞವಾಗಿ ಕಾವ್ಯರೂಪದಲ್ಲಿ, ಬಹಳ ಸರಳವಾಗಿ ಸುಂದರವಾಗಿ ವ್ಯಕ್ತಪಡಿಸಿದ್ದಾರೆ. ಮಕ್ಕಳಿಲ್ಲದ ಒಬ್ಬ ಹೆಣ್ಣು ಮಗಳು ಬದುಕಿನಲ್ಲಿ ಬಯಸುವುದು ಯಾವುದೇ ಆಸ್ತಿ-ಅಂತಸ್ತಲ್ಲ. ಒಡವೆ-ವಸ್ತುಗಳಲ್ಲ. ಅವಳಿಗೆ ಬೇಕಾಗಿರುವುದು ತನ್ನದೇ ಆದ ಒಂದು ಮಗು– ಅದಕ್ಕಾಗಿ ಅವಳು ದೈವವನ್ನು ಕುರಿತು–

"ಕಂದನ ಕೊಡು ಶಿವನೆ ಬಂಧನ ಪಡಲಾರೆ<br>
ಹಂಗಿನ ಬೋನ ಉಣಲಾರೆ–ಮರ್ತ್ಯದಾಗ<br>
ಬಂಜೆಂಬ ಶಬುದ. ಹೊರಲಾರೆ"—ಎಂದು

ಮೊರೆಯಿಡುತ್ತಾಳೆ. ಆ ಹೆಣ್ಣು ಮಗಳು ಸಂಸಾರದ ಎಂಥದೇ ಕಷ್ಟ-ಕಾರ್ಪಣ್ಯಗಳ ಭಾರವನ್ನು,



ಬಡತನದ ಹೊಡೆತವನ್ನೂ ಬೇಕಾದರೆ ಸಹಿಸಬಲ್ಲಳು. ಆದರೆ ನೆರೆ-ಹೊರೆಯವರು, ನೆಂಟರಿಷ್ಟರು, ಕುಟುಂಬದವರು ಎಲ್ಲರೂ ತನ್ನನ್ನು ಬಂಜೆ ಎಂದು ಹಂಗಿಸುವುದನ್ನು ಅವಳಿಂದ ಸಹಿಸಲಾಗದು. ಅಲ್ಲದೆ ಅವಳಿಗಾಗಿ ಅವಳ ಮನೆಯವರು ಕೂಲಿಯಾಳಿಗೆ ನೀಡಿದಂತೆ ನೀಡುವ ಹಂಗಿನ ಊಟವೂ ಅವಳಿಗೆ ಹಿಂಸಾದಾಯಕವೆನಿಸುತ್ತದೆ. ಅಂತೆಯೇ ಈ ದುಃಸ್ಥಿತಿಯಿಂದ ಪಾರುಮಾಡೆಂದು ಕರುಣಾಪೂರ್ಣವಾದ ಮೊರೆ ಇಡುತ್ತಾಳೆ. ಆದರೇನು ಕ್ಷಣ ಕ್ಷಣಕ್ಕೂ, ಹೆಜ್ಜೆ ಹೆಜ್ಜೆಗೂ ಅವಳ ದೌರ್ಬಲ್ಯ ಅವಳನ್ನು ಚುಚ್ಚಿ ಚುಚ್ಚಿ ನೋಯಿಸುತ್ತದೆ. ಹಾಗಾಗಿ ತನ್ನವರಂತೆ, ತನ್ನ ನೆರೆಹೊರೆಯವರಂತೆ ಪ್ರಕೃತಿಯೂ ಕೂಡ ತನ್ನನ್ನು ಹೀನಾಯವಾಗಿ ಕಾಣುತ್ತಿದೆ ಎನಿಸುತ್ತಿದೆ. ಅವಳ ಈ ಮಾನಸಿಕ ತೊಳಲಾಟವು—

"ಬಂಜೆಯ ಮನೆಮುಂದೆ ಅಂಜೂರ ಗಿಡ ಹುಟ್ಟಿ<br>
ಟೊಂಗೆ-ಟೊಂಗೆಗೆ ಗಿಣಿಕೂತು ಹೇಳ್ಯಾವು

ಬಂಜೆ ನಿನ ಬಾಳು ಹೆರವರಿಗೆ "—ಎಂಬ ನುಡಿಗಳಲ್ಲಿ ವ್ಯಕ್ತವಾಗಿದೆ. ಅಂಜೂರ ಗಿಡವು ಹಣ್ಣು ಬಿಟ್ಟು ಗಿಣಿಗಳಿಗೆ ಆಹಾರ ನೀಡಿ ತನ್ನ ಜೀವನ ಸಾರ್ಥಕ ಪಡಿಸಿಕೊಳ್ಳುತ್ತದೆ. ಆದರೆ ತನ್ನ ಬದುಕು ನಿರರ್ಥಕ ಹಾಗೂ ನಿಷ್ಪ್ರಯೋಜಕ ವಾಗಿದೆ ಎಂದು ಅವಳಿಗೆ ಅತೀವ ವೇದನೆ ಎನಿಸು ತ್ತದೆ. ಆ ವೇದನೆ ಎಂತಹ ಅಸಹನೀಯ ಹಂತ ತಲುಪಿದೆ ಎಂದರೆ–ತನ್ನ ಅಸಹಾಯಕತೆ, ದೈನ್ಯಾ ವಸ್ಥೆಯನ್ನು ಒಂದು ಸುಂದರ ಹೋಲಿಕೆಯ ಮೂಲಕ ಆ ನೊಂದ ಹೆಣ್ಣು ಜೀವ ನಿಟ್ಟುಸಿರಾಗಿ ಹೊರ ಹೊಮ್ಮಿಸಿದೆ—

"ಬಾಲಕರಿಲ್ಲದ ಬಾಲೆದ್ಯಾತರ ಜನ್ಮ

ಬಾಡಿಗೆ ಎತ್ತು ದುಡಿದ್ಹಂಗೆ ಬಾಳೆಲೆಯ

ಹಾಸ್ಕೊಂಡು ಬೀಸಿ ಒಗೆದ್ಹಂಗೆ "—ಎಂಬ ಅವಳ ಮಾತು ಎಷ್ಟು ಮಾರ್ಮಿಕವಾಗಿದೆ ಊಟವಾಗುವವರೆಗೂ ಬಾಳೆ ಎಲೆಯನ್ನು ಬಹಳ ಮುತುವರ್ಜಿಯಿಂದ ಕಾಪಾಡುವ ಜನ. ಊಟ ಮಾಡಿದ ನಂತರ ಅದನ್ನು ಮುದುಡಿ ಬಿಸಾಡಿ ಬಿಡುವರು. ಹಾಗೆಯೇ ಬಾಡಿಗೆಗಾಗಿ ತಂದಿರುವ ಎತ್ತನ್ನು ದುಡಿಸಿಕೊಂಡು ಬದಲಿಗಾಗಿ ಕೂಲಿ ನೀಡುತ್ತಾರೆಯೇ ಹೊರತು ಯಜಮಾನರ ಪ್ರೀತಿ-ಆರೈಕೆಗಳು ದೊರೆಯಲಾರವು. ಹಾಗೆಯೇ ತನ್ನ ಬಾಳೂ ಕೂಡ ನೀರಸ ಎಂಬುದು ಅವಳ ತೀರ್ಮಾನ. "ಬೀಸಿ ಒಗೆದ್ಹಂಗೆ" ಎಂಬ ಮಾತು ಅವಳ ಬದುಕು ಅವಳ ಮನೆಯಲ್ಲಿಯೇ ಹೇಗೆ ಮೂಲೆಗುಂಪಾಗಿದೆ ಎಂಬುದನ್ನು ಧ್ವನಿಸುತ್ತಿದೆ. ಇದಕ್ಕೆಲ್ಲಾ ಪರಿಹಾರ ಏನು? ಎಂತು ಯೋಚಿಸಿ ಯೋಚಿಸಿ, ಕಂಗಾಲಾದ ಅವಳಿಗೆ ಪುನಃ ಹೊಳೆಯು ವುದು ದೈವ ಕೃಪೆಯ ದಾರಿ ಮಾತ್ರ. ಹಾಗಾಗಿ ಆರ್ತವಾಗಿ ತನ್ನ ಹೃದಯದ ವೇದನೆಯನ್ನು ದೈವದ ಮುಂದೆ ನಿವೇದಿಸುತ್ತಾಳೆ—

"ಸಂಜೀಲಿ ಹುಟ್ಟಲಿ ಶಿವನೆ ಮುಂಜಾನೆ ಸಾಯಲಿ

ಬಂಜೆಂಬ ಸೊಲ್ಲ ಬಿಡಿಸಯ್ಯ

ಆಗಲೆ ಹುಟ್ಟಲಿ ಆಗಲೆ ಸಾಯಲಿ

ಬಂಜೆಂಬ ಸೊಲ್ಲ ಬಿಡಿಸಯ್ಯ "—ಎಂದು

ಋಷಿ, ಮುನಿಗಳು, ತತ್ವಜ್ಞಾನಿಗಳು, ದಾರ್ಶನಿಕರು ತಮ್ಮನ್ನು ಭವಬಂಧನದಿಂದ ಬಿಡಿಸಿ ಪಾರು ಮಾಡೆಂದು ಆ ದೈವದಲ್ಲಿ ಮೊರೆಯಿಟ್ಟರೆ ಜನಪದ ಹೆಣ್ಣು ಮಗಳು ತನಗೆ ಭವ-ಬಂಧನವಾದರೂ ಸರಿ, ಆದರೆ ಬಂಜೆ ಎಂಬ ಬಂಧನದಿಂದ ಬಿಡಿಸಿ ಮುಕ್ತಿಕೊಡು ಎಂದು ಹಲುಬುತ್ತಾಳೆ. ಯಾವ ತಾಯಿಯೂ ತನ್ನ ಮಗುವಿಗೆ ತಾವೇ ಅಲ್ಪಾ-ಯುಷ್ಯವನ್ನು ಕೋರುವುದಿಲ್ಲ. ಆದರೆ ಇಲ್ಲಿ ಈ ತಾಯಿಯು ಜಗತ್ತು ತನ್ನನ್ನು ಪಾಪಿಯೆಂದು ಭಾವಿಸಿ ಜರೆಯುವುದನ್ನು ಸಹಿಸದೆ ಮಗು ಉಳಿಯದಿದ್ದರೂ 'ತಾಯಿ' ಎಂಬ ಪದವಿ ಯಾದರೂ ದೊರಕುವುದಲ್ಲ ಎಂಬ ಆಸೆಯಿಂದ ಹೀಗೆ ಮಾಡುತ್ತಿದ್ದಾಳಷ್ಟೆ. ಆದ್ದರಿಂದ ಅವಳು ದೈವದಲ್ಲಿ—

"ಆಲಾನೆ ಕೊಟ್ಟ ಶಿವ ಬಾಲನೆ ಕೊಡನಿಲ್ಲ

ತಾಲಿದಾರಕ್ಕೆ ಬಿಡಿಮುತ್ತು ಕೊಟ್ಟ ಶಿವ

ಬಾಲ ಸಂತಾನವ ಕೊಡು ನನಗೆ "—ಎಂದು ಆಕ್ಷೇಪಣಾಪೂರ್ವಕವಾದ ಮತ್ತೊಂದು ಬೇಡಿಕೆ ಯನ್ನು ಸಲ್ಲಿಸುತ್ತಿದ್ದಾಳೆ. ರಾಜ-ಮಹಾರಾಜರು ತಮ್ಮ ಸಂತಾನಾಪೇಕ್ಷೆಯನ್ನು ಈಡೇರಿಸಿಕೊಳ್ಳಲು ಪುತ್ರಕಾಮೇಷ್ಟಿ ಮೊದಲಾದ ವಿಧ್ಯುಕ್ತ ಕರ್ಮ ಮಾಡುತ್ತಿದ್ದರು. ಆದರೆ ಜನಪದ ಹೆಣ್ಣು ಮಗಳು ಅಷ್ಟು ಶ್ರೀಮಂತಳಲ್ಲ. ಆದ್ದರಿಂದ ಅವಳೇದೇನಿದ್ದರೂ ಕಿರುಕಾಣಿಕೆ, ಅಲ್ಪ ಸೇವೆಯಷ್ಟೆ. ಅದೂ ಅವಳದೇ ಆದ ಮುಗ್ಧ ರೀತಿಯಲ್ಲಿ. ಆದ್ದರಿಂದ ಅವಳು ಹೇಳುತ್ತಾಳೆ—

"ಇಂಬಿ ಅಣ್ಣು ತಂದಿ ಲಿಂಗಕೊಸ್ರ ತಂದಿ

ಕಂದಾನ ಕೊಡೊ ನನ ಗುರುವೇ ಬೋರಯ್ಯ "–ಹೀಗೆ ಅವಳ ನಿವೇದನೆ ಮುಂದುವರೆಯುತ್ತದೆ. ಈ ಹೆಣ್ಣು ಮಗಳ ದುಃಖ ಎಂಥ ತೀವ್ರ ಹಂತ ವನ್ನು ತಲುಪಿದೆಯೆಂದರೆ ಅವಳ ಕುಟುಂಬದವ ರೆಲ್ಲರಿಗೂ ಇದರಿಂದ ಬಹಳ ವೇದನೆ ಎನಿಸುತ್ತದೆ. ಅದರಲ್ಲೂ ಇವಳಿಗಿಂತ ಕಿರಿಯಳಾಗಿ, ಹುಡುಗಾಟ ವಾಡುತ್ತಾ ಕಾಲ ಕಳೆಯುತ್ತಿದ್ದ ನಾದಿನಿಯೂ ತನ್ನ ಅತ್ತಿಗೆಯ ಅಳಲು ದೂರವಾಗಿ ಅವಳು ಸುಖ-ಸಂತೋಷಪಡಲಿ ಎಂದು ಹಾರೈಸುತ್ತಾಳೆ. ಅವಳ ಆ ಹೃತ್ಪೂರ್ವಕವಾದ ಆಶೆಯು—

"ಅತ್ತಿಗೆ ಪಡೆಯಲಿ ಪತ್ತೆಮ್ಮ ಕರೆಯಾಲಿ

ಹಿತ್ತಲ ಬಾಳೆ ಚಿಗುರಲಿ–ಅತ್ಯೆಂದು

ಅತ್ತಿಗೆಯ ಮಗಳು ಕರೆಯಾಲಿ "–ಎಂಬ ನುಡಿಗಳಲ್ಲಿ ಬಿಂಬಿತವಾಗಿದೆ.

ಆ ದೈವ ತಾನೇ ಎಷ್ಟು ದಿನ ಮೂಕವಾಗಿ, ಕಿವುಡಾಗಿ ಕೂರಲು ಸಾಧ್ಯ. ಈ ಅಸಹಾಯಕ ಹೆಣ್ಣಿನ ಕರುಣಾಪೂರ್ಣವಾದ ಬೇಡಿಕೆ ಆ ದೈವ ವನ್ನೇ ಗೆಲ್ಲಬಲ್ಲದು. ಹೀಗೆ ದೈವ ಕೃಪೆಯಿಂದಾಗಿ ಅವಳ ಬಹುದಿನಗಳ ಅಪೇಕ್ಷೆ ಈಡೇರುವಂತಾಗಿದೆ. ಅವಳು ಗರ್ಭಿಣಿಯಾಗಿದ್ದಾಳೆ. ಆಗ ಅವಳು ಒಂದು





## ಮುಂಬಯಿಯ ಮೈಸೂರು ಸಂಗೀತ ವಿದ್ಯಾಲಯದ ದಶಮಾನೋತ್ಸವ

ಮುಂಬೈನ ಉಪನಗರ ದೊಂಬಿವಿಲಿಯಲ್ಲಿರುವ ಮೈಸೂರು ಸಂಗೀತ ವಿದ್ಯಾಲಯ' ಇತ್ತೀಚೆಗೆ ತನ್ನ ದಶಮಾನೋತ್ಸವವನ್ನು ವೈಭವದಿಂದ ಆಚರಿಸಿತು.

ಉತ್ಸವದ ಅಂಗವಾಗಿ ಅಂದು ಬೆಳಿಗ್ಗೆ ಶ್ರಿ ಪುರಂದರದಾಸರ ಹಾಗೂ ತ್ಯಾಗರಾಜರ ಆರಾಧನೆ ನಡೆಯಿತು. ವಿದ್ಯಾಲಯದ ವಿದ್ಯಾರ್ಥಿಗಳು ಹಾಗೂ ಸ್ಥಳೀಯ ಕಲಾವಿದರು ಸೇರಿ ಸಾಮೂಹಿಕ ವಾಗಿ ಪುರಂದರದಾಸರ ನವರತ್ನಮಾಲಿಕೆ ಹಾಗೂ ತ್ಯಾಗರಾಜರ ಪಂಚರತ್ನ ಕೃತಿಗಳನ್ನು ಹಾಡಿದರು. ನಂತರ ವಿದ್ಯಾಲಯದ ವಿದ್ಯಾರ್ಥಿಗಳ ಮತ್ತು ಪ್ರಾಂಶುಪಾಲರಾದ ಶ್ರೀಮತಿ ಉಮಾ ನಾಗ-ಭೂಷಣ ಸಂಗೀತ ಕಾರ್ಯಕ್ರಮಗಳು ನಡೆದವು. ವಿದ್ವಾನ್ ವೇಣುಗೋಪಾಲ್ ಪಿಟೀಲಿನಲ್ಲೂ, ವಿದ್ವಾನ್ ಶಶಿಧರ್ ಮೃದಂಗ ವಾದ್ಯದಲ್ಲೂ ಸಹಕರಿಸಿದರು.

ಮಧ್ಯಾಹ್ನ ನಡೆದ ಸಂಗೀತೋತ್ಸವದಲ್ಲಿ ವಿದ್ಯಾಲಯದ ಪ್ರೌಢ ವಿದ್ಯಾರ್ಥಿನಿಯರಾದ ಶ್ರೀಮತಿ ಶ್ಯಾಮಲ ಮತ್ತು ಕುಮಾರಿ ಅನುರಾಧಾ ಶರ್ಮ ಅವರಿಂದ ಗಾಯನ, ಅಗ್ರಹಾರ ಕೆ. ವಿಶ್ವ-ನಾಥರವರಿಂದ ಕೊಳಲು ವಾದನ ಕಚೇರಿ. ಸಂಜೆ ಪಂಡಿತ ಭೀಮಸೇನ ಜೋಷಿಯವರ ಶಿಷ್ಯರಾದ ಸಂಜೀವ ಜಹಗೀರದಾರರಿಂದ ಹಿಂದುಸ್ಥಾನಿ ಸಂಗೀತ ಕಚೇರಿಗಳು ನಡೆದವು. ಶತಮಾನೋತ್ಸವದ ಅಂಗವಾಗಿ ವಿದ್ಯಾಲಯದ 10 ವರ್ಷಗಳ ನಡೆದು ಬಂದ ದಾರಿಯನ್ನು ಗುರುತಿಸುವ ಚಿತ್ರ ಪ್ರದರ್ಶನ ಮತ್ತು ಚಿತ್ರ ಕಲಾವಿದ ಶ್ರೀ ರಾಮಚಂದ್ರ ರಚಿಸಿದ್ಧ ಸಪ್ತಸ್ವರಗಳ "ಸ್ವರರಾಗ ಸುಧಾ" ವರ್ಣ ಚಿತ್ರಗಳ ಪ್ರದರ್ಶನವನ್ನೂ ಏರ್ಪಡಿಸಲಾಗಿತ್ತು.

ಅಪೂರ್ವವಾದಂತಹ ತೃಪ್ತಿ, ಸಂತಸ ಅನುಭವಿಸುತ್ತಾಳೆ.

"ಬಸಿರ ಬಯಕೆ ಚಂದ ; ಹಸಿರು ಕುಪ್ಪಸ ಚಂದ
ನಸುಗೆಂಪಿನವಳ ನಗು ಚೆಂದ-ಅಕ್ಕಯ್ಯ
ಬಸುರಾದರೆ ಚಂದ ಬಳಗಕ"—ಎಂಬ ಅನುಭವ ಕುಟುಂಬದವರೆಲ್ಲರಲ್ಲೂ ಮೂಡುವಂತೆ ಮಾಡಿದ್ದಾಳೆ.

ಇನ್ನು ಮಗುವು ಜನಿಸುವಾಗಲಂತೂ ಅವಳ ಈ ಬಗೆಯ ಸಂತೃಪ್ತಿ, ಸಮಾಧಾನಗಳನ್ನು

"ಕಂದ ಹುಟ್ಟುವಾಗ ಕುಂದ್ಯಾವಕ್ಕನ ಮಾರಿ
ಕಂದ ಚಂಡಾಡಿ ಬರುವಾಗ ಆ ಮಾರಿ
ಕುಂದಲ್ದರಳಾಗಿ ಹೊಳೆದಾವ"—ಎಂಬ ನುಡಿಗಳು ಎಷ್ಟು ಸುಂದರವಾಗಿವೆ! ಹೀಗೆ ಆ ಹೆಣ್ಣು ಮಗಳು ಒಂದು ಮಗುವಿನ ತಾಯಾದಳು. ಇನ್ನು ಅವಳ ಸಂತೋಷಕ್ಕೆ ಮಿತಿ ಎಲ್ಲಿಯದು. ಅವಳಿಗೆ ತನ್ನ ಮಗುವಿನ ಲಾಲನೆ-ಪಾಲನೆ, ಉಡಿಗೆ ತೊಡಿಗೆ ಅಲಂಕಾರ ಇವುಗಳದೇ ಸಂಭ್ರಮ.

"ತೂಗು ತೊಟ್ಟಿಲಿಗೊಂದು ಪಾಗು
ಪಟ್ಟೆಯ ಹಾಸಿ
ಮಾಗಾಯಿ ಮಗನ ಮಲಗಿಸಿ ಅವರವ್ವ
ಜೋಗುಳ ಹಾಡಿ ಹಿಗ್ಯಾಳ"—ಹೀಗೆ ಅವಳು ಸಂತಸಪಡುತ್ತಿದ್ದಾಳೆ. ಅದರಲ್ಲೂ ಮಗು ಆರೋಗ್ಯವಾಗಿ, ಲವಲವಿಕೆಯಿಂದ ಕೂಡಿದ್ದಾಗಲಂತೂ—

"ಲಾಲಿಯ ಹಾಡಿದರೆ ಲಾಲಿಸಿ ಕೇಳ್ಯಾನ
ತಾಯಿ ಹಂಬಲವ ಮರೆತಾನ-ಕಂದಯ್ಯ
ತೋಳ ಬೇಡ್ಯಾನ ತಲೆಗಿಂಬ"—ಎಂಬ ನೆಮ್ಮದಿ ಅವಳ ಪಾಲಿನದು. ಆದರೆ ಕೆಲವೊಮ್ಮೆ ಮಗುವಿನ ವರ್ತನೆಯೇ ಅವಳಿಗೆ ಅರ್ಥವಾಗದೆ ಬಹಳ ಕಳವಳ ಪಡುವಂತಾಗುತ್ತದೆ. ಆಗ ಅವಳು-

ಅಳಬ್ಯಾಡ ಅಂದರ ಹಟಮಾಡಿ ಅಳತಾನ
ಹವಳದ ಜೊಲ್ಲ ಸುರಿಸ್ಯಾನ! ಎಂಬ ಅಸಹಾಯಕತೆಯನ್ನೂ—'ಕಂದಯ್ಯಗೆ ತಾಯಿಯ ಮಾತು ತಿಳಿಯದು'—ಎಂಬ ಸಮಾಧಾನವನ್ನೂ ಒಟ್ಟಾಗಿಯೇ ವ್ಯಕ್ತಪಡಿಸುತ್ತಾಳೆ. ಅವಳು ಮಗುವನ್ನು ಆಡಿಸುವುದೂ, ಬೆಳೆಸುವುದೂ ಒಂದು ಉತ್ತಮ ಹಾಗೂ ಉನ್ನತವಾದ ವಾತಾವರಣದಲ್ಲಿ. ಅವಳಿಗೆ ತನ್ನ ಮಗುವು ಎಲ್ಲಿ, ಹೇಗೆ ಆಡಬೇಕೆಂಬ ಬಗ್ಗೆ ಅವಳದೇ ಆದ ನಿರ್ಧಾರವಿದೆ—

"ಮುದ್ದು ಕಂದನುಗೆ ಮುಗಿಲು ಆಡುಕಾಬೋ
ಸಿದ್ದಂಡಿ ಮರ ಕರಿಯಮ್ಮೋ! ಕಂಜ ನೆರಳು
ಮುದ್ದು ಆಡಿದವು ಬಾಯಿಲ್ಲಾ
ಮುದ್ದು ಆಡಿದರೆ ಬಾಯಿಲ್ಲಾ ಕಂದಣ್ಣಾ
ನೀ ಆಡಿಬಾರೊ ಸಿವ್ನಾ ಮಟು ಕಾಣೇ
ಕುಂದಣ್ಣ ಗುಲುಗು, ಕಾಲಿಗು ಗೆಜ್ಜೆಗುಲುಗು
ಮಾಗಾಯಿ ಗುಲುಗು ಮಗನೀಗೇ! ನನ್ ಕಂದಾ
ನಿನ್ನ ಗುಲುಗು ನಮ್ಮ ಮನುಗೆಲ್ಲಾ"— ಹೀಗೆ ಅವಳ ಮಗು ಉತ್ತಮವಾದ ಸಂಸ್ಕಾರಯುತವಾದ ಚಟುವಟಿಕೆಗಳಲ್ಲಿ ತೊಡಗಿದರೆ ಅವಳಿಗೆ ಬಹಳ ನೆಮ್ಮದಿ. ಹೀಗೆ ಆಟವಾಡುತ್ತಾ ನಲಿದಾಡುವ ಮಗು ಅವಳ ಜೀವ-ಜೀವಾಳ. ಆ ಮಗುವಿನ ನಗು ಆ ತಾಯಿಗೆ ಎಷ್ಟರ ಮಟ್ಟಿ ಆನಂದಾತಿರೇಕವನ್ನು ನೀಡಬಲ್ಲದು ಎಂಬುದ ಅವಳ ಮಾತಿನಲ್ಲಿಯೇ ಕೇಳಬೇಕು.

"ಎಲ್ಲರ ಮಕ್ಕಳ್ಹಂಗೆ ಅಲ್ಲ ಕಣೆ ನನ್ನಯ್ಯ
ನಲ್ಲರಳು ಗಣ್ಣು ನಗೆಮುಖ—ಕಾಮನ ಬಿಲ್ಲು
ಹೋಲ್ತಾವೆ
ಕುಡಿಹುಬ್ಬು"—ಎಂದು ಆ ತಾಯಿ ಬಹಳ ಹೆಮ್ಮೆ ಪಡುತ್ತಾಳೆ. ಹಾಗೆಯೇ ಆ ಮಗುವಿನ ಅಳು-ರಂಪಾಟ, ಹಠ-ಮೊಂಡುತನಗಳಲ್ಲೂ ಅಷ್ಟೇ ಪ್ರಮಾಣದ ಸಮಾಧಾನವನ್ನೂ ತೋರಬಲ್ಲಳು. ಹಾಗೂ ಹಾಡಿ, ವರ್ಣಿಸಿ ತೃಪ್ತಿ-ಪಡಬಲ್ಲಳು. ಅವಳು ಹೇಳುತ್ತಾಳೆ—

"ಅಳುವ ಕಂದನ ತುಟಿಯು ಹವಳದ
ಕುಡಿಹಂಗ
ಕುಡಿ ಹುಬ್ಬು ಬೇವಿನೆಸಳ್ಹಂಗ-ಕಣ್ನೋಟ
ಶಿವನ ಕೈಯಲಗು ಹೊಳೆದ್ಹಂಗ"—ಎಂದು ಹೀಗೆ ತನ್ನ ಮಗುವಿನ ಅಳು ನಗು ಎರಡಲ್ಲೂ ಸಂತೋಷ ಕಾಣುವ ಅವಳಲ್ಲಿ ಸಹನಶೀಲತೆಯ ಜೊತೆಗೆ ಅಮೋಘ ಸೌಂದರ್ಯ ಪ್ರಜ್ಞೆಯೂ ಅಡಕವಾಗಿರುವುದನ್ನು ನಾವು ಕಾಣಬಹುದು. 'ಹೆತ್ತವರಿಗೆ-ಹೆಗ್ಗಣ ಮುದ್ದು' ಎಂಬಂತೆ ಅವಳ ಮಗು ಅವಳಿಗೆ ಹೇಗೆಲ್ಲಾ ಕಾಣಿಸಬಹುದು. ಆದರೆ ಅದೇ ಮಗುವಿನ ಅಳು-ಗಲಾಟೆಗಳು ಬೇರೆಯವರನ್ನು ಬೇಸರ, ಅಸಮಾಧಾನ ಪಡಿಸಬಹುದು. ಆದರೆ ಆ ತಾಯಿಯ ಹೃದಯ ಇದನ್ನು ಸಹಿಸಲು ಸಿದ್ಧವಿಲ್ಲ. ಅವಳಿಗೆ ತನ್ನ ಮಗು ಬಹಳ ಉತ್ತಮ. ಹಾಗಾಗಿ ಅವಳು ಇತರರ ಆಕ್ಷೇಪಣೆಯ ಬಗ್ಗೆ ಎಷ್ಟೊಂದು ಅಸಮಾಧಾನ ವ್ಯಕ್ತಪಡಿಸುತ್ತಾಳೆಂಬುದನ್ನು—

"ಅತ್ತರೆ ಅಳಲವ್ವ ಈ ಕೂಸು ನನಗಿರಲಿ
ಕೆಟ್ಟರೆ ಕೆಡಲಿ ಮನಿಗೆಲಸ ಕಂದನಂಥ
ಹತ್ತು ಮಕ್ಕಳಿರಲವ್ವ ಮನಿತುಂಬ"—ಎಂಬ ನುಡಿಗಳಲ್ಲಿ ಕಾಣಬಹುದು. ಏಕೆಂದರೆ ಅಂಥ ಮಗುವನ್ನೂ ಕೂಡ ಹೇಗೆ ಮನವೊಲಿಸಬೇಕೆಂಬುದು ಅವಳಿಗೆ ಕರಗತವಾಗಿದೆ. ಇದರಿಂದಾಗಿ ಅವಳು ತನ್ನ ಮಗುವನ್ನು ಕುರಿತು—

"ಆಡಿ ಬಾ ನನ ಕಂದ ಅಂಗಾಲತೊಳೆದೇನ
ತೆಂಗಿನ ಕಾಯಿ ತಿಳಿನೀರ ತಕ್ಕೊಂಡು
ಬಂಗಾರ ಮಾರಿ ತೊಳೆದೇನ"—ಎಂದು ರಮಿಸುತ್ತಾಳೆ. ಏಕೆಂದರೆ ಈ ಮಗುವಿಗಾಗಿ ತಾನೇ ಅವಳು ಏನೆಲ್ಲಾ ಬವಣೆ ಪಟ್ಟಿದ್ದಳು; ದೈವದಲ್ಲಿ ಎಷ್ಟೆಲ್ಲಾ ಹರಕೆ-ಪ್ರಾರ್ಥನೆ ಸಲ್ಲಿಸಿದ್ದಳು. ಅದರಿಂದಾಗಿ ಅವಳ ಮಗುವೇ ಅವಳಿಗೆ ಸಿರಿ-ಸಂಪತ್ತು, ಭೋಗ-ಭಾಗ್ಯ ಸರ್ವಸ್ವವೂ ಆಗಿದೆ. ಅವಳು ತನ್ನ ಮಗುವಿಗೆ ಎಷ್ಟೊಂದು ಮಾರು ಹೋಗಿದ್ದಾಳೆಂದರೆ—

"ತೋಳುದ್ದ ತಲೆದಿಂಬು ಮಾರುದ್ದ ಹಾಸಿಗೆ
ಮಾಣಿಕದಂಥ ಮಗ ಮುಂದ ಮಲಗಿದ್ರೆ
ಮಾರಾಯ್ರು ಗೊಡವೆ ನನಗೇನೆ"—ಎಂದು ಹೇಳುತ್ತಾಳೆ. ಅವಳ ಮಗುವಿನಿಂದ ಇಡೀ ಕುಟುಂಬ ಶಾಂತಿ-ನೆಮ್ಮದಿಗಳಿಂದ ಬದುಕಬಲ್ಲದು ಎಂಬ ಆತ್ಮವಿಶ್ವಾಸ ಅವಳಿಗಿದೆ. ಹಾಗಾಗಿ—

"ಕೂಸು ಇದ್ದ ಮನೆಗೆ ಬೀಸಣಿಕೆ ಯಾತಕೆ
ಕೂಸು ಕಂದಯ್ಯ ಒಳ ಹೊರಗ ಆಡಿದರ
ಬೀಸಣಿಕೆ ಗಾಳಿ ಸುಳಿದಾವು"—ಎಂದು ಸಂಪೂರ್ಣವಾಗಿ ಇದನ್ನು ಎಲ್ಲರೂ ಒಪ್ಪುವರೋ ಇಲ್ಲವೋ ಎಂಬ ಸಂದೇಹದಿಂದ ಅವಳು ಇನ್ನೂ ಒಂದು ಪಟ್ಟು ಮಿಗಿಲಾಗಿಯೇ ತನ್ನ ಮಗುವನ್ನು ಒಪ್ಪಿಡುತ್ತಾಳೆ—

"ನನ್ನಯ್ಯನಂಥೋರು ಹನ್ನೆರಡು ಮಕ್ಕಳು
ಹೊನ್ನೇಯ ಮರದ ನೆರಳಲಿ ಆಡುವಾಗ
ಸನ್ಯಾಸಿ ಜಪವ ಮರೆತಾನು"—ಎಂದು ಸಮರ್ಥಿಸುತ್ತಾಳೆ.

ಹೀಗೆ ವಂಶೋದ್ಧಾರಕನನ್ನು ಹೆತ್ತು ನಲಿದಾಡುವ ಹೃದಯದ ಧನ್ಯತಾಭಾವ ಇಲ್ಲಿ ಅಡಕವಾಗಿದೆ. ಆದರೆ ಚೊಚ್ಚಲ ಫಲವಾಗಿ ಹೆಣ್ಣು ಮಗುವೇ ಜನಿಸಿದರೆ, ಆಗ ಏನು ಮಾಡುತ್ತಾಳೆ, ಎಂಬ ಅನುಮಾನ ಯಾರಲ್ಲಾದರೂ ಸುಳಿಯಲಿಕ್ಕೆ ಅವಕಾಶವಿದೆ. ಆದರೆ ಅವಳಿಗೆ ಅಂಥ ಭೇದವೇನೂ ಇಲ್ಲ. ಆದರೆ ಅತ್ತೆಯ ಮನೆಯವರ ಮೇಲಿನ ಹೆದರಿಕೆಯಿಂದಷ್ಟೇ—

"ಹೆಣ್ಣು ಹುಟ್ಯಾದಂತ ಹೇಳಿ ಕಳುವಳಿಬ್ಯಾಡ
ಹೆಣ್ಣಂದರವರು ಹೆದರ್ಯಾರ—ಕಂದವ್ವ
ಹೆಣ್ಣಲ್ಲ ನಮಗೆ ರವಿಚೆನ್ನ"—ಎಂದು ಹೇಳುತ್ತಾಳೆ. ಆ ಮಗಳು ಬೆಳೆದಂತೆಲ್ಲ ಅವಳಲ್ಲಿ ನೂರಾರು-ಆಸೆ-ಆಕಾಂಕ್ಷೆಗಳು ಬೆಳೆಯಲಾರಂಭಿಸುತ್ತವೆ.

"ಕುಂತಾಡು ಮಗಳೀಗಿ ಕೂದಲ ಬಿಟ್ಟೇನ
ನಗರದ ಚೌರಿ ತರಿಸೇನ—ಮನಿಯಾಗ
ತಮ್ಮಗ ಧಾರಿ ಎರೆದೇನ"—ಎಂದು ಅಪೇಕ್ಷಿಸುತ್ತಾಳೆ.

"ನನ್ನ ಕಂದಾ ಮುದ್ದು ಹೊನ್ನ ತಾವರಿ
ಮುದ್ದು
ಹಣ್ಣುಳ್ಳಗಿಡಕೆ ಗಿಣಿಮುದ್ದು—ಕಂದವ್ವ
ನೀ ಮುದ್ದು ನಮ್ಮ ಬಳಗಕ"—ಎಂದು ಅಭಿಮಾನ ತಾಳುತ್ತಾಳೆ.

ಆದರೇನು, ಎಲ್ಲರೂ ಇವಳನ್ನು ಕೇವಲ ಹೆಣ್ಣು ಹಡೆದವಳು ಎಂದು ಹೀನಾಯವಾಗಿ ಕಾಣುತ್ತಾರೆ. ಆಗ ಅವಳು ಅದನ್ನು ಹೇಗೆ ಎದುರಿಸಬೇಕು. ಇಲ್ಲಿ ಆ ಹೆಣ್ಣು ಮಗಳಲ್ಲಿ ಧೈರ್ಯ ಕುಂದುವುದಿಲ್ಲ—

"ಹತ್ತು ಗಂಡ ಹಡೆದರೇನು?
ಬಂಜೆ ತಾನೆಂಬಾರು
ದಟ್ಟಿ ಉಡುವ ಧರಣೀಯ ಹಡೆದರೆ
ಬೆಟ್ಟ ತಾಯೆಂದು ಕರೆದಾರೆ"—ಎಂದು ಸಮರ್ಥಿಸಿಕೊಳ್ಳುತ್ತಾಳೆ. ಎಷ್ಟು ಸಾರಿ ಸಲಹಿದರೇನು. ಹೆಣ್ಣು ಮಗುವನ್ನು ಗಂಡನ ಮನೆಗೆ ಕಳುಹಿಸಿಬಿಡಬೇಕಷ್ಟೆ. ಅದು ಈ ತಾಯಿಗೆ ಸಹಿಸಲಾರದಂಥ ದುಃಖವನ್ನುಂಟುಮಾಡುತ್ತದೆ.

ಹತ್ತು ತಿಂಗಳು ನಿನ್ನ ಹೊತ್ತುಕೊಂಡು
ತಿರುಗೇನ
ಮುತ್ತು ಸುರುಪಿದರ ಬರಿ ಉಡಿಯ
ನನ ಮಗಳ
ಅತ್ತೇರಿಗೊಪ್ಪಿಸಿ ಕೊಡಲ್ಯಾಂಗ"—ಎಂದು

## ನನ್ನ ಸಲ್ಲ

ಮನದಲ್ಲಿ ಮೂಡಿರುವುದು ನಿನ್ನ ಚಿತ್ರ
ಬರೆದೆ ನೀನು ನನಗೆ ಪ್ರೀತಿಯ ಪತ್ರ
ಸಿಕ್ಕಿತು ನನಗೆ ನಿನ್ನೊಡನೆ ಬಾಳುವ ಸೂತ್ರ
ಅದಕ್ಕಾಗಿ ಬಂದೆ ನಾನು ನಿನ್ನ ಹತ್ರ
ಇದನ್ನು ತಿಳಿಸೆನು ಯಾರಿಗೂ ಮಾತ್ರ

—ಆರ್. ರಾಜೇಶ್ವರಿ ಶಂಕರ್

ಸಂಕಟಪಡುತ್ತಾಳೆ. ಆದರೂ ಮಗಳನ್ನು ಕಳುಹಿಸಲೇ ಬೇಕಲ್ಲ.

"ಎಲ್ಲಾದರೂ ಇರಲವ್ವ ಹುಲ್ಲಾಗಿ
ಬೆಳೆಯಾಲಿ
ನೆಲ್ಲಿ ಬುಡ್ಡಾಗಿ ಚಿಗಿಯಾಲಿ ನನಕಂದ
ಜಯವಂತಳಾಗಿ ಬೆಳೆಯಾಲಿ"—ಎಂದು ತನಗೆ ತಾನೇ ಸಾಂತ್ವನ ಹೇಳಿಕೊಳ್ಳುತ್ತಾಳೆ. ಹೆಣ್ಣು ಮಗುವಿನ ಜವಾಬ್ದಾರಿಯನ್ನೇನೋ ಬಗೆಹರಿಸಿಕೊಂಡಳು. ಇನ್ನು ಕುಲದೀಪಕನಾದ ಮಗನಿಗೆ ಮದುವೆ ಮಾಡಬೇಕಲ್ಲವೆ ?

"ಜಲನೋಡಿ ಬಾವಿತೆಗೆಯೋ ನಂಜುಂಡ
ಕುಲನೋಡಿ ಹೆಣ್ಣು ತಾರೋ"—ಎಂಬ ಜನಪದರ ಅನುಭವದ ನುಡಿಯಂತೆಯೇ 'ಮಲ್ಲಿಗೆ ಮುಡಿಯೊ' ಸೊಸೆಯನ್ನೇನೋ ತಂದಿದ್ದಾಯಿತು. ಆದರೆ ಅವಳು "ಅತ್ತೆ ಮಾವರಿಗಂಜಿ ಸುತ್ತೇಳು ನೆರೆಗಂಜಿ" ಬಾಳುವ ಹೆಣ್ಣಾಗಿರದೆ ಹೆಮ್ಮಾರಿಯಾಗಿ ಬರುತ್ತಾಳೆ. ಹತ್ತು ತಿಂಗಳು ಹೊತ್ತು ಹೆತ್ತು ಮಗುವನ್ನು ಸಾಕಿದವಳ ಸ್ಥಿತಿ ಈಗ ಬಹಳ ದುಃಖಕರವಾಗಿದೆ.

"ಸೊಸೆ ಬಂದು ಒಂದು ವರುಷದಾಗ
ನನ್ನ ಮಗ ಬೇರೆಯಾದ
ಮಾರೀ ಚುಂದಕೆ ಮರುಳಾಗಿ ತನ್ನ ತಾಯ
ಕೊರಳಕೊಯ್ದ.
.......................
.......................
ಅವ್ವ ಎಂಬುದ ಮರೆತು ಹೋಗಿ ನನ್ನ
ಮುದುಕಿ ಅಂತಾನ"
ತುತ್ತು ಕೂಳಿಗೆ ಹುಂಗ ಸಾಕಿಗೆ ನಾಕಳೆವು
ದ್ಯಾಂಗ ಹೊತ್ತಾ"...

ಎಂದು ವ್ಯಸನಪಡುತ್ತಾಳೆ. ಆ ಮಗನನ್ನು ಹೆರುವ ಮೊದಲು ಅತ್ತೆ ಮನೆಯವರಿಂದ 'ಬಂಜೆ' ಎಂಬ ಪಟ್ಟ ಹೊತ್ತು ಹಿಂಸೆ ಪಡುತ್ತಿದ್ದಾಗ ಹುಂಗೀನ ಬೊನ ಉಣಲಾರೆ ಎಂದೇ ಗೋಳಾಡಿದ್ದಳು. ಮಗನನ್ನು ಹೆತ್ತ ಮೇಲೆ ಇಂಥ ಸಂಕಟ ದೂರವಾಯಿತೆಂದು ನೆಮ್ಮದಿಯ ಉಸಿರಾಡಿದ್ದಳು. ಆದರೇನು ಯಾವ ಮಗನಿಗಾಗಿ ತನ್ನೆಲ್ಲಾ ಪ್ರೀತಿ-ವಾತ್ಸಲ್ಯಗಳನ್ನು ಧಾರೆಯೆರೆದಿದ್ದಳೋ ಅವನೇ ಇಂದು ಪುನಃ ಅವಳ ಬದುಕಿಗೆ ಅಂಧಕಾರ ತಂದಿದ್ದಾನೆ.

"ಕಂದಾನ ಕೊಡು ಶಿವನೆ ಮತ್ತೊಂದು
ನಾವೊಲ್ಲೆ
ಹತ್ತು ಮಂದ್ಯಾಗ ಹರಿನೀರು ತರುವಂಥ
ಮುತ್ತೈದೆ ತನವ
ಕೊಡು ಶಿವನೆ" ಎಂದು ಮಾತ್ರವೇ ಹಂಬಲಿಸಿದ್ದ, ಹಲುಬಿದ್ದ ಆ ಜೀವ ಇಂದು—

"ಕರುಣ ಬಂದರೆ ಕಾಯೊ ಮರಣ ಬಂದರೆ ಒಯ್ಯೋ" ಎಂದು ಮೊರೆಯಿಡುತ್ತಿದ್ದಾಳೆ. ಇಷ್ಟಾದರೂ ಆ ತಾಯಿಗೆ ತನ್ನ ಕರುಳ ಕುಡಿಯ ಬಗ್ಗೆ ಕಿಂಚಿತ್ತೂ ಕೋಪವಿಲ್ಲ. ತನ್ನ ಮಗು ಎಲ್ಲಾದರೂ ಸುಖವಾಗಿ ಬಾಳಿ-ಬದುಕಲಿ ಎಂದೇ ಆಶಿಸುತ್ತಾ ತನ್ನ ಇಹ ಬದುಕಿನ ಬಂಧನ ಕಳೆದುಕೊಳ್ಳುತ್ತಾಳೆ. ಹೀಗೆ ಜನಪದರ ಸಂತಾನಾಪೇಕ್ಷೆ ಅವರ ಬದುಕಿನ ಒಂದು ಅವಿಚ್ಛಿನ್ನ ಅಂಗವಾಗಿಯೇ ಮುಂದುವರೆಯುತ್ತಾ ಆ ಜನರ ಹೃದಯವಂತಿಕೆ ಹಾಗೂ ಸಂತೃಪ್ತ ಬದುಕನ್ನು ನಮ್ಮ ಮುಂದೆ ತೆರೆದಿಡುತ್ತದೆ. **

# ಯೋಗಸಾಧಕಿ, ಆಧ್ಯಾತ್ಮಿಕ ಮಾರ್ಗದರ್ಶಕಿ: ಶ್ರೀಮತಿ ರಾಜೇಶ್ವರಿ ಗೋವಿಂದರಾಜ್



ಶ್ರೀಮತಿ ರಾಜೇಶ್ವರಿಯವರು ತಿಪಟೂರಿನ ಸೂಲೂರು ಮನೆತನದ ಶ್ರೀ ಗೋವಿಂದರಾಜ ಶೆಟ್ಟಿ, ಇವರ ಧರ್ಮಪತ್ನಿ. 1949 ರಲ್ಲಿ ಮಾಗಡಿಯ ಶ್ರೀ ಚಿಕ್ಕನರಸಿಂಹ ಶೆಟ್ಟಿ ಮತ್ತು ಶ್ರೀಮತಿ ಸುಂದರಮ್ಮ ಇವರ ಪುತ್ರಿಯಾಗಿ ಜನಿಸಿದರು.

ಇವರು ಚಿಕ್ಕಂದಿನಿಂದಲೂ ಸಂಗೀತ, ಸಾಹಿತ್ಯ, ಕಲೆ, ಕಾವ್ಯ, ಯೋಗ ಹಾಗೂ ಆಧ್ಯಾತ್ಮಗಳಲ್ಲಿ ವಿಶೇಷ ಆಸಕ್ತಿ ಹಾಗೂ ಪ್ರತಿಭೆಯುಳ್ಳವರು. ವೀಣೆ ಹಾಗೂ ಸಿತಾರ್ ವಾದನವನ್ನೂ ಬಲ್ಲರು. ತಾವು ಪಡೆದ ಶಿಕ್ಷಣಕ್ಕಿಂತಲೂ ಇವರ ಸ್ವಂತ ಕೃಷಿಯೇ ಹೆಚ್ಚು. ಇವರು ಬಾಲ್ಯದಲ್ಲೇ ಶ್ರೀ ಕನ್ಯಾಕುಮಾರಿ ಸ್ವಾಮೀಜಿಯವರ ಆಪ್ತ ಶಿಷ್ಯೆಯರಲ್ಲೊಬ್ಬರಾಗಿದ್ದರು. ರಾಜೇಶ್ವರಿಯವರು ತಮ್ಮ 18 ನೇ ವಯಸ್ಸಿನಲ್ಲಿಯೇ ಇಡೀ ಭಗವದ್ಗೀತೆಯನ್ನು ಕನ್ನಡ ಪದ್ಯಗಳ ರೂಪಕ್ಕೆ ಅನುವಾದಿಸಿದರು. ಇವರು ಅಂದಿನಿಂದಲೂ ಕವಿತೆಗಳನ್ನು ಬರೆಯತೊಡಗಿ ಇದುವರೆಗೆ ನೂರಾರು ಗೀತೆಗಳನ್ನೂ ಕವನಗಳನ್ನೂ ರಚಿಸಿದ್ದಾರೆ.

ತಿಪಟೂರಿನ "ರಾಗಸುಧಾ" ಸಂಸ್ಥೆಯ ಸ್ಥಾಪಕ ಅಧ್ಯಕ್ಷಿಣಿಯಾದ ಇವರು ಅಲ್ಲಿನ ಯುವತಿಯರಿಗೆ ಸಂಗೀತ ಹಾಗೂ ವೀಣೆಯನ್ನು ಕಲಿಸುವುದರೊಂದಿಗೆ ಸಾಮಾಜಿಕ, ಸಾಹಿತ್ಯಕ, ಯೌಗಿಕ ಹಾಗೂ ಆಧ್ಯಾತ್ಮಿಕ ಮಾರ್ಗದರ್ಶನವನ್ನು ನೀಡಿ ಅವರ ಸರ್ವಾಂಗೀಣ ಅಭಿವೃದ್ಧಿಗೆ ಶ್ರಮಿಸಿದ್ದಾರೆ.

ಇದೀಗ ಇವರು ಬೆಂಗಳೂರಿನ ಬಸವೇಶ್ವರ ನಗರದಲ್ಲಿ ನೆಲೆಸಿ, ತಮ್ಮ ಮನೆಯ ಮಹಡಿಯ ಮೇಲೆಯೇ, ಶ್ರೀಮತಿ ಜ್ಯೋತಿ ಅಶ್ವತ್ಥ-ನಾರಾಯಣ್ ಇವರ ಸಹಕಾರದೊಂದಿಗೆ "ಯೋಗ ಸುಧಾ" ಎಂಬ ಅಂಗಣವನ್ನು ನಿರ್ಮಿಸಿ ಅದನ್ನು "ಕನ್ಯಾಕುಮಾರಿ ಯೋಗ ವಿದ್ಯಾಪೀಠ"ದ ಕೇಂದ್ರವನ್ನಾಗಿಸಿಕೊಂಡಿದ್ದಾರೆ. ರಾಜೇಶ್ವರಿಯವರು ಇಲ್ಲಿನ "ಕನ್ಯಾಕುಮಾರಿ ಯೋಗ ವಿದ್ಯಾಪೀಠ"ದ ಅಧ್ಯಕ್ಷಿಣಿಯೂ ಆಗಿದ್ದಾರೆ.

ಶ್ರೀಮತಿ ರಾಜೇಶ್ವರಿಯವರು ತುಮಕೂರಿನ ಗುರುಗಳಾದ ಪೂಜ್ಯ ಕಮಲಮ್ಮನವರಲ್ಲಿ ಗುರುದೀಕ್ಷೆಯನ್ನು ಪಡೆದಿದ್ದು, ಮಹಾನ್ ಯೋಗಿನಿಯರಾದ ಪೂಜ್ಯ ಅಹಲ್ಯಾಮಾತೆ-ಲಲಿತಾಮಾತೆಯರ ದಿವ್ಯ ಮಾರ್ಗದರ್ಶನದಲ್ಲಿ, ದಂಪತಿಗಳೊಡಗೂಡಿ ದೀಕ್ಷಿತರಾಗಿ ಯೋಗಸಾಧನೆಯಲ್ಲಿ ಮುನ್ನಡೆಯುತ್ತಿದ್ದಾರೆ. ಉತ್ತಮ ವಾಗ್ಮಿಗಳೂ ಆಗಿರುವ ಈಕೆ ಹಲವಾರು ಸಂಘ ಸಂಸ್ಥೆಗಳಿಂದ ಆಹ್ವಾನಿತರಾಗಿ ಸಾಮಾಜಿಕ, ಧಾರ್ಮಿಕ, ಆಧ್ಯಾತ್ಮಿಕ ಪ್ರವಚನಗಳನ್ನು ನೀಡಿದ್ದಾರೆ. ಬಹುಮುಖ ಪ್ರತಿಭೆಯ ಇವರ ಸೃಜನಶೀಲತೆ ಮತ್ತು ಬದುಕಿನ ಗುರಿ, ಸಾಧನೆ ಎಲ್ಲವೂ ಆಧ್ಯಾತ್ಮಿಕತೆಯ ತಳಹದಿಯ ಮೇಲೇ ನಿಂತಿವೆ.

ವಿಶ್ವೇಶ್ವರಪುರ, ಜಯನಗರ ಹಾಗೂ ಬಸವೇಶ್ವರ ನಗರಗಳಲ್ಲಿ ಆಧ್ಯಾತ್ಮಿಕ ಶಿಕ್ಷಣ ನೀಡುತ್ತಾ ದೇವರ ನಾಮಗಳನ್ನು ಕಲಿಸುತ್ತಿದ್ದಾರೆ.

ತಮ್ಮ ಪೀಠದ ಕೇಂದ್ರವಾದ ಯೋಗ ಸುಧಾದಲ್ಲಿ ಮಹಿಳೆಯರಿಗಾಗಿ ಮೂರು ದಿನಗಳ 'ಮನಶ್ಶುದ್ಧಿ ಶಿಬಿರ' ವನ್ನು ಯೋಜಿಸಿ ನಡೆಸಿದ್ದಾರೆ. ಈ ಕೃತಿಗಳೆಲ್ಲವನ್ನೂ ಪೆನುಗೊಂಡೆಯಲ್ಲಿ "ದೇವಿ" ಗರ್ಪಿಸಿ ಕೃತಕೃತ್ಯರಾಗಿ, ಅಲ್ಲಿನ ವೈಶ್ಯ ಕುಲ ಬಾಂಧವರಿಂದ ಸನ್ಮಾನಿತರಾಗಿದ್ದಾರೆ.

ಆಧ್ಯಾತ್ಮಿಕ ಕ್ಷೇತ್ರದಲ್ಲಿನ ತಮ್ಮ ಸಾಧನೆಗಾಗಿ ಇವರು "ಅಖಿಲ ಕರ್ನಾಟಕ ಆರ್ಯ ವೈಶ್ಯ ಮಹಿಳಾ ಮಹಾಸಭಾ" ದಿಂದ ಸನ್ಮಾನಿತರಾಗಿದ್ದಾರೆ. ತಿಪಟೂರಿನ 'ಅಭಿನಯ' ಸಂಘ ಸಹ ಇವರನ್ನು ಸನ್ಮಾನಿಸಿದೆ. ಇಷ್ಟಲ್ಲದೆ ಇವರು ತಮ್ಮ ಮಾರ್ಗದರ್ಶನ ಬಯಸುವ ಹಲವಾರು ಊರುಗಳ ಮಹಿಳೆಯರಿಗೆ ತಮ್ಮ ಆಧ್ಯಾತ್ಮಿಕ ಪತ್ರಗಳ ಮೂಲಕ ಸಾಧನಾಸ್ಫೂರ್ತಿಯನ್ನೂ, ಸೃಜನಾತ್ಮಕತೆಗೆ ಪ್ರೇರಣೆಯನ್ನೂ ನೀಡುತ್ತಿದ್ದಾರೆ. ತಮ್ಮ ಅವಿಶ್ರಾಂತ ಜೀವನದ ನಡುವೆಯೂ ತಮ್ಮನ್ನರಸಿ ಬಂದ ಸಾಧಕಿಯರಿಗೆ ದಾರಿತೋರಿ ಅವರ ಉನ್ನತಿಗಾಗಿ ತಾವೇ ಕೈಹಿಡಿದು ನಡೆಸುತ್ತಿದ್ದಾರೆ.

ಪ್ರಕಟವಾಗಲಿರುವ ಇವರ ಕೃತಿಗಳು— "ಗೆಳತಿಗೆ ಸಲಹೆಗಳು" ಹಾಗೂ "ಪತ್ರಗಳು."

—ಶ್ರೀಮತಿ ಗಾಯತ್ರಿ ಅನಂತ್,
ತುಮಕೂರು.



**ಬ**ಸ್ಸು ದಢಕ್ಕನೆ ಸದ್ದುಮಾಡಿ ನಿಂತಾಗ, ಮುಂದಿನ ಸೀಟಿನ ಕಂಬಿಗೊರಗಿ ನಿದ್ರೆ ಮಾಡುತ್ತಿದ್ದ ಅಂಬಿಕಾ ಥಟ್ಟನೆ ಎಚ್ಚೆತ್ತಳು. "ಏನ್ರೀ, ಆಗಲೇ ಹೊಸಪೇಟೆ ಬಂದುಬಿಟ್ಟಿತೇ ?" ಆಕಳಿಸುತ್ತಾ ಪ್ರಶ್ನಿಸಿದಾಗ ಶಿವಶಂಕರನಿಗೆ ನಗೆ ಬಂತು. "ಏನು ಅಮ್ಮಾವ್ರು. ಚೆನ್ನಾಗಿ ನಿದ್ದೆ ಹೊಡೆದಿರೋ ಹಾಗಿದೆ. ಈಗಿನ್ನೂ ಚಿತ್ರದುರ್ಗ ತಲುಪಿದ್ದೇವೆ. ಗಂಟೆ ಈಗ ಮಧ್ಯರಾತ್ರಿ 2-30 ಅಷ್ಟೇ. ಹೊಸಪೇಟೆಗೆ ಇನ್ನೂ 3-4 ಗಂಟೆಗಳ ಪ್ರಯಾಣವಿದೆ. ನಂಗಂತೂ ಬಸ್ಸಿನ ಕುಲುಕಾಟಕ್ಕೆ ಒಂದು ಕ್ಷಣವೂ ನಿದ್ರೆ ಬರಲಿಲ್ಲ. ಹಾಗೆ ಕೂತು, ಹೀಗೆ ಕೂತು ಬರೀ ಮೈ ಕೈ ನೋವು ಬಂತು ಅಷ್ಟೆ. ನೀವೇನು ಅತ್ತಿಗೆ-ನಾದಿನೀರು ಚೆನ್ನಾಗಿ ನಿದ್ರೆ ಹೊಡೀತಿದೀರಿ ?" ಕೀಟಲೆಯಾಡಿದ.

"ನೀವು ಬಿಡೀಪ್ಪಾ, ಬಹಳ ಸೊಗಸುಗಾರರು, ಸುಕುಮಾರರು. ಪಟ್ಟೆಮಂಚದ ಮೇಲೆ ಸುಪ್ಪತ್ತಿಗೆ ಹಾಸಿಕೊಟ್ಟರೂ ನಿದ್ರೆ ಬಾರದೆ ಹೊರಳಾಡುವ ನಾಜೂಕಿನ ಪ್ರಕೃತಿಯವರು. ನಮಗೆ ಹಾಗಿಲ್ಲವೇ ಇಲ್ಲ. ಎಷ್ಟಾದರೂ ನಾವು ಹೆಂಗಸರು. ಎಂತಹ ಪರಿಸ್ಥಿತಿಗೂ ಅನಿವಾರ್ಯವಾಗಿ ಹೊಂದಿಕೊಳ್ಳುವುದು ನಮಗೆ ರಕ್ತಗತವಾಗಿ ಬಂದದ್ದೇ ಅಲ್ಲವೇ?" ವ್ಯಂಗ್ಯ ಬೆರೆತ ಹುಸಿಮುನಿಸಿನಿಂದ ಅಂಬಿಕಾ ನುಡಿದಾಗ ಶಿವಶಂಕರ ಮಡದಿಯನ್ನು ಮೆಚ್ಚುಗೆಯ ದೃಷ್ಟಿಯಿಂದ ದಿಟ್ಟಿಸುತ್ತಾ ನುಡಿದ.

"ಹೌದೇ ಮಾರಾಯ್ತಿ. ಅದಕ್ಕೇ ಅಲ್ಲವೇ ನಮ್ಮ ಹಡಗಿನಂತಹ ಸಂಸಾರವನ್ನು ಸುಸೂತ್ರವಾಗಿ ಏರುಪೇರಿಲ್ಲದೆ ನೀನು ನಿಭಾಯಿಸ್ತಾ ಬಂದಿರೋದು ? ಮೈದುನಂದಿರು, ನಾದಿನೀರು ಎಲ್ಲರಿಗೂ [illegible] ? ಈಗ ನನಗೇ ಅನುಮಾನ ಬಂದಿದೆ. ಹೊರಗಿನಿಂದ ಬಂದವಳು ನೀನೋ ಅಥವಾ ನಾನೋ ಎಂದು. ಮನೆಯ ಮಗನಾದ ನನಗಿಂತ ಮುದ್ದಿನ ಸೊಸೆಯ ಮಾತಿಗೇ ಪ್ರಾಮುಖ್ಯತೆ ಹೆಚ್ಚು ನಮ್ಮ ಮನೆಯಲ್ಲಿ. ಒಂದೊಂದ್ಸಲ ನಿನ್ನ ಜನಪ್ರಿಯತೆ ನೋಡಿ ನಂಗೆ ಅಸೂಯೆ ಆಗುತ್ತೇ ಕಣೇ ಅಂಬಿ" ಎಂದಾಗ ನಾಚಿ ನೀರಾದಳು ಅಂಬಿಕಾ.

"ಹೋಗ್ರೀ...ಏನೇನೋ ಹೇಳ್ತೀರಿ. ನಿಮ್ಮ ಕೈಹಿಡಿದ ಮೇಲೇ ತಾನೆ ನಾನು ಈ ಮನೆಯ ಸೊಸೆಯಾಗಿದ್ದು. ಮಗನಿಗಿರುವ ಅಧಿಕಾರ ನಿಮಗೆ. ಸೊಸೆಯೆಂಬ ಆದರ ನನಗೇ ಅಷ್ಟೆ" ಮಾತಿನಲ್ಲಿ ಸೋಲುವವಳೇ ಅವಳು ?

ಪಕ್ಕದ ಸೀಟಿನತ್ತ ತಿರುಗಿದಳು. ಪಾಪ ! ಕುಸುಮಳಿಗೆ ಸೊಗಸಾದ ನಿದ್ರೆ ! ಹೂಮನದ ಮಗುವಿನಂತೆ ನಿದ್ರಿಸುತ್ತಿದ್ದ ಕುಸುಮಳ ಮುಖವನ್ನೇ ನೋಡಿದಳು ಒಂದು ಕ್ಷಣ. ಹಾಲುಬಣ್ಣದ ಸುಂದರ ಮುಖ, ಚಲುವೆ, ವಿದ್ಯಾವಂತೆ, ಗುಣವಂತೆ. ಇಷ್ಟಾದರೂ ಏಕೋ ಕುಸುಮಳಿಗೆ ಯಾವ ಸಂಬಂಧವೂ ಕೂಡಿ ಬರುತ್ತಿಲ್ಲ. ಚಿಂತೆಯಿಂದ ಮಂಕಾದಳು ಅಂಬಿಕಾ. ಅವಳಿಗೆ ಮಾತ್ರಾ ಇದು ಸಮಸ್ಯೆಯೇ ಅಲ್ಲ. ಆರಾಮವಾಗಿ ತಿಂದುಂಡು ಖುಷಿಯಾಗಿ ಕಾಲ ಕಳೀತಿದಾಳೆ. ಮಾವನವರಿಗೆ ಮಾತ್ರಾ ಇದರದೇ ಯೋಚನೆ. ತಾನು ಸೊಸೆಯಾಗಿ ಈ ಮನೆಗೆ ಬಂದಾಗ ಫ್ರಾಕ್ ಹಾಕಿಕೊಂಡು ಓಡಾಡುತ್ತಿದ್ದ ಬಾಲೆ ಕಣ್ಣುಮುಂದೆಯೇ ಹೇಗೆ ಮದುವೆಗೆ ಬೆಳೆದು ನಿಂತಿದ್ದಾಳೆ ? ನಮ್ಮ ಕಣ್ಣಿಗೆ ಅವಳಿನ್ನೂ ಪುಟ್ಟವಳೇ. ಆದರೆ ಮಾವನವರ ಲೆಕ್ಕಾಚಾರವೇ ಬೇರೆ.

"ಏನೋ ಶಿವು. ಆಗಲೇ ಕುಸುಮಳಿಗೆ 24 ತುಂಬಿತಲ್ಲಪ್ಪಾ. ತಾಯಿಯಿಲ್ಲದ ಹುಡುಗಿ. ಏನೋ ಅವಳ ಜವಾಬ್ದಾರಿಯೊಂದು ಕಳೆದುಬಿಟ್ಟರೆ ನನಗೆ ನಿಶ್ಚಿಂತೆ ನೋಡು. ಹಗಲೂ ರಾತ್ರಿ ನನಗವಳದೇ ಚಿಂತೆ." ಹಾಗೆಂದಾಗೆಲ್ಲಾ ಶಿವೂಗೆ ರೇಗುತ್ತಿತ್ತು.

"ಏನಪ್ಪಾ ನೀವು ! ಈಗಿನ ಕಾಲದಲ್ಲಿ ಹುಡುಗಿಯರಿಗೆ ಮುವ್ವತ್ತು ವರ್ಷವೇ ಮುಂಚೆಯೆನ್ನುವಾಗ ನೀವು ಸುಮ್ನೆ ತಲೆ ಕೆಡಿಸ್ಕೋತೀರಿ. ಅವಳಿಗೊಂದು ಕೆಲಸ ಸಿಗಲಿ. ಸುಮ್ನಿರಿ. ಚಿಟಿಕೆ ಹೊಡೆಯುವುದರಲ್ಲಿ ಮದುವೆ ಸೆಟಲ್ ಆಗತ್ತೆ. ಈಗಿನ ಹುಡುಗರಿಗೆ ಹೆಂಡತಿಯ ಉದ್ಯೋಗಕ್ಕಿಂತ ಮಿಗಿಲಾದ ಆಕರ್ಷಣೆ ಬೇರೊಂದಿಲ್ಲಪ್ಪಾ. ರೂಪ ...ಗುಣ...ಮಿಕ್ಕ ವಿಷಯವೆಲ್ಲಾ ಬದಿಗೇ ಸರಿದು ಹೋಗಿಬಿಡತ್ತೆ."

"ಏನೋಪ್ಪಾ ! ನಿಮ್ಮ ವಾದವೇ ನನಗರ್ಥವಾಗುವುದಿಲ್ಲ. ಯಾರೋ ಏನೋ ಮಾಡ್ತಾರೆ ಅಂತ ನಾವೂ ಕುಣಿಯಬೇಕಾಗಿದೆ. ಮದುವೆಗಾಗಿ ಹೆಣ್ಣು ಮಕ್ಕಳು ಅಗತ್ಯವಿರಲಿ, ಇಲ್ಲದಿರಲಿ ಕೆಲಸಕ್ಕೆ ಅಲೆಯಬೇಕಾಗಿದೆ. ತಲೆನೆರೆಯೋ ವಯಸ್ಸಿಗೆ ಮದುವೆಯಾದರೆ ಏನು ಚೆನ್ನ ಹೇಳು ? ಗಂಡಿಗಾಗಲೀ, ಹೆಣ್ಣಿಗಾಗಲೀ ಯಾವ್ಯಾವ ವಯಸ್ಸಿಗೆ ಏನಾಗ್ಬೇಕೋ ಅದು ಆದರೇನೇ ಚೆನ್ನ."

ಹೌದು ! ತನಗೂ ಮಾವನವರ ವಾದದಲ್ಲಿ ಹುರುಳಿದೆಯೆಂದೇ ಅನಿಸುತ್ತಿತ್ತು. ಚಿಕ್ಕವಯಸ್ಸು, ದೇಹದಲ್ಲಿ ಶಕ್ತಿ, ಉತ್ಸಾಹಗಳು ಇರುವಾಗಲೇ ದಾಂಪತ್ಯ ಜೀವನದಲ್ಲಿ ಒಂದು ರೀತಿಯ ಸ್ವಾರಸ್ಯವಿರುತ್ತದೆ. ಜೀವನದಲ್ಲಿ ಶಕ್ತ್ಯುತ್ಸಾಹಗಳು ಪುಟಿಯುವಾಗ ದಾಂಪತ್ಯದ ಅನುಭವ ಗಟ್ಟಿಯಾಗುತ್ತದೆ. ದೈಹಿಕ, ಮಾನಸಿಕ ಬಲಗಳು

ಕುಗ್ಗಲಾರಂಭಿಸುವಂತಹ ವಯಸ್ಸಿನಲ್ಲಾಗುವ ವಿವಾಹಕ್ಕೆ ಅರ್ಥವೇನಿದೆ? ಮೆಲ್ಲಗೆ ಮನ ಏನನ್ನೋ ಮೆಲುಕು ಹಾಕಿತ್ತು. ತನಗೆ ಮದುವೆಯಾದಾಗ 20 ವರ್ಷ. ಶಿವಶಂಕರನಿಗೆ 25 ವರ್ಷ. ಮದುವೆಯಾಗಿ ಆಗಲೇ ಹತ್ತು ವರ್ಷಗಳಾದವು. ಮೂವರು ಮಕ್ಕಳ ತಂದೆಯಾದರೂ ಶಿವಶಂಕರನಿಗೆ ದಾಂಪತ್ಯ ಜೀವನದ ಉತ್ಸಾಹದ ಸೆಲೆ ಬತ್ತಿಲ್ಲ. ಹತ್ತು ವರ್ಷಗಳ ಕೆಳಗೆ ಯಾವ ಉತ್ಸಾಹವಿತ್ತೋ ಈಗಲೂ ಅದೇ ಉತ್ಸಾಹ, ಅದೇ ಆಸಕ್ತಿ. ಅವನ ಈ ಬತ್ತದ ಚೈತನ್ಯದ ಬಲವೇ ತಮ್ಮ ಸುಗಮ ಸಂಸಾರಕ್ಕೆ ಕಾರಣವಲ್ಲವೇ? ಸುಖದ ಕ್ಷಣಗಳ ನೆನಪಿನಿಂದ ಮನ ಹಗುರಾಯಿತು.

ಆದರೇನು ಮಾಡುವುದು? ಮದುವೆಯೆನ್ನುವುದು ನಮ್ಮ ಕೈಲಿದೆಯೇ? ಎರಡು ವರ್ಷಗಳಿಂದ ಸುಮಾರು ಗಂಡುಗಳನ್ನು ನೋಡಿದ್ದಾಯ್ತು. ತಮಗೆ ಬರುವ ಗಂಡುಗಳ ವಿಳಾಸಗಳಲ್ಲಿ 90 ಭಾಗ ಕೆಲಸದಲ್ಲಿರುವವರನ್ನೇ ಬಯಸುವವರು. ಕೆಲವರಂತೂ ಹುಡುಗಿ ಬ್ಯಾಂಕ್ ಕೆಲಸದಲ್ಲೇ ಇರಬೇಕೆನ್ನುವ ಮಂದಿ. ಕೇಳಿದವರ ಕಪಾಳಕ್ಕೆರಡು ಬಿಗಿಯುವ ಮನಸ್ಸಾಗುತ್ತಿತ್ತು ಅಂಬಿಕೆಗೆ ಆಗೆಲ್ಲಾ. ಕೆಲವರದಂತೂ ಅತಿ ದುರಾಸೆ. ಸ್ವತಃ ಇಂಜಿನಿಯರಾಗಿದ್ದು ಕೈತುಂಬಾ ಸಂಪಾದಿಸುವ ಹುಡುಗನಿಗೆ ಹೆಂಡತಿಯ ಸಂಬಳದ ಆಸೆ. ಈ ಹಾಳು ಉದ್ಯೋಗದ ಪಿಶಾಚಿ ವ್ಯಾಪಕವಾಗಿ

ಹುಬ್ಬಳ್ಳಿಯ ಕಡೆಯವರೆಂದ ಕೂಡಲೇ ಮೂಗು ಮುರಿದಿದ್ದರು. "ನನಗೇನೋ ಈ ಸಂಬಂಧ ಅಷ್ಟು ಮನಸ್ಸಿಗೆ ಹಿಡಿಸಿಲ್ಲಪ್ಪಾ. ನಮ್ಮ ಆಚಾರ, ವಿಚಾರ, ಭಾಷೆಗಳಿಗೆ ಅವರದು ಸ್ವಲ್ಪವೂ ಹೊಂದಿಕೆಯಾಗುವುದಿಲ್ಲ. ಮೇಲಾಗಿ ಆ ಕಡೆಯ ಜನ ಶುದ್ಧ ಒರಟು. ಸುಮ್ನೆ ಹೋಗಿ ಬರುವುದೊಂದು ವ್ಯರ್ಥ" ಎಂದಿದ್ದರು.

ತಂದೆಯ ಮಾತಿಗೆ ಸಿಕ್ಕಾಪಟ್ಟೆ ರೇಗಿದ್ದ ಶಿವೂ. "ನೀವೂ ಹೀಗೇ ನಚ್ಚು ಮಾಡ್ತಿದ್ರೆ ಕುಸುಮಳಿಗೆ ಮದುವೆಯಾದ ಹಾಗೇ ಇದೆ. ಪ್ರೊಫೆಸರ್ ಅವರ ಬಗ್ಗೆ ಒಳ್ಳೆಯ ಅಭಿಪ್ರಾಯ ತಿಳಿಸಿದ್ದಾರೆ. ಅವರೂ ಎಲ್ಲಾ ಕಲಿತವರು. ಕುಸುಮಾ ಅಲ್ಲಿ ಎರಡು ವರ್ಷಗಳಿದ್ದರೆ ಸಾಕು, ಅಲ್ಲಿಯ ಭಾಷೆಗೆ ಹೊಂದಿಕೊಳ್ತಾಳೆ. ಇನ್ನು ಆಚಾರ ವಿಚಾರ... ಮೈಸೂರಿನ ಮಂದಿ ಅದನ್ನೆಲ್ಲಾ ಈಗಿನ ಕಾಲದಲ್ಲಿ ಅನುಸರಿಸುತ್ತಿರುವುದು ಅಷ್ಟರಲ್ಲೇ ಇದೆ. ಅವರ ಮನೆಯ ಸೊಸೆಯಾದ್ಮೇಲೆ ಅವರೇ ಅವಳನ್ನು ತಿದ್ದಿ ಅನುಸರಿಸಿಕೊಳ್ತಾರೆ. ಅದು ಅವರ ಜವಾಬ್ದಾರಿ. ನೋಡಿ ಇಷ್ಟರ ಮೇಲೂ ಬೇಡಾಂದ್ರೆ ಬಿಟ್ಟುಬಿಡ್ತೀನಿ. ಆದರೆ ನೀವು ಇಷ್ಟು ಸಣ್ಣ ಕಾರಣಕ್ಕೂ ಹಿಂಜರಿಯುತ್ತಾ ಕುಳಿತರೆ ಮುಂದೆ ಕುಸುಮ ಅದರ ಫಲವನ್ನು ಅನುಭವಿಸ ಬೇಕಾಗುತ್ತದೆ."

ಮಗನ ಖಾರವಾದ ನುಡಿಗಳಿಗೆ ತೆಪ್ಪಗಾಗಿದ್ದರು ಮಾವನವರು. ಈ ಮಧ್ಯೆ ಕುಸುಮಳೇ ಬಂದು

ಯದ ಪತ್ರವನ್ನೂ, ವಿಳಾಸವನ್ನೂ ತೆಗೆದುಕೊಂಡು ಬಂದ. ಆದರೂ ಹೊಸ ಊರು. ಮಾವನವರ ಸ್ನೇಹಿತರ ಮನೆಯವರೂ ಅಪರಿಚಿತರೇ. ಹೇಗೋ ಏನೋ?

ಮೈಮುರಿದೆದ್ದ ಕುಸುಮಾ ಜೋರಾಗಿ ಆಕಳಿಸಿದಳು. ಇನ್ನೂ ಎಚ್ಚರವಾಗಿಯೇ ಇದ್ದ ಅಣ್ಣ-ಅತ್ತಿಗೆಯರನ್ನು ಕಂಡು "ಏನು? ನೀವಿಬ್ಬರೂ ನಿದ್ರೆಯನ್ನೇ ಮಾಡಲಿಲ್ವೇ? ಏನಪ್ಪಾ ಸಮಾಚಾರ? ಸದ್ಯ ನಿಮ್ಮಿಬ್ಬರ ಏಕಾಂತಕ್ಕೆ ನನ್ನಿಂದ ತೊಂದ್ರೆಯಾಗಬಹುದೆಂದು ಊಹಿಸಿಯೇ ನಾನು ಚೆನ್ನಾಗಿ ನಿದ್ರೆ ಮಾಡಿಬಿಟ್ಟೆ" ಎಂದು ರೇಗಿಸಿದಳು.

"ಹೌದೌದು! ನಮ್ಮ ಏಕಾಂತವೇನೋ ಸರಿಯೇ! ಆದರೆ ನಮ್ಮಿಬ್ಬರ ಸರಸ ಸಲ್ಲಾಪದಿಂದಾಗಿ ನಿನ್ನ ಸೊಂಪಾದ ನಿದ್ರೆಗೇನೂ ಭಂಗ ಬರಲಿಲ್ವಲ್ಲಾ?" ಪ್ರತಿಯಾಗಿ ಛೇಡಿಸಿದ ಶಿವೂ. "ಅದೇನು ಪುಣ್ಯಮಂತೆಯೇ ನೀನು, ಸಂತೇಲಿ ಮಲಗಿದ್ರೂ ನಿದ್ರೆ ಬರತ್ತಲ್ಲೇ ನಿಂಗೆ?" ಎಂದ ಹೊಟ್ಟೆಯುರಿಯಿಂದ. ಕೂಡ್ಲಗಿ ಬರುತ್ತಲೇ ಬಸ್ಸು ಅರ್ಧಕ್ಕರ್ಧ ಖಾಲಿಯಾಯ್ತು. ಇನ್ನೇನು ಹೊಸಪೇಟೆ ತಲುಪಿದ ಹಾಗೆಯೇ ಎಂದರಿವಾದಾಗ ಎಲ್ಲರ ಮುಖಗಳೂ ನಿಶ್ಚಿಂತೆಯ ಭಾವ ಹೊಂದಿದವು.

ಬಸ್ಸಿನಿಂದಿಳಿಯುತ್ತಲೇ ಕುಸುಮಾ ಕುತೂಹಲದಿಂದ ಅತ್ತಿತ್ತ ಕಣ್ಣಾಡಿಸಿದಳು.

"ಶಿವೂ, ಇಲ್ಲಿಂದ ಪಂಪೆ ಹ್ಹಾಗೂ ತುಂಗಭದ್ರಾ

# ಅದೃಷ್ಟದಾಟ ನಡದ್ಹಾಂಗ

ಎಲ್ಲೆಡೆಯೂ ಹಬ್ಬುತ್ತಿದೆ. ಇದಕ್ಕೆ ಕೊನೆಯೆಲ್ಲಿ? ಕುಸುಮಳಿಗೆ ಉದ್ಯೋಗವಿಲ್ಲವೆಂಬ ಕಾರಣಕ್ಕಾಗಿಯೇ ಎಷ್ಟೋ ವರಗಳು ತಪ್ಪಿ ಹೋಗಿದ್ದವು. ಅದೇಕೋ ಅವಳ ಅದೃಷ್ಟವೂ ಖೊಟ್ಟಿ. ಶಿವಶಂಕರನೇ ಮುತುವರ್ಜಿಯಿಂದ ಪೇಪರಿನಲ್ಲಿ ಬರುವ ಕೆಲಸದ ಕರೆಗಳಿಗೆಲ್ಲಾ ಅರ್ಜಿ ಹಾಕುತ್ತಿದ್ದಾನೆ. ಬೇರೆ ರೀತಿಯಿಂದಲೂ ಪ್ರಯತ್ನಿಸುತ್ತಿದ್ದಾನೆ. ಆದರೇಕೋ ಕುಸುಮಳಿಗೆ ಕೆಲಸವೂ ಸಿಕ್ಕಲ್ಲ. ಮದುವೆಯೂ ನಿಶ್ಚಯವಾಗುತ್ತಿಲ್ಲ.

ಅಂಬಿಕೆಗೆ ಮಾತ್ರಾ ಬಲವಾದ ನಂಬಿಕೆಯಿದ್ದೇ ಇದೆ. ಮಾವನವರ ಆಸೆಯಂತೆ ಕುಸುಮಳಿಂದ ಸ್ವಯಂವರ ಮಂತ್ರದ ಜಪವೂ ಮಾಡಿಸಿಯಾಯ್ತು. ದೇವಿಗೆ ನಿಂಬೆಹಣ್ಣಿನ ಆರತಿಯೂ ಆಯ್ತು, ಲಕ್ಷ್ಮೀಪೂಜೆಯೂ ಆಯ್ತು, ಶ್ರೀನಿವಾಸ ಕಲ್ಯಾಣವೂ ಆಯ್ತು. ಯಾರಿಗೆ ಗೊತ್ತು? ಎಲ್ಲಾ ಪೂಜೆಗಳ ಫಲವೂ ಒಟ್ಟಿಗೇ ಕೂಡಿ ಬರಬಹುದು.

ಏನೋ! ಈಗ ನಾವು ಹೋಗುತ್ತಿರುವ ಕಡೆಯಾದರೂ ದೇವರ ದಯೆಯಿಂದ ಕೂಡಿ ಬಂದರೆ ಸಾಕಪ್ಪಾ. ಹುಡುಗನೂ ಒಳ್ಳೆಯ ಕೆಲಸದಲ್ಲಿದ್ದಾನೆ. ಹುಬ್ಬಳ್ಳಿಯಲ್ಲಿ ಇಂಜಿನಿಯರಾಗಿದ್ದಾನೆ. ತಂದೆ, ತಾಯಿಯರಿರುವುದು ಹೊಸಪೇಟೆಯಲ್ಲಿ. ಜಾತಕಗಳೂ ಚೆನ್ನಾಗಿಯೇ ಕೂಡಿವೆ. ಅದಕ್ಕೆಂದೇ ಈಗ ಹೊಸಪೇಟೆಗೆ ಪ್ರಯಾಣ.

ಆದರೆ ಅದೇಕೋ ಮಾವನವರು ಮಾತ್ರಾ

ಅವರಿಬ್ಬರ ವಾಗ್ಯುದ್ಧಕ್ಕೆ ತೆರೆ ಎಳೆದಿದ್ದಳು. "ಅಪ್ಪಾ, ಶಿವು ಹೇಳೋದು ಒಂದು ರೀತೀಲಿ ಸರೀನೆ. ಕೆಲಸವಿಲ್ಲದ ಹುಡುಗಿಯರನ್ನು ಒಪ್ಪುವುದೇ ಕಷ್ಟವಾಗಿರುವಾಗ ನಾವು ಸಣ್ಣಪುಟ್ಟ ವಿಷಯಗಳನ್ನೂ ಸಮಸ್ಯೆ ಮಾಡಿಕೊಂಡರೆ ಹೇಗೆ? ಜಾತಕಗಳು ಕೂಡಿರುವುದರಿಂದ ಒಮ್ಮೆ ಹೋಗಿ ನೋಡಿಕೊಂಡು ಬರುವುದರಲ್ಲಿ ತಪ್ಪೇನಿದೆ? ಆಮೇಲೂ ನಮ್ಮ ಮನಸ್ಸಿಗೆ ಹಿಡಿಸದಿದ್ದಲ್ಲಿ ಬೇಡವೆಂದರಾಯ್ತು. ಹುಡುಗಿಯನ್ನು ನೋಡಿದ ಮಾತ್ರಕ್ಕೆ ಮದುವೆ ನಡೆದೇ ಬಿಡುವುದೇ? ಮೇಲಾಗಿ ಅವರಿಗೂ ಒಪ್ಪಿಗೆಯಾಗಬೇಕಲ್ಲಾ" ಎಂದು ಸಮಾಧಾನಿಸಿದ್ದಳು.

ಮುಂದಿನ ವ್ಯವಹಾರವೆಲ್ಲಾ ನಿರಾತಂಕವಾಗಿಯೇ ಸಾಗಿತು. ಹುಡುಗನ ತಂದೆತಾಯಿಯರೇ ಒಂದು ದಿನವನ್ನು ನಿಶ್ಚಯಿಸಿ ಬರೆದಿದ್ದರು. ಆದರೆ ದುರದೃಷ್ಟವಶಾತ್ ಆದಿನ ಅತ್ತೆಯವರ ಕಾರ್ಯವಿರಬೇಕೆ? ಸರಿ ಈ ಕೆಲಸವನ್ನು ಮುಂದಿಟ್ಟುಕೊಂಡು ಶುಭಕಾರ್ಯ ಮಾಡಬಾರದೆಂಬ ಕಾರಣವನ್ನು ವಿವರಿಸಿ ಅವರು ಹೇಳಿದ ದಿನಕ್ಕೆ ಸರಿಯಾಗಿ ಒಂದುವಾರಕ್ಕೆ ತಾವು ಅಲ್ಲಿಗೆ ಬರುವುದಾಗಿ ಪತ್ರ ಬರೆದುಹಾಕಿದ ಶಿವಶಂಕರ.

ಮಾವನವರ ಸ್ನೇಹಿತರ ಅಣ್ಣನ ಮನೆಯವರು ಹೊಸಪೇಟೆಯಲ್ಲಿಯೇ ಇದ್ದುದರಿಂದ ನೇರ ಬೀಗರ ಮನೆಗೇ ಹೋಗಬೇಕಾದ ಅಗತ್ಯವಿರಲಿಲ್ಲ. ಶಿವಶಂಕರನೇ ಹೋಗಿ ಅವರಿಂದ ಒಂದು ಪರಿಚ

ಡ್ಯಾಮ್‌ಗಳಿಗೆ ಬಸ್ಸಿವೆಯೆಂದು ಬೋರ್ಡ್ ಹಾಕಿದ್ದಾರೆ. ನಮ್ಮ ಕಾರ್ಯಕ್ರಮ ಮುಗಿದ ಮೇಲೆ ಎಲ್ಲಾ ನೋಡಿಕೊಂಡು ಹೋಗೋಣ್ವೋ!" ಗೋಗರೆದಳು.

ಅವಳ ಉತ್ಸಾಹಕ್ಕೆ ತಡೆ ಹಾಕಿದ ಶಿವೂ "ಸ್ವಲ್ಪ ಇರೇ ಮಹರಾಯ್ತಿ, ಸದ್ಯ ನಿನ್ನ ವಧು ಪರೀಕ್ಷೆಯೊಂದು ಮುಗಿಯಲಿ ಮೊದಲು. ಆಮೇಲೆ ಮಿಕ್ಕ ವಿಷಯ. ತಾಳು, ಅವಸರ ಪಡ್ಬೇಡ. ಅದೃಷ್ಟವಶಾತ್ ಈ ಹುಡುಗನೇ ನಿನ್ಗೆ ಗೊತ್ತಾಗಿಬಿಟ್ರೆ ದಿನಾ ನೀನು ಡ್ಯಾಮಿಗೇ ವಾಕಿಂಗ್ ಹೋಗಬಹುದು" ರೇಗಿಸಿದ ಶಿವೂ.

ತಂದೆಯ ಸ್ನೇಹಿತರು ಕೊಟ್ಟಿದ್ದ ಪರಿಚಯದ ಪತ್ರ ಹಿಡಿದು ವಿಳಾಸಕ್ಕಾಗಿ ಅಕ್ಕಪಕ್ಕದಲ್ಲಿ ವಿಚಾರಿಸಿದ. ಮನೆಯೇನೋ ಸುಲಭದಲ್ಲೇ ಪತ್ತೆಯಾಯಿತು. ಬಾಗಿಲಿನ ಬಳಿ ನಿಂತವನು ವಾಚು ನೋಡಿಕೊಂಡ. ಇನ್ನೂ ಬೆಳಗಿನ 6 ಗಂಟೆ. ಛೇ! ಆರಾಮವಾಗಿ ಮಲಗಿರುವವರನ್ನು ಎಬ್ಬಿಸಿ ಅವರ ಭಾನುವಾರದ ಬೆಳಗಿನ ಸಿಹಿನಿದ್ರೆಯನ್ನು ಕೆಡಿಸುವ ನಮಗೆ ಹಿಡಿಶಾಪ ಹಾಕುತ್ತಾರೇನೋ ಎನಿಸಿ ಸಂಕೋಚವಾಯಿತು. ಆದರೆ ವಿಧಿಯಿಲ್ಲ. ಬಾಗಿಲಲ್ಲಿ ಎಷ್ಟೊತ್ತು ನಿಲ್ಲುವುದು? ಅಕ್ಕಪಕ್ಕದವರ ಹದ್ದಿನ ನೋಟಗಳು ಆಗಲೇ ನಮ್ಮತ್ತ ಹಾಯುತ್ತಿವೆಯೆನಿಸಿ ಭಂಡ ಧೈರ್ಯದಿಂದ ಬೆಲ್ ಮಾಡಿದ.

ಒಳಗಿನಿಂದ ಯಾವ ಪ್ರತಿಕ್ರಿಯೆಯೂ ಇಲ್ಲ.

ಬಹುಶಃ ಊರಿನಲ್ಲಿಲ್ಲವೋ? ಒಂದು ವೇಳೆ ಇಲ್ಲದಿದ್ದಲ್ಲಿ? ಮುಂದಿನದನ್ನೂ ಲೆಕ್ಕಹಾಕಿತು ಮನಸ್ಸು. ಹೇಗಿದ್ದರೂ ಬಸ್‌ಸ್ಟ್ಯಾಂಡ್ ಪಕ್ಕದ 'ಮಲ್ಲಿಗೆ' ಲಾಡ್ಜ್ ಇದ್ದೇ ಇದೆ.

"ಇರಿ, ನೋಡೋಣ..." ಅಂಬಿಕೆ ಇನ್ನೊಂದು ಸಲ ಒತ್ತಿದಳು. ಮರುಕ್ಷಣದಲ್ಲಿ ಒಳಗಿನಿಂದ ಹೆಜ್ಜೆಯ ಸಪ್ಪಳ ಕೇಳಿಬಂದಾಗ ಶಿವಶಂಕರ ತೋಳು ಚಿವುಟಿದ "ನೋಡಿದ್ಯಾ, ಹೆಂಗಸರ ಹಸ್ತಗುಣ"?

ಬಾಗಿಲು ತೆಗೆದಾತ ಸುಮಾರು 40-45ರ ವ್ಯಕ್ತಿ. ಅವರು ಬಾಯ್ತೆರೆಯುವ ಮುನ್ನವೇ ಶಿವೂ "ಸರ್ ಅಡ್ವೋಕೇಟ್ ಶ್ರೀಧರ ಜೋಶಿಯವರನ್ನು ಕಾಣಬೇಕಾಗಿತ್ತು" ಎಂದ.

"ಅವರು ಊರಿನಲ್ಲಿಲ್ಲವಲ್ಲಾ!" ಎಂದಾಗ ಮೂವರಿಗೂ ಆಕಾಶವೇ ತಲೆಮೇಲೆ ಕಳಚಿಬಿದ್ದಂತಾಯ್ತು.

"ಅಂದ್ಹಾಗೆ ಅವರ ತಮ್ಮನವರ ಊರಿಂದ ಬಂದಿದೇವೆ ನಾವು. ಇಲ್ಲಿ ಬೇರೆ ಯಾರೂ ಪರಿಚಯದವರಿಲ್ಲದ್ದರಿಂದ ನಿಮ್ಮನ್ನು ಭೇಟಿ ಮಾಡಲು ತಿಳಿಸಿ ನಿಮ್ಮ ವಿಳಾಸವನ್ನು ಕೊಟ್ಟರು..."

ಮುಂದಿನ ಮಾತುಗಳ ಅಗತ್ಯವೇ ಬೀಳಲಿಲ್ಲ. "ಓಹೋ! ನೀವು ರಾಘು ಕಕ್ಕನ ಊರಿನಿಂದ ಬಂದವರೇನು? ಬಹಳಾ ಸಂತೋಷ. ಒಳಕ್ಕೆ ಬನ್ನಿ. ನಾನು ಶ್ರೀಧರ ಜೋಶಿಯವರ ಮಗ ಮುಕುಂದ ಜೋಶಿ. ನಾನೂ ಅಡ್ವೋಕೇಟ್ ಅದೀನ್ರಿ. ನಮ್ಮ ತಂದೆಯವರು ಇಲ್ಲಾಂತ ಮನಸ್ಸಿಗೆ ಬೇಸರ ಮಾಡ್ಕೋಬೇಡ್ರಿ. ಅವಶ್ಯ ನಿಮ್ಮನಿ ಅಂತಲೇ ಭಾವಿಸಿಕೊಳ್ರಿ. ನಿಮಗೇನು ಸಹಾಯ ಬೇಕೋ ನಿರ್ಭಿಡೆಯಿಂದ ಕೇಳ್ರಿ. ನಮ್ಮ ತಮ್ಮೋರಿಗಲ್ಲದೆ ಇನ್ಯಾರಿಗ್ರೀ ನಾವು ಸಹಾಯ ಮಾಡೋದು?" ಹೃತ್ಪೂರ್ವಕವಾಗಿ ಮೂಡಿ ಬಂದ ಮಾತುಗಳು ಮೂವರಲ್ಲೂ ಚೈತನ್ಯ ತರಿಸಿದವು. ಮನೆಯಾತನ ಪತ್ನಿಯ ಹೆಸರೂ ಕುಸುಮಾಬಾಯಿ. ಆಕೆಯನ್ನು ನೋಡುತ್ತಲೇ, ಆಕೆಯ ನುಡಿಗಳನ್ನು ಕೇಳುತ್ತಲೇ ಅವರ ಹೃದಯ ವೈಶಾಲ್ಯ ಅರಿವಾಯಿತು. ತುಂಬಿದ ಮನೆ, ತುಂಬು ಸಂಸಾರದ, ಸುಸಂಸ್ಕೃತ ನಡವಳಿಕೆಯ ಜನ. ದಂಪತಿಗಳ ಸ್ನೇಹಾದರಗಳನ್ನು ಅನುಭವಿಸಿದ ಶಿವಶಂಕರ ತಾನು ಬಂದ ಕೆಲಸ ಗಟ್ಟಿಯಾದಷ್ಟೇ ಹಿಗ್ಗಿದ.

ಮನೆಯಾಕೆ ಕುಸುಮಾಬಾಯಿ ತುಂಬಾ ಸ್ನೇಹಜೀವಿ. ಅತ್ತಿಗೆ ನಾದಿನಿಯರಿಬ್ಬರೂ ಅವರೊಡನೆ ಎಷ್ಟೋ ಕಾಲದ ಪರಿಚಿತರಂತೆ .ಅಡುಗೆ ಮನೆ ಯಲ್ಲೇ ಕುಳಿತು ಹರಟುತ್ತಿರುವುದನ್ನು ಕಂಡು ಬೆರಗಾದ ಶಿವೂ.

"ನೋಡು ಕುಸುಮಾ, ನೀನು ಭಲೋದಾಗಿ ತಿಂದುಂಡು ಮಾಡ್ಬೇಕು. ಮದ್ವಿ ಆಗೂ ಹುಡುಗಿ ಹೆಂಗಿರಬೇಕೂ ಏನ್ಮತೀ. ನೀನು ನೋಡಿದ್ರ ಹಂಚಿ ಕಡ್ಡಿ ಇದ್ದಾಂಗಿದೀ. ಏನ ನಿಮ್ಮ ವೈನಿ ಊಟಾ ಹಾಕ್ಯಾರೋ ಇಲ್ಲಾ ಮತ್ತೆ?"

"ಹಾಗಲ್ಲಾ ಕುಸುಮಾಬಾಯಿ, ಈಗಿನ ಹುಡುಗೀರು ಸಣ್ಣಗಿರುವುದರ ಗುಟ್ಟು ನಿಮಗೆ ಗೊತ್ತಿಲ್ಲ. ಹೆಚ್ಚು ತಿಂದರ ಎಲ್ಲಿ ಮೈ ದಪ್ಪಗಾಗುವುದೋ ಎಂಬ ಭಯ ಅವರಿಗೆ."

ಮನಸ್ಸಿಗೆ ಸಕ್ಕದ್ದರು ಕುಸುಮಬಾಯಿ. ಆದರದ ಮಾತುಗಳ ಮಧ್ಯೆ ಬಡಿಸಿದ ತಿಂಡಿ, ಊಟಗಳು ಅಮೃತಕ್ಕೆ ಸಮವೆನಿಸಿದವು ಅವರಿಗೆ.

ಶಿವಶಂಕರ್ ಮುಕುಂದಜೋಶಿಯವರನ್ನು ಜೊತೆ ಮಾಡಿಕೊಂಡು ಹುಡುಗನ ತಂದೆ ಮನೆಗೆ ಹೊರಟ. ಮೊದಲು ತಾವು ಹೋಗಿ ಬಂದ ವಿಷಯವನ್ನು ತಿಳಿಸಿ ವಧುಪರೀಕ್ಷೆಯನ್ನು ಎಷ್ಟು ಹೊತ್ತಿಗೆ, ಎಲ್ಲಿ ನಡೆಸಬೇಕೆಂಬುದರ ಬಗ್ಗೆ ಅವರ ಮರ್ಜಿಯನ್ನು ತಿಳಿದುಕೊಂಡು ಮುಂದಿನ ಏರ್ಪಾಡುಗಳನ್ನು ನಡೆಸುವ ಯೋಜನೆ ಅವನದು.

ಜೋಶಿ ದಂಪತಿಗಳ ಆದರಾತಿಥ್ಯದಿಂದ ಹಗುರಾದ ಮನದೊಂದಿಗೆ ಬೀಗರ ಮನೆ ತಲುಪಿದಾಗ ಬೆರಗಾದ ಒಂದು ಕ್ಷಣ. ದೊಡ್ಡದಾದ ಹೂತೋಟದ ಹಿಂಬದಿಗೆ ಕಟ್ಟಿದ ಸುಂದರ, ಸುಸಜ್ಜಿತವಾದ, ಆಧುನಿಕ ರೀತಿಯಲ್ಲಿ ಕಟ್ಟಿದ ಮನೆ. ಹಾಗಾದರೆ ತುಂಬಾ ಅನುಕೂಲಸ್ಥರೇ

## ವನಿತಾ

### ಮಗುವಿನ 'ಹುಟ್ಟಿದ ಹಬ್ಬ'ಕ್ಕಾಗಿ ಭಾವಚಿತ್ರ ಕಳುಹಿಸುವವರ ಗಮನಕ್ಕೆ :

1. ಮಗುವಿನ ವಯಸ್ಸು ಒಂದು ವರ್ಷಕ್ಕಿಂತ ಹೆಚ್ಚು ಇರಕೂಡದು. 2. ಮಗುವಿನ ಪೂರ್ಣ ಚಿತ್ರವಿರುವ, ಪೋಸ್ಟ್ ಕಾರ್ಡ್ ಅಳತೆಯ ($3\frac{1}{2}'' \times 5\frac{1}{2}''$) ಫೋಟೋವನ್ನು ಯಾವ ತಿಂಗಳಲ್ಲಿ ಮಗುವಿಗೆ 'ಹುಟ್ಟಿದ ಹಬ್ಬ'. ಬರುವುದೋ ಅದರ ಹಿಂದಿನ ತಿಂಗಳ **1 ನೇ ತಾರೀಖಿನ** ಒಳಗೆ ನಮಗೆ ತಲುಪುವಂತೆ ಕಳುಹಿಸಬೇಕು. 3. ಫೋಟೋ ಹಿಂಬದಿಯಲ್ಲಿ ಮಗುವಿನ ಹೆಸರು, ಹುಟ್ಟಿದ ತಾರೀಖು, ತಾಯಿಯ ಹೆಸರು, ಪೂರ್ಣ ವಿಳಾಸಗಳನ್ನು ತಿಳಿಸಬೇಕು. ಇವುಗಳಲ್ಲಿ ಯಾವುದೊಂದು ಇಲ್ಲದಿದ್ದರೂ ಆ ಫೋಟೋವನ್ನು ಸ್ಪರ್ಧೆಗೆ ಆಯ್ಕೆ ಮಾಡಲಾಗುವುದಿಲ್ಲ. 4. ನಮ್ಮಲ್ಲಿ ಪ್ರಕಟಣೆಯಾದ ಫೋಟೋಗಳನ್ನು ಹಿಂದಿರುಗಿಸುವುದಿಲ್ಲ. 5. ಬಣ್ಣದ ಫೋಟೋಗಳನ್ನೇ ಕಳುಹಿಸಬೇಕು. ಪ್ರಕಟಣೆಯಾಗದ ಫೋಟೋಗಳನ್ನು ತಿರುಗಿ ಪಡೆಯಲಿಚ್ಛಿಸುವವರು ಆಯಾ ತಿಂಗಳು ಮುಗಿಯುವುದರೊಳಗಾಗಿ ಅಂಚೆ ಚೀಟಿ ಹಚ್ಚಿದ ಹಿಡಿಸುವ ಅಳತೆಯ ಕವರನ್ನು ನಮಗೆ ಕಳುಹಿಸಬೇಕು. ಆ ತಿಂಗಳ ನಂತರ ಫೋಟೋ ಹಿಂದಿರುಗಿಸಲು ವ್ಯವಹರಿಸಿದಲ್ಲಿ ಆ ಕುರಿತು ಖಂಡಿತವಾಗಿ ಗಮನ ಹರಿಸಲಾಗುವುದಿಲ್ಲ. ವಿಳಾಸ: 'ಹುಟ್ಟಿದ ಹಬ್ಬ' ವಿಭಾಗ, ವನಿತಾ, ಚಂದಮಾಮಾ ಬಿಲ್ಡಿಂಗ್ಸ್, ಮದರಾಸು-26.

ಇರಬಹುದು. ಲೆಕ್ಕಾಚಾರ ಹಾಕಿದ. ಒಂದುವೇಳೆ ಕುಸುಮಳನ್ನೇನಾದರೂ ಅವರು ಒಪ್ಪಿಬಿಟ್ಟರೆ ಅವಳ ಅದೃಷ್ಟಕ್ಕೆ ಎಣೆಯೆಲ್ಲಿ? ಕಷ್ಟಪಟ್ಟಾದರೂ ಈ ಮದುವೆಯನ್ನು ನಡೆಸಿಬಿಡಬೇಕು. ಮನದಲ್ಲೇ ಮಂಡಿಗೆ ತಿಂದ.

ಮೆಲುವಾಗಿ ಬಾಗಿಲು ಬಡಿದ ಸದ್ದಿಗೆ ಹಿಂದಿನಿಂದಲೇ ಧಪ, ಧಪನೆ ಹೆಜ್ಜೆಯ ಸದ್ದು ಕೇಳಿಸಿ ಬಾಗಿಲು ತೆರೆಯಿತು. ಅದೇಕೋ ದಢೂತಿ ದೇಹದ ಬಿಗಿದ ಮೋರೆಯ ಹೆಂಗಸಿನ ಮುಖ ನೋಡುತ್ತಲೇ ಒಂದು ಕ್ಷಣ ಮಾತಿಗಾಗಿ ತಡವರಿಸುವಂತಾಯಿತು.

"ನಮ್ಮ ಕಡಿಂದ ಏನಾಗಬೇಕಿತ್ರೀ?" ಗಡುಸಾದ ಧ್ವನಿಯಿಂದ ಎಚ್ಚೆತ್ತ ಶಿವೂ "ನಾನಮ್ಮಾ, ಶಿವಶಂಕರ, ಮೈಸೂರಿನಿಂದ ಬಂದಿದ್ದೀನಿ. ನಿಮ್ಮ ಮಗನಿಗೆ ನನ್ನ ತಂಗಿಯನ್ನು ತೋರಿಸಲು ಕರೆದುಕೊಂಡು ಬಂದಿದೀನಿ. ಹೋದವಾರವೇ ಬರಬೇಕಿತ್ತು. ಆದರೆ..."

ಬಂದವರನ್ನು ಒಳಗೆ ಕರೆಯುವಷ್ಟು ಸೌಜನ್ಯವನ್ನೂ ತೋರದೆ ಆಕೆ ಮೈಸೂರಿನವರೆನ್ನುತ್ತಲೇ ಮುಖ ದುಮ್ಮಿಸಿಕೊಂಡು "ಏನ್ರಪ್ಪಾ, ಎಂಥಾ ಮಂದಿ ನೀವು? ಹೋದವಾರ ಕನ್ಯಾ ತೋರಿಸಕ್ಕ ಕರಕೊಂಡು ಬನ್ರೀ ಅಂತ ನಾವು ಬರ್ದಿದ್ದಕ್ಕ ನಿಮ್ಮಿಂದ ಭಲೋ ಉತ್ತರಾನಾ ಸಿಕ್ಕಿತು ಬಿಡ್ರಿ. ಹೋದವಾರ ನಾವು ಎಲ್ಲಾ ಸಿದ್ಧತಾ ಮಾಡಿಕೊಂಡು ಕಾಯ್ದದ್ದೇ ಬಂತು. ನೀವೂ ಬರ್ಲಿಲ್ಲ. ಹೋಗಲಿ ಅಂದ್ರ ಹೀಗದ ವಿಷಯಾ ಅಂತ ಮುಂದಾಗಿ ಒಂದು ಮಾತು ತಿಳಿಸಿದ್ರಾ ನೀವು? ನೀವು ಬರುವುದಕ್ಕೆ ಸಾಧ್ಯವಿಲ್ಲವೆಂದು ಬರೆದ ಪತ್ರ ನಿನ್ನೆ ಪೋಸ್ಟಿನಾಗ ಬಂತು. ಅಷ್ಟರೊಳಗ ನಮ್ಮ ಯಜಮಾನರು ಹಾಗೂ ಹರೀಶ ಬಳ್ಳಾರಿಗೆ ನಮ್ಮ ಮೊದಲ ಮಗನ ಮನೆ ಹೊರಟಾಗಿತ್ತು. ನಿಮ್ಮ ವರ್ತನೆಗೆ ಭಾಳ ಬೇಸರವಾಯಿತು ಬಿಡ್ರಿ. ಅಲ್ರೀ, ಕನ್ಯಾ ತೋರಿಸುವ ವಿಷ್ಯದಾಗೇ ಇಷ್ಟು ಬೇಜವಾಬ್ದಾರಿತನ ಮಾಡಿದ್ರ ಇನ್ನು ನೀವು ಮದುವಿ ಹೆಂಗಪ್ಪಾ ಮಾಡ್ತೀರಿ?" ಕತ್ತೆ ಒದ್ದಂತೆ ಬಂದ ಮಾತುಗಳಿಗೆ ತತ್ತರಿಸಿ ಹೋದ ಶಿವಶಂಕರ.

ಸಂದರ್ಭದ ಅರಿವನ್ನು ನಿಧಾನವಾಗಿ ಮಾಡಿಕೊಳ್ಳಲೆತ್ನಿಸಿದವನು ತಬ್ಬಿಬ್ಬಾಗಿ ನುಡಿದ "ಛೇ! ನೀವು ಬಹಳ ಅಪಾರ್ಥ ಮಾಡಿಕೊಂಡು ಬಿಟ್ಟಿದೀರಿ. ನಾನು ನಿಮಗೆ ಬಹಳ ಮುಂದಾಗಿಯೇ ಪತ್ರ ಬರೆದಿದ್ದೆ. ಆದರೆ ಅಂಚೆಯವರ ದೋಷದಿಂದ ನಿಮಗೆ ತಡವಾಗಿ ತಲುಪಿರಬಹುದು. ಖಂಡಿತಾ ನನಗೆ ಈ ವಿಷಯ ಗೊತ್ತಿರಲಿಲ್ಲ. ನಿಜಕ್ಕೂ ನನಗೂ ಬಹಳ ಬೇಸರವಾಗ್ತಿದೆ ಕ್ಷಮಿಸಿ."

"ನೋಡ್ರಪ್ಪಾ, ಈಗ ನೀವು ಕ್ಷಮಾಪಣಾ ಕೇಳಿ ಏನು ಮಾಡೋ ಹಂಗಿದೀರಿ ಹೇಳ್ರಿ? ನಮಗಂತೂ ತ್ರಾಸಾಗೋದು ತಪ್ಪಿತೇನು? ಅದರ ಸಲುವಾಗೇ ಊರಿನಿಂದ ನಮ್ಮ ಹಿರೇ ಮಗಳು, ಕಿರೇ ಮಗಳು ಎಲ್ರನ್ನೂ ಕರೆಸಿಕೊಂಡಿದ್ದಾಯ್ತು. ಹರೀಶನ ಟೂರನ್ನೂ ಕ್ಯಾನ್ಸಲ್ ಮಾಡಿದ್ದಾಯ್ತು. ಅವರೆಲ್ಲಾ ಭಾಳಾ ಬೇಜಾರಿಂದ್ಲೇ ವಾಪಸ್ಸು ಹೋಗಂಗಾಯ್ತು. ಹೆಣ್ಣಿನವರಾಗಿ ನಿಮ್ಗ ಇಷ್ಟು ಕಾಳಜಿಯಿಲ್ಲಂದ್ರ ಹ್ಯಾಗೇಂತೀನಿ? ಸುಡುಗಾಡು ಪತ್ರದ ಬದಲು ತಕ್ಷಣ ಒಂದು ಟೆಲಿಗ್ರಾಂ ಹಚ್ಚಿದ್ರ ಇಷ್ಟೆಲ್ಲಾ ತಾಪತ್ರಯಾ ಇರ್ತಿರ್ಲಿಲ್ಲ ನೋಡ್ರಿ. ಸಕಾಲಕ್ಕೆ ನಮಗೆ ಸಮಾಚಾರ ತಿಳಿಯೂದು. ಈಗಲೇ ನೀವು ಕಾಸಿಗೆ ಮುಖಾ ನೋಡುವವರು ಮುಂದೆ ಮದುವಿ ಹ್ಯಾಂಗಪ್ಪಾ ಮಾಡ್ತೀರ್ರಿ? ಮನೀಲಿ ಹೆಣ್ಣು ಮಕ್ಕಳನ್ನು ಇಟಗೊಂಡೋರು ಇಷ್ಟೊಂದು ಕಂಜೂಸಿತನ ಮಾಡಿದ್ರ ಆಗ್ತದೇನಪ್ಪಾ? ನೀವು ಮೈಸೂರು ಕಡೀ ಮಂದೀನೆ ಹೀಂಗ ನೋಡ್ರಿ. ಮಾಡೋದು ಮಾಡಿ ಮ್ಯಾಲ ಬೆಣ್ಣೆ ಸವರ್ಲಿಕ್ಕ ನೋಡ್ತೀರಿ..." ಕೇಳಿಯೇ ಕೇಳಿದ ಶಿವಶಂಕರ. ಆಕ್ಷೇಪಣೆಗಳ ಸುರಿಮಳೆ ನಿಲ್ಲುವ ಸೂಚನೆಯೇ ಕಾಣಲಿಲ್ಲ. ನೀರ ಕಾಲಿನದನ್ನು ತೆಗೆದುಕೊಂಡು ಮುಖಕ್ಕೆ ಹೊಡೆದ ಅನುಭವ. ಅಪ್ಪ ಹೇಳಿದ್ದು ಸರಿ. ಎಷ್ಟು ಒರಟು ವರ್ತನೆ! ಒಂದು ಕ್ಷಣ ಬಂದಹಾಗೇ ಹಿಂದಿರುಗಿ ಬಿಡುವ ಮನಸ್ಸಾಯಿತು. ಹಾಳಾಗಿ ಹೋಗಲಿ.

ಈ ತಾಟಕಿಯೇನೋ ಹುಡುಗನ ತಾಯಿ. ಅತ್ತೆತನದ ದರ್ಬಾರು ಈಗಲೇ ತೋರಿಸುತ್ತಿದ್ದಾಳೆ. ಒಂದು ವೇಳೆ ಹುಡುಗ ಒಳ್ಳೆಯವನಾಗಿದ್ದರೂ ಇರಬಹುದು. ಅವನು ತಾನೇ ಮುಖ್ಯ ನಮಗೆ. ಅದನ್ನೂ ಪರೀಕ್ಷಿಸಿಯೇ ಬಿಡೋಣ ಎಂದೆನಿಸಿತು.

ಮನಸ್ಸನ್ನು ಸ್ವಲ್ಪ ತಹಬಂದಿಗೆ ತಂದುಕೊಂಡು ಜೋಶಿಯತ್ತ ತಿರುಗಿದ. "ಈಗೇನು ಮಾಡೋಣ? ಅವರಿಗೆ ಫೋನು ಮಾಡಿ ಇಲ್ಲಿಗೆ ಬರುವಂತೆ ತಿಳಿಸಿದರೆ ಹೇಗೆ ಜೋಶಿಯವರೆ?"

ಆಕೆಯ ಮಾತುಗಳನ್ನು ಕೇಳುತ್ತಾ, ಕೇಳುತ್ತಾ ಮರವಟ್ಟಂತೆ ನಿಂತಿದ್ದ ಜೋಶಿಯವರೂ ಸಂಭಾಳಿಸಿಕೊಳ್ಳುತ್ತಾ "ಹೌದು, ನೀವು ಛಲೋದಾಗೇ ಆಲೋಚನಾ ಮಾಡೀರಿ."

"ಅವ್ವಾ, ದಯವಿಟ್ಟು ನಿಮ್ಮ ಮಗನ ಮನೆಯಲ್ಲಿ ಫೋನ್ ಇದ್ದರೆ ನಮಗೆ ನಂಬರ್ ಕೊಡ್ರಿ. ಬಳ್ಳಾರಿ ಇಲ್ಲಿಂದ ದೂರವೇನಿಲ್ಲ. ಮುಂದಿನ ಬಸ್ಸಿನಾಗ ಬರಬಹುದು. ಏನೋ ಪಾಪ! ಅಲ್ಲಿಂದ ಈ ಕಾರ್ಯಕ್ಕಾಗಿ ಬಂದಾರ. ಅದು ನಡೀತಂದ್ರ ಅವರ ಮನಸ್ಸಿಗೂ ಸಮಾಧಾನ." ಜೋಶಿಯವರು ತಿಪ್ಪೆ ಸಾರಿಸಿದರು.

ಆಕೆ ಒಂದು ರೀತಿಯ ತಿರಸ್ಕಾರ ಬೆರೆತ ದನಿಯಿಂದ ಏನೋ "ಫೋನ್ ನಂಬರೇನೋ ಕೊಡ್ತೀನ್ರಿ. ಅವನಿಗೆ ಅನುಕೂಲವಿತ್ತು, ಅಂದ್ರ ಬರತಾನ ಇಲ್ಲಂದ್ರ ಇಲ್ಲ. ಯಾವ್ದೂ ನಿಶ್ಚಯವಾಗಿ ಹೇಳಲಿಕ್ಕೆ ಬರೋದಿಲ್ಲ". ನೀವು ಮಾಡಿದ ತಪ್ಪಿಗೆ ನೀವೇ ಅನುಭವಿಸಿ ಎಂಬಂತೆ ಹೇಳಿದ ಮಾತುಗಳು ನೇರವಾಗಿ ನಾಟಿದವು.

ಛೀ! ಎಂತಹ ಅನಾಗರಿಕ ವರ್ತನೆ? ಸ್ವಲ್ಪವಾದರೂ ನಯ ನಜೂಕಿಲ್ಲದ ಒರಟು ಮಾತುಗಳು. ತಾವಾದರೂ ಇದು ಬೇಕೆಂದು ಮಾಡಿದ ತಪ್ಪೆ? ಅಷ್ಟು ಮುಂದಾಗಿಯೇ ಬರೆದ ಪತ್ರ ಇಷ್ಟು ತಡವಾಗಿ ತಲುಪಬಹುದೆಂದು ತಾನೇನು ಕನಸು ಕಂಡಿದ್ದನೆ? ಕಂಡಿದಿದ್ದರೆ ಖಂಡಿತಾ ಅವರಿಂದ ಹಾಗೆ ಟೆಲಿಗ್ರಾಮನ್ನೇ ಕಳುಹಿಸಿಬಿಡುತ್ತಿದ್ದೆ. ಇದರಿಂದ ಅವರಿಗೆ ತೊಂದರೆಯಾಗಿರುವುದು ನಿಜ. ಆದರೆ ಅದನ್ನು ಹೇಳುವುದಕ್ಕೂ ಒಂದು ರೀತಿ ನೀತಿ ಬೇಡವೆ? ಇವರ ಸಹವಾಸವೂ ಸಾಕು, ಸಂಬಂಧವೂ ಸಾಕು. ಕುಸುಮಳದೋ ಮೊದಲೇ ಸೂಕ್ಷ್ಮವಾದ ಪ್ರಕೃತಿ. ಈ ವಿಷಯಗಳು ಅವಳ ಕಿವಿಗೆ ಬಿದ್ದರೆ ಎಷ್ಟು ನೊಂದುಕೊಳ್ಳುವಳೋ? ಸುಮ್ಮನೆ ರಾತ್ರಿ ಬಸ್ಸಿಗೆ ಊರಿಗೆ ಹೊರಟುಬಿಡುವುದು. "ಯೋಚನೆ ಮಾಡಬೇಡ್ರಪ್ಪಾ, ಮುಂದಿನ ಹಾದಿ ನೋಡೋಣ ಬನ್ರಿ. ಯಾವುದಕ್ಕೂ ಫೋನು ಮಾಡೇಬಿಡೋಣ ಒಮ್ಮೆ. ಏನು ಮಾಡೂದು? ಹೆಣ್ಣು ಹಡದವರ ಹಣೇ ಬರಹಾನ ಇಷ್ಟು. ಹಾಗಂತ' ಸುಮ್ನೆ ಕೂಡೂ ಹಂಗಿಲ್ಲ ನೋಡ್ರಿ." ಜೋಶಿಯವರು ಮೆಲ್ಲನೆ ಬೆನ್ನು ತಟ್ಟಿದಾಗ ಯೋಚನೆಗಳ ಗುಂಗಿನಿಂದ ಹೊರಬಂದ ಶಿವೂ.

ಫೋನು ಕೈಗೆತ್ತಿದಾಗೊಮ್ಮೆ ಮನ ಚಡಪಡಿಸಿತು. ಎಲ್ಲಿ ಮತ್ತೊಮ್ಮೆ ಬಿರುನುಡಿಗಳ ಪುನರಾವರ್ತನೆಯಾಗುವುದೋ ಎಂದು. ಎಷ್ಟಾದರೂ ಎಜ್ಯುಕೇಟೆಡ್ ವರ. ಅವನಿಗಾದರೂ ನಯ ವಿನಯಗಳ ಗಂಧವಿರಬಹುದೇನೋ ಅನಿಸಿತು ಮನ. ಲೈನಿನ ಮೇಲೆ ಹರೀಶನೇ ಸಿಕ್ಕಿದುದು ಶಿವೂನ ಪುಣ್ಯ.

"ಹಲೋ, ನಾನು ಶಿವಶಂಕರ್ ಮಾತಾಡ್ತಿರೋದು, ಮೈಸೂರಿನಿಂದ..." ವಿಷಯಗಳ ವಿವರಣೆ ತಿಳಿಯುತ್ತಲೇ ಆ ಕಡೆಯಿಂದ ಗುಡುಗಿನಂತಹುದೊಂದು ಧ್ವನಿ ಮೊಳಗಿತು. "ಏನ್ರೀ, ನೀವು? ನಮ್ಮನ್ನು ಏನೂಂತ ತಿಳ್ಕೊಂಡಿದೀರಿ? ಈಗಲೇ ಹೀಗೆ ಬೇಕಾಬಿಟ್ಟೆ ವ್ಯವಸ್ಥಾ ಮಾಡಿದರ, ಮುಂದೆ ನಮಗೇನು ಮರ್ಯಾದಿ ಸಿಗಬಹುದು ಹೇಳ್ರಿ? ನೀವು ಕರೆದಾಗ ಬರಲಿಕ್ಕೆ ನನಗೆ ಸಾಧ್ಯಾ ಇಲ್ಲರೀ. ಇನ್ನು ಮುಂದಿನ ವಾರವೇ ನಾನು ಹೊಸಪೇಟೆಗೆ ಬರುವುದು. ಆಗಬೇಕೆಂದ್ರೆ ಕರೆದುಕೊಂಡು ಬನ್ನಿ. ಇಲ್ಲಾಂದ್ರ ನಿಮ್ಮಿಷ್ಟ."

"ಅಬ್ಬಬ್ಬಾ! ಒಟ್ಟಿಗೆ ಗುಡುಗು, ಮಿಂಚು ಸಿಡಿಲುಗಳ ಸಮೇತ ಸುರಿಮಳೆ ಸುರಿದು ಒಮ್ಮೆಲೇ ನಿಂತಂತಾಯ್ತು. ಸರಿ, ಇನ್ನು ಹುಡುಗನ ಬಂಡವಾಳವೂ ತಿಳಿದ ಹಾಗಾಯ್ತು. ವ್ಯಕ್ತಿಯ ಎಜ್ಯುಕೇಷನ್ನಿಗೂ ಆತನ ಹೃದಯ ಸಂಸ್ಕಾರಕ್ಕೂ ಅರ್ಥಾರ್ಥ ಸಂಬಂಧವಿಲ್ಲವೆಂಬ ಸತ್ಯದ ಅರಿವಾಯ್ತು ಶಿವೂಗೆ.

ಮೌನವಾಗಿ ಮನೆ ಸೇರಿದವರನ್ನು ಕಂಡು ಕುಸುಮಳಿಗೂ, ಅಂಬಿಕೆಗೂ ಅಚ್ಚರಿಯಾಯಿತು. ಜೋಶಿಯವರೇ ನಿಧಾನವಾಗಿ ಪ್ರಸಂಗವನ್ನು ವಿವರಿಸಿದಾಗ ಕುಸುಮಳಿಗೆ ದುಃಖದಿಂದ ಕಣ್ಣಿನಲ್ಲಿ ನೀರು ತುಂಬಿತು. ದುಃಖ ಅವಳಿಗಾಗಿ ಅಲ್ಲ. ತನ್ನಿಂದಾಗಿ ಶಿವೂಗೆ ಎಂತಹಾ ಅವಮಾನ? ನೋವಿನಿಂದ ನರಳಿತು ಮನ.

"ಛೇ! ನೀನ್ಯಾಕ ಕಣ್ಣಿನಲ್ಲಿ ನೀರು ಹಾಕ್ಕೋತೀಯಾ ಕುಸುಮಾ? ಇಂತಹಾ ಮಂದಿ ಎಷ್ಟಿದಾರೋ ಪ್ರಪಂಚದಾಗ? ಇಂತಹವರ ಸಂಬಂಧ ಮುರಿದದ್ದು ಛಲೋದಾಯ್ತು. ಇವನಲ್ಲದಿದ್ರ ಇವನಪ್ಪನಂತೋನು ಸಿಗ್ತಾನ. ನೀ ಕಲಿತಾಕಿ ಇದ್ದೀ, ಶಾಣ್ಯಾಕಿ ಇದ್ದಿ, ನಿಂಗೇನರೆ ನಾವು ಹೇಳಬೇಕೇನು? ಮದುವಿ ನಿಧಾನವಾದಷ್ಟೂ ಛಲೋ ಸಂಬಂಧ ಒದಗ್ತದಂತ ಹಿರೇರು ಹೇಳ್ತಾರ. ಯೋಚನೆ ಮಾಡಬ್ಯಾಡ. ಏಳೇಳು..." ಅವರ ಸಮಾಧಾನಕ್ಕೆ ನಕ್ಕಳು ಕುಸುಮಾ. ಶಿವಶಂಕರ ರಾತ್ರಿಯ ರೈಲಿಗೆ ರಿಸರ್ವೇಷನ್ ಮಾಡಿಸಿಕೊಂಡು ಬಂದ. ನಡೆದ ಕಹಿ ಪ್ರಸಂಗದಿಂದ ಮೂವರಿಗೂ ನೋವಾಗಿತ್ತು. ಹಂಪೆ ಹಾಗೂ ಡ್ಯಾಮಿಗೆ ಹೋಗುವ ಉತ್ಸಾಹವೂ ಉಳಿದಿರಲಿಲ್ಲ.

ಮಧ್ಯಾಹ್ನ ಕಾಫಿ ಕುಡಿದು ಎಲ್ಲರೂ ಕುಳಿತಿರುವಾಗ ಇದ್ದಕ್ಕಿದ್ದಂತೆಯೇ 'ಮೌಸೀ' ಎಂದು ಕೂಗುತ್ತಾ ಯುವಕನೊಬ್ಬ ಒಳಗಡಿಯಿಟ್ಟಾಗ ಸಂಕೋಚದಿಂದ ಕುಸುಮಾ ಸೋಫಾದಲ್ಲಿ ಮುದುಡಿ ಕುಳಿತಳು, ಯಾರೋ ಜೋಶಿ ದಂಪತಿಗಳ ಪರಿಚಯದವರಿರಬೇಕೆಂದೂಹಿಸಿದ ಶಿವೂ ಮತ್ತೆ ಪೇಪರಿನಲ್ಲಿ ತಲೆ ಹುದುಗಿಸಿದ.

"ಓಹೋ! ಜಗದೀಶಾ...ಬಾಪ್ಪಾ, ಒಳಗ ಬಾ. ಎಂದು ಬೆಂಗ್ಳೂರಿಂದ ಬಂದೀ? ಲಗ್ನ ಎಂದಿಗೆ ನಿಷ್ಕರ್ಷೆಯಾಯ್ತಪ್ಪಾ? ವಿಷಯ ಕೇಳಬೇಕಂತ ನಾನೇ ಬರೋಳಿದ್ದೆ. ಆದರ ಮನೀಗೆ ಅತಿಥಿಗಳು ಬಂದಾಗ ಹ್ಯಾಗ ಬರೋದಂತ ಸುಮ್ಮಾಗಾಗಿದ್ದೆ. ನೀನು ಬರದಿದ್ರೂ ನಾಳೆ, ನಾಡಿದ್ದರಲ್ಲಿ ನಾನು ಬರೋಳಿದ್ದೆ ನೋಡು."

ಅತ್ಯುತ್ಸಾಹದಿಂದ ಪ್ರಶ್ನಿಸುತ್ತಿದ್ದ ಕುಸುಮಾಬಾಯಿಯವರನ್ನು ಅರ್ಧದಲ್ಲೇ ತಡೆದು ಜಗದೀಶ ಹೇಳಿದ. "ಹ್ಞಾ...ನಾನು ಮೊನ್ನೆಯೇ ಬಂದೆ ಮೌಸಿ. ಆದರೆ ಮದುವೆ ಮಾತು ಗಟ್ಟಿಯಾಗಲಿಲ್ಲ."

"ಹಾ? ಹಾಗಂದ್ರೇನಪ್ಪಾ ಅರ್ಥ? ಹುಡುಗೀನ್ನ ನೋಡಿ ಒಪ್ಪಿ, ಜಾತಕ ಕೂಡಾ ಕೂಡಿಬಂದಿದ್ವಲ್ಲಾ. ಏನಪ್ಪಾ, ನೀನೇನರೆ ಕಾರು ಗೀರು ಬಳುವಳಿ ಕೇಳಿದ್ಯೇನು ಮತ್ತೆ? ಮಾತು ಮುರಿಯೋ ಅಂತ ಕಾರಣ ಏನು? ಹೆಚ್ಚೂ-ಕಡಿಮಿ ಈ ಸಂಬಂಧ ಆದಂಗೇ ಅಂತ ಸುಶೀಲ ಕೂಡಾ ಹೇಳಿದ್ಲು."

"ಛೇ! ಛೇ! ಏನು ತಮಾಷೆ ಮಾಡ್ತೀ



## ಛದ್ಮವೇಷ ಚತುರೆ, ವಿನಿತಾ ಕಾಮತ

ಯಾವ ರೀತಿಯ ವೇಷವನ್ನೇ ಹಾಕಿದರೂ ಅದಕ್ಕೆ ನ್ಯಾಯ ಒದಗಿಸುವಂತಹ ರೂಪು ಹಾಗೂ ರಕ್ತಗತವಾಗಿರುವ ಭಾವಾಭಿನಯದ ಹುಡುಗಿ ಕುಮಾರಿ ವಿನಿತಾ.

ಕಾರವಾರದ ಸೌಂದರ್ಯವನ್ನೆ ತನ್ನೊಳಗೆ ಹುದುಗಿಸಿಕೊಂಡಿರುವ ವಿಶಾಲ, ಹೊಳಪು ಕಂಗಳಿನ ವಿನಿತಾ 5 ವರ್ಷದ ಬಾಲೆ. ಅಂಕೋಲಾ ತಾಲೂಕಿನ, ಕುಂಬಾರ ಕೇರಿ ಎಂಬ ಊರಿನ ಅಂಗನವಾಡಿ ವಿದ್ಯಾರ್ಥಿನಿ. ಕಳೆದ ವರ್ಷದಂತೆ ಈ ಬಾರಿಯೂ ಮಕ್ಕಳ ದಿನಾಚರಣೆ ಅಂಗವಾಗಿ ನಡೆದ ಛದ್ಮವೇಷ ಸ್ಪರ್ಧೆಯಲ್ಲಿ ತನ್ನ ಪ್ರಥಮ ಸ್ಥಾನವನ್ನು ಬೇರೆಯವರಿಗೆ ಬಿಟ್ಟುಕೊಡದ ಛದ್ಮವೇಷ ಚತುರೆ.

ವಿನಿತಾಳ ಪ್ರತಿಭೆಗೆ ಅವಳ ಹೆತ್ತವರ ಪ್ರೋತ್ಸಾಹವೂ ನಿರಂತರವಾಗಿದೆ. "ಬೆಳೆಯುವ ಸಿರಿ ಮೊಳಕೆಯಲ್ಲೇ" ಎಂಬಂತೆ ತಾನೊಬ್ಬ ಸಮರ್ಥ ಕಲಾವಿದೆಯಾಗಬಲ್ಲೆ ಎಂದು ತೋರ್ಪಡಿಸಿದ ಈ ಬಾಲಿಕೆ ಕಾರವಾರ ಜಿಲ್ಲೆಯ, ಅಂಕೋಲಾ ತಾಲೂಕಿನ "ವೆಲಕಮ್" ಹೋಟೇಲ್ ಮಾಲಿಕರಾದ ಶ್ರೀ ವಸಂತ ಕಾಮತರ ಹೆಮ್ಮೆಯ ಪುತ್ಥಳಿ.

**—ಮಂಗಳಾ ಬಳ್ಳಾರಿ, ಧಾರವಾಡ**

ರೇನು ಮೌಸಿ ? ನನ್ನ ಸ್ವಭಾವ ನಿಮಗೆ ಹೊಸ ತೇನು ? ಕಾರಣ ಬಹಳ ಸಿಂಪಲ್. ಹುಡುಗಿ ನೌಕರಿಯೊಳಗೆ ಇದ್ದಳೆಂದು ನಿಮ್ಗೆ ಹೇಳಿದ್ದೆನಲ್ಲಾ. ಮದುವೆಯಾದ ಮೇಲೆ ನೌಕರಿಗೋಗೋದು ನನಗಿಷ್ಟವಿಲ್ಲವೆಂದೆ. ನನಗೇನೋ ನನ್ನ ಕೈ ಹಿಡಿಯುವ ಹುಡುಗಿ ಮನೆಗೆ ಗೃಹಿಣಿಯಾಗಿ, ಮಕ್ಕಳಿಗೆ ತಾಯಾಗಿ ಇದ್ರೆ ಸಾಕು ಅಂತ ಇಷ್ಟ. ಇಷ್ಟಕ್ಕೂ ನನಗೇ ಕೈತುಂಬಾ ಸಂಬಳ ಬರುವ ನೌಕರಿಯಿರುವಾಗ ಆಕೆ ಹೊರಗೆ ಹೋಗಿ ದುಡಿಯುವ ಅಗತ್ಯ ಏನು ಹೇಳಿ ? ಆಕೆಯದು ಒಂದೇ ಹಠ. ನೌಕರಿ ಬಿಡಲು ಆಕೆಗೆ ಮನಸ್ಸಿಲ್ಲ ವಂತೆ. ಅವರಿಷ್ಟಕ್ಕಾಗಿ ನಾನು ನನ್ನ ಸ್ವಂತ ಅಭಿಪ್ರಾಯಗಳನ್ನು ದೂರ ತಳ್ಳಲಾದೀತೇ ? ಹೀಗಾಗಿ ಸಂಬಂಧ ಕೈಬಿಡಬೇಕಾಯ್ತು."

'ಇದೇನಿದು ವಿಪರ್‍ಯಾಸ ? ಹೆಂಡತಿಯು ಸಂಪಾದಿಸುತ್ತೇನೆಂದರೆ ಬೇಡವೆನ್ನುವ ಗಂಡೂ ಉಂಟೆ ?' ಮೆಚ್ಚುಗೆಯಿಂದ ಶಿವಶಂಕರನ ಕಣ್ಣು ಗಳು ಪೇಪರಿನಿಂದ ಮೇಲೆತ್ತಿದವು. ಯಾರೋ ಏನೋ, ಹುಡುಗ ಲಕ್ಷಣವಾಗಿದಾನೆ. ನಮ್ಮ ಕುಸುಮಳಿಗೆ ಸರಿಯಾದ ಜೋಡಿ. ತಕ್ಷಣವೇ ಛೇ ! ತಾನೋ ತನ್ನ ಕಲ್ಪನೆಗಳೋ ? ಹುಡುಗ ಯಾವ ಜಾತಿಯೋ, ಜನವೋ ? ಮನಸ್ಸು ಕಡಿವಾಣ ಹಾಕಿತು.

"ಅಕ್ಕನಿಗೆ ಒಂದೇ ಆತುರ. ಆದಷ್ಟು ಬೇಗ ಮದುವೆ ಮಾಡಿಬಿಡಬೇಕು ಅನ್ನೂದೇ. ಆದರೆ ಎಲ್ಲಾ ವಿಷಯಗಳೂ ಮನಸ್ಸಿಗೆ ಒಪ್ಪಬೇಡವೇ ? ನನಗೆ ಈಗ ಅಪ್ಪ-ಅಮ್ಮ ಎಲ್ಲಾ ಅವಳೇ ಆಗಿರುವು ದರಿಂದ ಅವಳ ಮಾತನ್ನು ಮೀರುವ ಹಾಗೆಯೇ ಇಲ್ಲ ಮೌಸಿ" ನಗೆಯಾಡಿದ.

ಕುಸುಮಾಬಾಯಿಯವರ ಗಮನ ಥಟ್ಟನೆ ಶಿವಶಂಕರನ ಕಡೆ ಹರಿಯಿತು. . ಛೇ ! ಜಗದೀಶ ನೊಡನೆ ಮಾತುಕಥೆಯ ಮಧ್ಯೆ ಇವರನ್ನು ಪರಿಚಯಿಸುವುದೇ ಮರೆತೆನಲ್ಲಾ !

"ಜಗ್ಗೂ, ಇವರು ನಮ್ಮ ಕಕ್ಕನ ಊರಿನಿಂದ ಬಂದಿದ್ದಾರೆ. ಶಿವಶಂಕರ ಅಂತ. ಈಕಿ ಅವರ ಹೆಂಡತಿ ಅಂಬಿಕಾ, ಅವಳು ಅವರ ತಂಗಿ ಕುಸುಮಾ. ಬಿ. ಎ. ಕಲಿತಾಳ, ಸಂಗೀತ ಛಲೋದಾಗಿ ಹಾಡ್ತಾಳ." 'ಇದೇನಿದು ? ಕನ್ಯಾಪರೀಕ್ಷೆಗೆ ಕುಳಿತ ಹುಡುಗಿಯ ವಿವರಗಳನ್ನು ತಿಳಿಸುವಂತೆ ಹೇಳು ತ್ತಿದ್ದೇನಲ್ಲವೇ ? ತಡೆದರು ಒಂದು ಕ್ಷಣ. ಮರು ಕ್ಷಣದಲ್ಲೇ ಮತ್ತೇನೋ ಹೊಳೆಯಿತು. ಹೌದು ! ಏಕಾಗಬಾರದು ? ಹುಡುಗ, ಹುಡುಗಿಯರಿಬ್ಬರೂ ತನಗೆ ಪರಿಚಿತರೇ. ಹುಡುಗನೂ ನಮ್ಮ ಪೈಕಿ ಯವನೇ. ಹೇಗೂ ಜಗದೀಶನು ನೋಡಿದ್ದ ಸಂಬಂಧ ಮುರಿಯಿತೆಂದ ಮೇಲೆ ಈ ಸಂಬಂಧವೇ ಯಾಕಾಗಬಾರದು ? ನಾನು ಶಿಫಾರಸು ಮಾಡಿದರೆ ಸುಶೀಲಾಳೂ ಬೇಡವೆನ್ನಲಾರಳು. ಇಂತಹ ವಿಷಯಗಳಲ್ಲಿ ದಾಕ್ಷಿಣ್ಯ ಸಲ್ಲದು. ನೇರವಾಗಿ ಕೇಳಿಯೇ ಬಿಟ್ಟರಾಯಿತು. ತನ್ನ ನೆಪದಿಂದ ಒಂದು ಹೆಣ್ಣಿನ ಕನ್ಯಾಸೆರೆ ಬಿಡಿಸಿದ ಹಾಗಾದರೆ ಅದಕ್ಕಿಂತಾ ಸಂತೋಷ ಇನ್ನೇನು ?'

ನಿರ್ಧರಿಸಿದ ಕುಸುಮಾಬಾಯಿಯವರು "ಶಿವ ಶಂಕರರಾಯರ, ಈ ಹುಡುಗ ನಮಗೆ ದೂರದ ಸಂಬಂಧಿಯಾಗಬೇಕು. ಇವನ ಅಕ್ಕ ಸುಶೀಲಾ ಇದೇ ಊರಾಗ ಅದಾಳ. ಆಕಿ ಗಂಡ ಲೆಕ್ಚರರ್. ಚಿಕ್ಕ ವಯಸ್ಸಿನಲ್ಲೇ ತಂದೆ,

# ದಾರಿ....







ತಾಯಿಯರನ್ನು ಕಳೆದುಕೊಂಡ ತಬ್ಬಲಿಗಳು ಇವರು. ಜಗದೀಶ ತುಂಬಾ ಕಷ್ಟಪಟ್ಟು ಸ್ವಂತ ಶ್ರಮದಿಂದ ಮುಂದ ಬಂದಾನ. ಬೆಂಗಳೂರಿನಾಗ ಕೆನರಾ ಬ್ಯಾಂಕಿನಾಗ ನೌಕರಿ. ನಮ್ಮ ಹುಡುಗನೆಂತ ನಾನು ಹೊಗಳೂದಿಲ್ಲ. ನೋಡ್ರಿ, ವಿದ್ಯಾ, ವಿನಯಾ ಯಾವುದರಾಗೂ ತೆಗೆದು ಹಾಕೋ ಹಾಗಿಲ್ಲ. ಏನೋ ಕಷ್ಟದಲ್ಲೇ ಬೆಳೆದು ಬಂದು ದಕ್ಕೋ ಏನೋ ಅವನಿಗೆ ಆಡಂಬರ, ಅಬ್ಬರದ ಜೀವನ ಹಿಡಿಸೂದಿಲ್ಲ. ಬಹಳ ಸರಳತನ ಬಯಸ್ತಾನ. ನಿಮ್ಮ ಕುಸುಮಾನ ನೋಡಿದಾಗ ಅವಳ ಸ್ವಭಾವ ಇವನಿಗೆ ಹೊಂದಿಕೆಯಾಗಬಹು ದೆಂದು ಮನಸ್ಸಿಗೆ ಭಾವನಾ ಬಂತು. ನೋಡಿ, ನಿಮ್ಮ ಮನಸ್ಸಿಗೂ ಎಲ್ಲಾ ಹಿಡಿಸಿತಂದ್ರ ಮುಂದು ವರೆದರೆ ಸರಿ. ಇಲ್ಲಿ ಯಾರದೂ ಬಲವಂತವಿಲ್ಲ. ನಿಧಾನ ಯೋಚನಾ ಮಾಡಿ ನೋಡ್ರಿ."

"ನೋಡು ಜಗದೀಶಾ, ನಿನ್ನನ್ನು ಮಾತ್ರಾ ಹೊಗಳಿದೆನೆಂದುಕೋ ಬೇಡ. ಕುಸುಮಾ ಕೂಡಾ ನಮಗೆ ಹೊರಗಿನಾಕಿ ಅಲ್ಲ. ತಿಳಿದ ಮನೆತನ. ಹುಡುಗಿ ಭಾಳ ನಿಧಾನಸ್ತೆ. ಏನೋ ಒಂದು ಕ್ಷಣ ನನ್ನ ಮನಸ್ಸಿಗೆ ಪ್ರೇರೇಪಣೆಯಾಯಿತು. ದೈವೇಚ್ಛೆ ಹೇಗಿದೆಯೋ ? ನಿನಗೂ ಹಿಡಿಸಿತಂದ್ರ ಹೇಳು, ಜಾತಕ ನೋಡಿಸಿ ಬಿಡೋಣ. ಸುಶೀಲಾ, ಶ್ರೀಕಂಠನ್ನ ಕರೆಸೋಣ. ಸಾವಕಾಶ ಆಲೋಚನೆ ಮಾಡಿ ಹೇಳು."

ಇದೇನು ಕೇಳುತ್ತಿರುವುದು ಕನಸೋ ನನಸೋ. ಅರಿವಾಗದ ದಿಗ್ಭ್ರಮೆಯಲ್ಲಿ ತೇಲಿ ಹೋದರು ಮೂವರೂ. ಕುಸುಮಳ ನೋಟ ಕ್ಷಣ, ಜಗದೀಶನ ನೋಟದೊಡನೆ ಬೆರೆತು ತಲೆತಗ್ಗಿ ಸಿದಳು.

ಶಿವೂ ಸಂತೋಷ ತುಂಬಿದ ಹೃದಯದಿಂದ ನುಡಿದ. "ನೀವು ನಮ್ಮ ಹಿತೈಷಿಗಳು. ನೀವು ಹೇಳಿದ ಮೇಲೆ ನಮ್ಮ ಮನಸ್ಸಿಗೆ ತುಂಬಾ ಸಮಾಧಾನವಾಗಿದೆ. ನಿಮ್ಮ ಮಾತಿನ ಮೇಲೆ ಭರವಸೆಯಿದೆ. ಆಗಲಿ, ಅವರ ಮನೆಯವ ರೆಲ್ಲರೂ ಒಪ್ಪಿ, ಜಾತಕಗಳೂ ಕೂಡಿ ಬಂದರೆ ನಮ್ಮ ಅಭ್ಯಂತರವೇನಿಲ್ಲ. ಬದಲಿಗೆ ನಮ್ಮ ಅದೃಷ್ಟವೆಂದುಕೊಳ್ಳುತ್ತೇವೆ."

"ಅದಕ್ಕೇನಂತ ? ಎಲ್ಲರೂ ಇಲ್ಲೇ ಇರೋವಾಗ ಚಿಂತೆಯೇನು ? ಜಗದೀಶಾ, ಲಗೂನ ಹೋಗಿ ನೀನು ಅಕ್ಕ, ಭಾವನನ್ನು ಕರೆದುಕೊಂಡು ಬಂದು ಬಿಡು. ಅಷ್ಟರೊಳಗೆ ನಾನು ಕಾಫಿ, ತಿಂಡಿಯ ವ್ಯವಸ್ಥಾ ಮಾಡ್ತೇನೆ." ತಮ್ಮ ಮಗಳ ಮದುವೆ ಯೇನೋ ಎನ್ನುವಷ್ಟು ಹಿಗ್ಗಿನಿಂದ ಸಂಭ್ರಮಿಸು ತ್ತಿರುವುದನ್ನು ಕಂಡ ಜಗದೀಶನ ಹೃದಯ ತುಂಬಿ, ಕಣ್ತುಂಬಿ ಬಂತು ಕೃತಜ್ಞತೆಯಿಂದ. ಇವರ್‍ಯಾರೋ ? ನಾನ್ಯಾರೋ ? ಒಂದು ದಿನದಲ್ಲಿ ಪರಿಚಯವಾದ ನಮ್ಮ ಬಗ್ಗೆ ಅದೆಷ್ಟು ವಾತ್ಸಲ್ಯ? ಇಂತಹಾ ಒಂದು ಆತ್ಮೀಯತೆ ? ಬೆಳಗ್ಗೆ ಹರೀಶನ ಮನೆಯಲ್ಲಿ ನಡೆದ ಕಹಿ ಪ್ರಸಂಗದ ನೆನಪು ಬೇಡ ವೆಂದರೂ ನುಗ್ಗಿ ಬಂತು. ಯಾವ ದೇಶವಾದ ರೇನು. ಯಾವ ಭಾಷೆಯಾದರೇನು ? ಮನುಷ್ಯನ ನಡವಳಿಕೆ, ಸ್ವಭಾವಗಳಿಗೆ ಕೇವಲ ಆತನ ಹೃದಯದ ಸಂಸ್ಕಾರವೇ ಕಾರಣ ಅಷ್ಟೇ. ಮಾನವೀಯ ಪ್ರಜ್ಞೆಯುಳ್ಳ ಮನುಷ್ಯ ಎಲ್ಲಿದ್ದರೂ ಅವನು ಮನುಷ್ಯನೇ ಆಗಿರುತ್ತಾನೆ. ಮನುಷ್ಯನ ನಡವಳಿಕೆ ಭಾವಗಳಿಗೆ ದೇಶ, ಪ್ರಾಂತ್ಯಗಳ ಸಂಬಂಧ ಕಲ್ಪಿ ಸುವುದು ಕೇವಲ ಮೂರ್ಖತನವೇ ಆಗುತ್ತದೆ. ಶಿವಶಂಕರನ ಆಲೋಚನೆ ಸಾಗುತ್ತಲೇ ಇತ್ತು.

"ರೀ, ಅವರ ಮನೆಯವರು ಬಂದರೂಂತ ಕಾಣತ್ತೆ ನೋಡ್ರೀ..." ಅಂಬಿಕಾ ಬೆನ್ನು ತಟ್ಟಿ ಎಚ್ಚರಿಸಿದಾಗ ಗುಂಗಿನಿಂದ ಹೊರಬಂದ ಶಿವೂ.

ಮುಂದಿನದೆಲ್ಲಾ ಯಾರೂ ಎಣಿಸದ ರೀತಿಯಲ್ಲಿ ಸುಲಭವಾಗಿ ನಡೆದುಹೋಯಿತು. ಜಗದೀಶನ ಅಕ್ಕ, ಭಾವ ತುಂಬಾ ನೇರ ಮಾತಿನವರು. ಅವರಿಗೆ ಕುಸುಮಾ ಹಾಗೂ ಮನೆಯವರು ಮೆಚ್ಚುಗೆಯಾದರು.

"ನೋಡ್ರೀ, ನಮಗೇನೋ ನಿಮ್ಮಗಳ ಸಂಬಂಧ ಭಾಳ ಹಿಡಿಸಿದೆ. ಜಗದೀಶನೂ ಕನ್ಯಾ ನೋಡಿ ಒಪ್ಪಿದ್ದಾನ. ಮೌಸಿ ಹೇಳಿದರೆಂದ ಮೇಲೆ ಬೇರೆ ಮಾತೇ ಇಲ್ಲ. ಆದರೆ ಒಂದೇ ಒಂದು ಮಾತು. ನಮ್ಮ ಕಡೆ ಹೆಚ್ಚು ಬಳಗವಿಲ್ಲ. ನಮಗೆ ಬಹಳ ಸರಳವಾಗಿ ಲಗ್ನ ಮಾಡಿಕೊಡಬೇಕು. ಜಗದೀಶನ ಇಚ್ಛಾ ಕೂಡಾ ಅದೇ. ಮಿಕ್ಕ ವಿಷಯವೆಲ್ಲಾ ನಿಮ್ಮ ಮರ್ಜಿಗೇ ಬಿಟ್ಟಿದ್ದು. ಜಗ್ಗೂನ ಜಾತಕ ತಂದಿದೇವೆ. ನಮಗೆ ಅದೇನೂ ತೋರಿಸುವ ಅಗತ್ಯಾ ಇಲ್ಲ. ನೀವ ಬೇಕಂದ್ರ ಒಮ್ಮೆ ತೋರಿಸಿ ಕೊಳ್ರಿ. ನಮಗೇನೂ ಅಭ್ಯಂತರ ಇಲ್ಲ."

# ಕುಮಾರಿ ಶೋಭನಾ ಶಿವಶಂಕರ್

ಕಳೆದ ತಿಂಗಳು ಮದರಾಸಿನಲ್ಲಿ ನಡೆದ ಘಟಿಕೋತ್ಸವದಲ್ಲಿ ಇಂಡಸ್ಟ್ರಿಯಲ್ ಸೈಕಾಲಜಿಯಲ್ಲಿ ಪ್ರಥಮ ರ್‍ಯಾಂಕ್ ಪ್ರಶಸ್ತಿಯನ್ನು ಸ್ನಾತಕೋತ್ತರ ಪದವಿಯಲ್ಲಿ ಪಡೆದವಳು ಬೆಂಗಳೂರಿನ ಕುಮಾರಿ ಶೋಭನಾ ಶಿವಶಂಕರ್. ಇವಳಿಗೆ 22 ವರ್ಷಗಳು.

ಕೈಗಾರಿಕಾ ಶಾಸ್ತ್ರವನ್ನೇ ಅಧ್ಯಯನದ ವಿಷಯವನ್ನಾಗಿ ಆರಿಸಿಕೊಂಡು ಇದಕ್ಕೆ ಮನಶ್ಶಾಸ್ತ್ರ ಹೇಗೆ ಪೂರಕ ಎಂಬುದನ್ನು ಶೋಭನಾ ತನ್ನ ಯೋಜನೆಗಳ ಮೂಲಕ ತೋರಿಸಿ ಕೊಟ್ಟಿದ್ದಾಳೆ. ಮಾರುಕಟ್ಟೆಯಲ್ಲಿ ಯಾವುದೇ ವಸ್ತುವನ್ನು ತಯಾರಿಸುವಾಗ ತಯಾರಕರು ಗಮನದಲ್ಲಿಟ್ಟುಕೊಳ್ಳಬೇಕಾದ ಅಂಶಗಳಾದ, ಆದರ ಗುಣಮಟ್ಟ ಆಕರ್ಷಣೆ, ಸುಲಭವಾಗಿ ಗ್ರಾಹಕರನ್ನು ತಲಪುವ ಕ್ರಮ, ಜನಪ್ರಿಯತೆ, ಜನರ ಅಭಿರುಚಿಗೆ ಮೂರ್ಪಾಡು ಮಾಡಿಕೊಳ್ಳುವ ತಂತ್ರ ಇವುಗಳನ್ನು ವೈಜ್ಞಾನಿಕವಾಗಿ ವ್ಯಾಸಂಗ ಮಾಡಿ ಅತ್ಯುನ್ನತ ಪ್ರತಿಭೆಯನ್ನು ಪ್ರದರ್ಶಿಸಿದ ಶೋಭನಾಳಿಂದ ಅನೇಕ ವಾಣಿಜ್ಯೋದ್ಯಮಿಗಳು ಸಲಹೆಗಳನ್ನು ನಿರೀಕ್ಷಿಸುತ್ತಿದ್ದಾರೆ. ಅಲ್ಲದೆ ಪೂರ್ವಭಾವಿಯಾಗಿ ಈಗಾಗಲೇ ಕೆಲವು ಯೋಜನೆಗಳನ್ನೂ ಸಿದ್ಧಪಡಿಸಿ ಕೊಡಿದ್ದಾಳೆ.

ವಿದೇಶಗಳಲ್ಲಿಯೂ ಸಂಚಾರ ನಡೆಸಿರುವ ಶೋಭನಾಳಿಗೆ ಅಂತರ ರಾಷ್ಟ್ರೀಯ ಮಾರಾಟದ ಬಗ್ಗೆಯೂ ಸಾಕಷ್ಟು ಅನುಭವವಿದೆ. ಸಿಂಗಪುರದಲ್ಲಿ 1990 ರಲ್ಲಿ ಅಂತರರಾಷ್ಟ್ರೀಯ ಕಂಪ್ಯೂಟರ್ ಮೇಳದಲ್ಲಿ ಇವಳು ತನ್ನ ಅಣ್ಣ ಪ್ರಭಾಶಂಕರ್ ಮತ್ತು ಅತ್ತಿಗೆ ಆರತಿಯೊಡನೆ ವ್ಯವಸ್ಥೆಗೊಳಿಸಿದ ಕಂಪ್ಯೂಟರ್ ಮಳಿಗೆಗೆ ಪ್ರಶಸ್ತಿ ದೊರಕಿದೆ.

ತಂದೆ ಶ್ರೀ ಶಿವಶಂಕರ್ ಮತ್ತು ತಾಯಿ ಶ್ರೀಮತಿ ಸೀತಾಲಕ್ಷ್ಮಿ ಮದರಾಸಿನ ಉದ್ಯಮಿಗಳು. ಶ್ರೀಮತಿ ಸೀತಾಲಕ್ಷ್ಮಿಗೆ ಈಗಾಗಲೇ ರಾಷ್ಟ್ರಪತಿಗಳಿಂದ ಶ್ರೇಷ್ಠ ಮಹಿಳಾ ಉದ್ಯಮಿ ಪ್ರಶಸ್ತಿ ದೊರಕಿದೆ. ಕುಮಾರಿ ಶೋಭನಾ ಕನ್ನಡ, ಮಲಯಾಳಂ, ಹಿಂದಿ, ಇಂಗ್ಲಿಷಿನಲ್ಲಿ ನಿರರ್ಗಳವಾಗಿ ಮಾತನಾಡುವುದಲ್ಲದೆ ಭರತನಾಟ್ಯ ಪ್ರವೀಣೆಯೂ ಆಗಿದ್ದಾಳೆ.

**—ಶಾರದಾ ಶಾಮಣ್ಣ**

ಚಿತ್ರ: ಈ ವರ್ಷ ಮದರಾಸಿನಲ್ಲಿ ನಡೆವ ಪದವೀದಾನ ಸಮಾರಂಭದಲ್ಲಿ ಘಟಿಕೋತ್ಸವದಲ್ಲಿ ಕುಮಾರಿ ಶೋಭನಾ ಮದ್ರಾಸು ವಿಶ್ವವಿದ್ಯಾನಿಲಯದ ಉಪಕುಲಪತಿಗಳಿಂದ ಪ್ರಶಸ್ತಿಯನ್ನು ಸ್ವೀಕರಿಸುತ್ತಿರುವುದು. ತಮಿಳುನಾಡಿನ ಮುಖ್ಯಮಂತ್ರಿ ಜಯಲಲಿತಾ ವೀಕ್ಷಿಸುತ್ತಿದ್ದಾರೆ.

---

"ಇತ್ತ ಕೊಡು ಸುಶೀಲಾ, ಇವರೇ, ಒಂದ್ಸಜ್ಜೆ ನಾರಾಯಣ ಪಂಡಿತರ ಮನೆಗೆ ಹೋಗಿ ತೋರ್‍ಸಿಕೊಂಡು ಬರಲಿ." ಕುಸುಮಾಬಾಯಿ ಗಂಡನಿಗೆ ಕೆಲಸ ಹಚ್ಚಿದರು. ಮತ್ತೊಮ್ಮೆ ಕೃತಜ್ಞತೆಯಿಂದ ಹೃದಯ ಭಾರವಾಯಿತು, ಶಿವೂಗೆ.

ಮತ್ತೊಂದು ಅರ್ಧಗಂಟೆಯಲ್ಲೀ ಮನೆಗೆ ಮರಳಿದ ಜೋಶಿಯವರ ಅರಳಿದ ಮುಖ ಫಲಿತಾಂಶವನ್ನು ಹೇಳಿದಾಗ ಎಲ್ಲರ ಮನವೂ ಹೂವಿನಷ್ಟು ಹಗುರಾಯಿತು.

ಇದೆಂತಹ ಅಚ್ಚರಿ? ನೋವಿನ ನೆಲೆಯಾಗಿದ್ದ ಮನದ ತುಂಬೆಲ್ಲಾ ನಲಿವಿನ ನವಿಲಿನ ಕುಣಿದಾಟ, ಸಡಗರ ಸಂಭ್ರಮದ ಸೂರೆ. ವಿಧಿಯಾಟವೆಂದರೆ ಇದೇ ಅಲ್ಲವೆ?

ಜಗದೀಶ ಅಕ್ಕ ಭಾವನೊಡನೆ ಹೊರಟಾಗ ಶಿವಶಂಕರ ಉತ್ಸಾಹದಿಂದ ನುಡಿದ. "ನಿಮ್ಮ ಸೌಜನ್ಯವನ್ನೂ, ಹೃದಯವಂತಿಕೆಯನ್ನೂ ಕಂಡು ನನಗೆ ಮಾತೇ ಬಾರದಂತಾಗಿದೆ. ಏನು ಹೇಳಲೂ ತೋಚುತ್ತಲೇ ಇಲ್ಲ. ಊರಿಗೆ ಹೋಗಿ ನಿಶ್ಚಿತಾರ್ಥಕ್ಕೆ ಮುಹೂರ್ತವನ್ನು ಗೊತ್ತುಮಾಡಿ ನಿಮಗೆ ತಿಳಿಸುತ್ತೇನೆ. ದಯವಿಟ್ಟು ನೀವೆಲ್ಲಾ ಬರಬೇಕು" ಆತ್ಮೀಯವಾಗಿ ಕೈ ಹಿಡಿದುಕೊಂಡ.

"ಛೇ! ಇದೇಕೆ ನೀವು ಇಷ್ಟೊಂದು ಭಾವುಕರಾಗಿದ್ದೀರಿ ಶಿವಶಂಕರ್? ಇದು ಕೇವಲ ನಿಮ್ಮ ತಂಗಿಯ ಅದೃಷ್ಟವೆಂದು ನೀವು ಭಾವಿಸಿದ್ದರೆ ಅದಕ್ಕಿಂತಾ ದೊಡ್ಡ ತಪ್ಪು ಬೇರೊಂದಿಲ್ಲ. ಒಂದು ಹೆಣ್ಣಿನ ಬಾಳಿನಲ್ಲಿ ಗಂಡಿನ ಆಗಮನ ಇಷ್ಟು ಪ್ರಾಮುಖ್ಯವೇ? ನಾನೂ ಕೂಡಾ ಈ ದೃಷ್ಟಿಯಿಂದ ಅದೃಷ್ಟವಂತನೆಂದು ನೀವೇಕೆ ಭಾವಿಸಬಾರದು? ಕುಸುಮಳನ್ನು ಒಪ್ಪಿರುವುದರಲ್ಲಿ ನನ್ನ ದೊಡ್ಡತನವೇನಿದೆ? ಅವಳು ನನಗೆ ಎಲ್ಲಾ ರೀತಿಯಲ್ಲೂ ಅರ್ಹಳೆನಿಸಿದ್ದರಿಂದಲೇ ನಾನು ಅವಳನ್ನು ಒಪ್ಪಿಕೊಂಡಿರುವುದು."

"ಏನೋ! ನೀವು ಏನೇ ಹೇಳಿದರೂ ಸರಿಯೇ. ನನಗಾಗಿರುವ ಸಂತೋಷ ಅಗಾಧವಾದದ್ದು."

"ಸರಿ, ಸರಿ. ಶಿವಶಂಕರರಾಯರೇ, ಏನು ಅಳಿಯನನ್ನು ಬರೇ ಹೊಗಳುತ್ತಾ, ಉಪಚರಿಸುತ್ತಾ ನಿಂತದ್ದೇ ಆಯ್ತಲ್ಲಪ್ಪಾ, ನಮಗೂ ಏನಾದರೂ ಆಹ್ವಾನ ಉಂಟೋ ಇಲ್ಲವೋ?" ನಗೆಯಾಡಿದರು ಕುಸುಮಾಬಾಯಿ.

ಎರಡೂ ಕೈಯೆತ್ತಿ ಜೋಡಿಸಿದ ಶಿವೂ. "ಅಮ್ಮಾ, ನಿಮ್ಮನ್ನು ಎಲ್ಲಾದರೂ ಮರೆಯುವುದುಂಟೇ? ನೀವು ಈಗ ಗಂಡಿನವರಲ್ಲ. ನಮ್ಮವರಾಗಿ ಕುಸುಮಳ ತಾಯಿಯ ಸ್ಥಾನದಲ್ಲಿ ನಿಂತು ನೀವೇ ಮಂಗಳ ಕಾರ್ಯವನ್ನು ನಡೆಸಿಕೊಡಬೇಕು. ನೀವಿಲ್ಲದೆ ಅವಳ ಮದುವೆ ಹೇಗಾದೀತು?" ಎಂದ.

"ಅಯ್ಯಯ್ಯೋ, ಅದೆಲ್ಲಾ ಏನು ಬಿಡ್ರೀ, ನಮ್ಮ ಮನೆಗೆ ಶುಭಕಾರ್ಯಕ್ಕಾಗಿ ಬಂದ ಗಳಿಗೆ ಸಾರ್ಥಕವಾಯಿತಲ್ಲಾ, ಅದು ದೊಡ್ಡ ಸಂತೋಷಾ. ಮನುಷ್ಯನಾಗಿ ಹುಟ್ಟಿ ಇಷ್ಟೂ ಒಬ್ರಿಗೆ ಸಹಕಾರ ನೀಡಲಿಲ್ಲಾಂದ್ರ ಅವನು ಮನುಷ್ಯ ಯಾಕಾದಾನು?"

'ಹೌದು! ಅದೇನೋ ಸರಿಯೇ. ಆದರೆ ಸಮಾಜದಲ್ಲಿ ಮೃಗೀಯ ಪ್ರವೃತ್ತಿಯ ವ್ಯಕ್ತಿಗಳೂ ಇರುವುದರಿಂದಲೇ ಅಲ್ಲವೇ ಮನುಷ್ಯತ್ವಕ್ಕೆ ಬೆಲೆಯಿರುವುದು' ಅಂದುಕೊಂಡ ಮನದಲ್ಲಿ.

ಅಂಬಿಕಾ ಮೆಲ್ಲನೆ ಕುಸುಮಳ ಕಿವಿಯಲ್ಲು ಸುರಿದಳು "ಹರೀಶ ಹೋದ. ಜಗದೀಶ ಬಂದಾ ಡುಂ...ಡುಂ..." "ಹೋಗಿ ಅತ್ತಿಗೆ... ಬಾಯಿ ನುಡಿದರೂ ಮನದ ತುಂಬಾ ಜಗದೀಶನ ಚಿತ್ರವೇ.

**— ಕೆ. ಎಸ್. ವತ್ಸಲಾ ವಿಶ್ವನಾಥ್**






## ಮಾವಿನ ತಿಳಿಯ ಕಾಯಿರಸ

**ಬೇಕಾಗುವ ಸಾಮಾನು :**

ಮಾವಿನಕಾಯಿ ತಿಳಿ ಒಂದು ಬಟ್ಟಲು, 2 ಟೀಸ್ಪೂನ್ ಖಾರದ ಪುಡಿ, 1 ಟೀಸ್ಪೂನ್ ಮೆಂತ್ಯಕಾಳು, 1 ಟೀಸ್ಪೂನ್ ಜೀರಿಗೆ, 2 ಟೀಸ್ಪೂನ್ ಎಳ್ಳು, 3 ಅಥವಾ 4 ಒಣಮೆಣಸಿನಕಾಯಿ, ರುಚಿಗೆ ಬೇಕಾಗುವಷ್ಟು ಉಪ್ಪು, ಚಿಟಿಕೆ ಅರಿಸಿನ ಪುಡಿ, 3 ಅಥವಾ 4 ಟೀಸ್ಪೂನ್ ಕಡ್ಲೆಕಾಯಿ ಎಣ್ಣೆ (ಒಳ್ಳೆಣ್ಣೆ), 1 ಟೀಸ್ಪೂನ್ ಸಾಸಿವೆಕಾಳು, ದೊಡ್ಡ ನಿಂಬೆ ಗಾತ್ರದಷ್ಟು ಬೆಲ್ಲ, ಕರಿಬೇವು 1 ಅಥವಾ 2 ಎಸಳು, ಒಂದೊಂದು ಟೀಸ್ಪೂನ್ ಕಡ್ಲೆಬೇಳೆ, ಉದ್ದಿನಬೇಳೆ.

**ಮಾಡುವ ವಿಧಾನ:** ಎಳ್ಳು, ಮೆಂತ್ಯಕಾಳು, ಜೀರಿಗೆ ಸ್ವಲ್ಪ ಹುರಿದುಕೊಂಡು ಕುಟ್ಟಿ ಪುಡಿ ಮಾಡಿಕೊಳ್ಳಬೇಕು. ಒಣಮೆಣಸಿನಕಾಯಿ ತುಂಡು ಮಾಡಿಟ್ಟುಕೊಳ್ಳಬೇಕು. ನಂತರ ಒಂದು ಚಿಕ್ಕ ಪಾತ್ರೆಯನ್ನು ತೆಗೆದುಕೊಂಡು ಒಲೆ ಮೇಲೆ ಇಟ್ಟು ಕಡ್ಲೆಕಾಯಿ ಎಣ್ಣೆ ಹಾಕಿ, ಅದು ಕಾದ ನಂತರ, ಸಾಸಿವೆ, ಕಡ್ಲೆಬೇಳೆ, ಉದ್ದಿನ ಬೇಳೆ ಹಾಕಿ ಸಿಡಿಸಬೇಕು. ಅದರಲ್ಲಿ ತುಂಡು ಮಾಡಿಟ್ಟುಕೊಂಡ ಮೆಣಸಿನಕಾಯಿ, ಕರಿಬೇವು ಹಾಕಬೇಕು. ನಂತರ ಮಾವಿನಕಾಯಿ ತಿಳಿಯನ್ನು ಅದರಲ್ಲಿ ಹಾಕಿ ಅದಕ್ಕೆ ಕುಟ್ಟಿಕೊಂಡಿದ್ದ ಎಳ್ಳು, ಮೆಂತ್ಯ, ಜೀರಿಗೆ ಪುಡಿಯನ್ನು, ಅರಿಸಿಣ ಪುಡಿ, ಬೆಲ್ಲ, ಉಪ್ಪು ನೀರು ಹಾಕಿ ಎಲ್ಲಾ ಕಲಕಿ, ಸ್ವಲ್ಪ ಹೊತ್ತು ಕುದಿಸಿ, ಕೆಳಗಿಳಿಸಬೇಕು. ಈಗ ಮಾವಿನ ತಿಳಿ ಕಾಯಿರಸ ತಯಾರಾದಂತೆ. ಇದು ತಿಂಡಿಗೆ, ಅನ್ನಕ್ಕೆ ಹಾಕಿಕೊಂಡು ತಿಂದರೆ ತುಂಬಾ ರುಚಿಯಾಗಿರುತ್ತೆ. ಇದನ್ನು ಒಂದು ವಾರದವರೆಗೂ ಇಟ್ಟುಕೊಂಡು ತಿನ್ನಬಹುದು. (ಕೈಯಿಂದ ಮುಟ್ಟದೆ ಸ್ಪೂನ್‌ನಿಂದ ಮಾತ್ರ ಬಳಸಬೇಕು)

—ಟಿ. ಎಚ್. ವೀಣಾ, ಅಸಗೋಡು

## ತರಕಾರಿ ಕಟ್‌ಲೆಟ್

**ಬೇಕಾಗುವ ಸಾಮಾನು:** ಕಡ್ಲೆಬೇಳೆ 200 ಗ್ರಾಂ, ಬ್ರೆಡ್ ½ ಪೌಂಡ್, ಈರುಳ್ಳಿ 2 ಗಡ್ಡೆ, ಸೊಪ್ಪು 10 ಕಟ್ಟು, ಆಲೂಗಡ್ಡೆ ¼ ಕೆ. ಜಿ. ಕೊತ್ತಂಬರಿ, ಹಸಿಮೆಣಸಿನಕಾಯಿ, ಮತ್ತು ರುಚಿಗೆ ತಕ್ಕಷ್ಟು ಉಪ್ಪು, ಗರಂಮಸಾಲೆ 1½ ಚಮಚ.

**ಮಾಡುವ ವಿಧಾನ:** ಕಡ್ಲೆಬೇಳೆಯನ್ನು ನೀರು, ಇಂಗುವ ಹಾಕಿ ಬೇಯಿಸಬೇಕು. ಆಲೂಗೆಡ್ಡೆಯನ್ನು ಬೇಯಿಸಿ ಎರಡನ್ನೂ ಬೇರೆ ಬೇರೆಯಾಗಿ ರುಬ್ಬಿಟ್ಟುಕೊಳ್ಳಿ. ಸೊಪ್ಪನ್ನು ಹೆಚ್ಚಿ ತೊಳೆದು ಬೇಯಿಸಿ ನಂತರ ಅದನ್ನು ರುಬ್ಬಬೇಕು. ಬ್ರೆಡ್ಡಿನ ಸುತ್ತಲೂ ಇರುವುದನ್ನು (ಕಪ್ಪಗೆ ಇರುವುದನ್ನು) ತೆಗೆದುಹಾಕಿ. ಮಧ್ಯದಲ್ಲಿ ಇರುವುದನ್ನು ಕೈಯಿಂದ ಉಜ್ಜಿದರೆ ಅದು ಪುಡಿ ಆಗುತ್ತದೆ. ಇದನ್ನು ರುಬ್ಬಿರುವ ಕಡ್ಲೆಬೇಳೆ, ಆಲೂಗಡ್ಡೆ, ಸೊಪ್ಪಿನ ಮಿಶ್ರಣದಲ್ಲಿ ಹಾಕಿಡಿ. ನಂತರ ಈರುಳ್ಳಿ ಹಾಕಿ. ಇಡೀ ಮಿಶ್ರಣವನ್ನು ಗರಂಮಸಾಲ, ಕೊತ್ತಂಬರಿಸೊಪ್ಪು, ಉಪ್ಪು ಹಾಕಿ ಚೆನ್ನಾಗಿ ಕಲಿಸಿ ನಂತರ ಕೈಯಲ್ಲಿ ತಟ್ಟಿ, ಹಂಚಿನಲ್ಲಿ ಚಪಾತಿ ಬೇಯಿಸುವ ರೀತಿ ಬೇಯಿಸಿ ಆರಿದ ನಂತರ ತಿನ್ನಿ.

## ಹಸಿಶುಂಠಿ ತಂಬುಳಿ

**ಬೇಕಾಗುವ ಸಾಮಗ್ರಿಗಳು:**

ಒಂದು ತುಂಡು ಶುಂಠಿ
10 ಮೆಣಸಿನಕಾಳು
ಜೀರಿಗೆ ½ ಚಮಚ
ಇಂಗು
ತೆಂಗಿನ ತುರಿ
ಉಪ್ಪು
ಮೊಸರು

**ಮಾಡುವ ವಿಧಾನ:** ಒಂದು ಟೇಬಲ್ ಸ್ಪೂನ್ ತುಪ್ಪದಲ್ಲಿ ಸಣ್ಣದಾಗಿ ಹೆಚ್ಚಿದ ಹಸಿ ಶುಂಠಿಯನ್ನು, ಮೆಣಸಿನಕಾಳು ಹಾಗೂ ಜೀರಿಗೆ ಇವುಗಳನ್ನು ಹಾಕಿಕೊಂಡು ಬಾಡಿಸಿಕೊಳ್ಳಬೇಕು. ನಂತರ ಬಾಡಿಸಿದ ಶುಂಠಿಯೊಂದಿಗೆ ಕಾಯಿತುರಿ, ¼ ಚಮಚ ಅರಿಶಿನ ಮತ್ತು ಸಣ್ಣ ಚೂರು ಇಂಗನ್ನು ಬೆರೆಸಿ ಸಣ್ಣಗೆ ರುಬ್ಬಿಕೊಳ್ಳಬೇಕು. ರುಬ್ಬಿದ ಮಸಾಲೆಯನ್ನು ಮೊಸರಿಗೆ ಹಾಕಿ ಮತ್ತು ರುಚಿಗೆ ತಕ್ಕಷ್ಟು ಉಪ್ಪು ಹಾಕಿ ಕಡೆಗೆ ತುಪ್ಪದ ಒಗ್ಗರಣೆ ಹಾಕಬೇಕು. ಇದನ್ನು ಅನ್ನದ ಜೊತೆಗೆ ಕಲೆಸಿ ತಿಂದರೆ ಬಲು ಸೊಗಸು ಹಾಗೂ ಜೀರ್ಣ ಶಕ್ತಿಗೆ ಬಹಳ ಅನುಕೂಲಕಾರಿಯಾಗಿರುತ್ತವೆ.

—ಗಾಯತ್ರಿ ರಂಗನಾಥ, ಬೆಂಗಳೂರು

## ಗುಳ್ಳಡಕಿ ಉಂಡೆ

**ಬೇಕಾಗುವ ಪದಾರ್ಥಗಳು:** ½ ಕೆ. ಜಿ. ಶ್ಯಾವಿಗೆ ಗೋದಿ, ¾ ಕೆ. ಜಿ. ಬೆಲ್ಲ, ಒಂದು ಬಟ್ಟಲ ಒಣ ಕೊಬ್ಬರಿ ತುರಿ, ¼ ಕೆ. ಜಿ. ಪುಟಾಣಿ ಹಿಟ್ಟು, 5-6 ಏಲಕ್ಕಿ, ಒಂದು ಚೂರು ಶುಂಠಿ, 100 ಗ್ರಾಂ ಗಸಗಸೆ, ಒಂದು ಚಿಟಿಕೆ ಹಪ್ಪಳಖಾರಾ, ½ ಕೆ. ಜಿ. ಕರಿಯಲು ಎಣ್ಣೆ, 4 ಸಣ್ಣ ಚಮಚೆ ಉಂಡೆ ರವಾ.

**ತಯಾರಿಸುವ ವಿಧಾನ:**

ಮೊದಲು ಗೋದಿಯನ್ನು 10 ಗಂಟೆಗಳ ಕಾಲ ನೀರಿನಲ್ಲಿ ನೆನೆಯಲು ಬಿಡಬೇಕು. 10 ತಾಸಿನ ನಂತರ ಗೋದಿಯನ್ನು ರುಬ್ಬಬೇಕು. ಚೆನ್ನಾಗಿ ರುಬ್ಬಿದ ನಂತರ, ಅದರಿಂದ ಬಂದ ಗೋದಿಯ ಜೀಕನ್ನು ಚೆನ್ನಾಗಿ ನೀರಿನಲ್ಲಿ ಗೋದಿಯ ತವಡು ಹೋಗುವವರೆಗೆ ತೊಳೆಯಬೇಕು. ಆ ಜೀಕನ್ನು ನೀರು ಆರುವವರೆಗೆ ಒಣಗಲು ಬಿಡಬೇಕು. ಅನಂತರ ಉಂಡೆ ರವೆಯನ್ನು ಎಣ್ಣೆಯಲ್ಲಿ ಕಲಿಸಿಟ್ಟುಕೊಳ್ಳಬೇಕು. ಜೀಕಿನಲ್ಲಿದ್ದ ನೀರು ಒಣಗಿದ ನಂತರ ಅದರಲ್ಲಿ ಕಲಿಸಿಟ್ಟುಕೊಂಡ ಉಂಡೆ ರವೆಯನ್ನು ಸೇರಿಸಿ ಅದು ಜೀಕಿನಲ್ಲಿ ಮಿಶ್ರಣವಾಗುವಂತೆ ಚೆನ್ನಾಗಿ, ಎಣ್ಣೆ ಹಚ್ಚಿ ಕುಟ್ಟಬೇಕು. ರವೆ ಮತ್ತು ಜೀಕ ಚೆನ್ನಾಗಿ ಮಿಶ್ರಣವಾದ ನಂತರ ಚಿಟಿಕೆ ಹಪ್ಪಳ ಖಾರವನ್ನು ಹಾಕಿ ಸ್ವಲ್ಪ ಕುಟ್ಟಬೇಕು. (ಕುಟ್ಟಿದ) ಜೀಕನ್ನು ಸಣ್ಣ ಗುಳ್ಳೆಗಳಾಗಿ ಹರಿದಿಟ್ಟುಕೊಳ್ಳಬೇಕು (ಗುಳಿಗೆ ಗಾತ್ರದ ಗುಳ್ಳೆಗಳು). ಹರಿದಿಟ್ಟುಕೊಂಡ ಗುಳ್ಳೆಗಳನ್ನು ಒಂದು ಅಳತೆಯ ಕಡಿಮೆ ಕಾವಿನ (ಎಣ್ಣೆ ಹೊಗೆಯಾಡಲು ಬಿಡಬಾರದು) ಎಣ್ಣೆಯಲ್ಲಿ ಚೆನ್ನಾಗಿ ಕಲಕುತ್ತಾ ಕರಿಯಬೇಕು. ಆಗ ಜೀಕ ಗರಿಗರಿಯಾಗಿ ದುಂಡಗೆ ಉಬ್ಬಿಕೊಳ್ಳುತ್ತದೆ.

ಕರಿದಿಟ್ಟುಕೊಂಡ ಗುಳಿಗೆಗಳನ್ನು ಬೆಲ್ಲದಿಂದ ಉಂಡೆಯ ಅಣಿ ಮಾಡಿ ಅದರಲ್ಲಿ ಶುಂಠಿ ಪುಡಿ, ಏಲಕ್ಕಿ ಪುಡಿ, ಪುಟಾಣಿ ಹಿಟ್ಟು ಹಾಕಿ, ಕಲಿಸಿ, ಅದರಲ್ಲಿ 5-6 ಕರಿದಿಟ್ಟುಕೊಂಡ ಗುಳಿಗೆಯನ್ನು ಸೇರಿಸಿ ಒಂದೊಂದು ಉಂಡೆಯನ್ನಾಗಿ ಕಟ್ಟಿಕೊಂಡು ಕೊಬ್ಬರಿ ತುರಿ, ಗಸಗಸೆ (ಗಸಗಸೆಯನ್ನು ಸ್ವಲ್ಪ ಕುಟ್ಟಿಕೊಳ್ಳಬೇಕು) ಹಚ್ಚಿ ಇಡಬೇಕು. ಈಗ ಗರಿಗರಿಯಾದ ಗುಳ್ಳಡಕಿ ಉಂಡೆ ತಿನ್ನಲು ಸಿದ್ಧ. ಈ ಉಂಡೆಯು ಪೌಷ್ಟಿಕವೂ ಮತ್ತು ತಿನ್ನಲು ಬಹಳ ರುಚಿಯಾಗಿರುತ್ತವೆ.

—ವಿದ್ಯಾ ಎಸ್. ಮೇಲ್ಮುರಿ, ಗದಗ

## ಬನಾನಾ ಟಾಫಿ
## (ಬಾಳೆಹಣ್ಣಿನ ಚಾಕಲೇಟು)

**ಬೇಕಾಗುವ ಸಾಮಾನು:** ಬಾಳೆಹಣ್ಣಿನ ರಸ 1 ಲೀಟರ್, ಸಕ್ಕರೆ 600 ಗ್ರಾಂ, ಹಾಲಿನ ಪುಡಿ 100 ಗ್ರಾಂ.

**ಮಾಡುವ ವಿಧಾನ:** ಬಾಳೆಹಣ್ಣನ್ನು ತುರಿದು, ಸ್ಟೇನರ್‌ನಲ್ಲಿ ತಿರುವಿ ರಸ ಮಾಡಿಕೊಳ್ಳಿ. ಈ ರಸಕ್ಕೆ ಸಕ್ಕರೆಯನ್ನು ಬೆರೆಸಿ ಬಿಸಿ ನೀರಿನಲ್ಲಿ ಹಾಲಿನಪುಡಿ ಹಾಕಿ ಗಟ್ಟಿ ಹಾಲನ್ನು ಮಾಡಿ ಅದನ್ನು ರಸದಲ್ಲಿ ಹಾಕಿ ಒಲೆಯ ಮೇಲಿಟ್ಟು ಬೇಯಿಸಬೇಕು. ಅದು ಹದಕ್ಕೆ ಬಂದ ನಂತರ –ಅಂದರೆ ಲೋಟದಲ್ಲಿನ ನೀರಿಗೆ ಹಾಕಿ ನೋಡಿದಾಗ ಅದು ಕೈಗೆ ಅಂಟುವುದಿಲ್ಲ– ಆಗ ಅದು ಬೆಂದಿದೆ ಎಂದು ತಿಳಿಯಬೇಕು. ನಂತರ ಅದನ್ನು ಬೆಣ್ಣೆ ಸವರಿದ ತಟ್ಟೆಗೆ ಸುರಿದು ಬೇಕಾದ ಆಕಾರಕ್ಕೆ ಕತ್ತರಿಸಿಕೊಳ್ಳಬಹುದು. ಬೇಕಾದಲ್ಲಿ ಸುವಾಸನೆ ಹಾಕಬಹುದು. ಮಾರ್ಕೆಟ್ ಮಾಡುವವರು ಅದಕ್ಕೆ ಒಂದು ಹೆಸರು ಕೊಟ್ಟು ಪ್ಯಾಕಿಂಗ್ ಮಾಡಬಹುದು.

—ಟಿ. ಎಚ್. ಶಶಿಕಲಾ, ಅಸಗೋಡು

# ನಿಮ್ಮ ಶೋಕೇಸ್‌ಗೊಂದು ಭತ್ತದಿಂದ ಆಭರಣಗಳು

**ಬೇಕಾಗುವ ಸಾಮಾನುಗಳು**

ಭತ್ತ, ಫೆವಿಕಾಲ್, ಸುನೇರಿಬಣ್ಣ, ಮೀಡಿಯಮ್ ರಟ್ಟು, ಹಾಳೆ, ಜರದ ಎಳೆ, ಗುಂಡಿ (ಬಟನ್), ಟಿಕಳಿ.

**ಮಾಡುವ ವಿಧಾನ**

ಮೊದಲು ಸುನೇರಿ ಬಣ್ಣದಲ್ಲಿ ಮೀಡಿಯಮ್ ಸೇರಿಸಿ ಕಲಸಿ ನಂತರ ಭತ್ತಗಳನ್ನು ಅದರಲ್ಲಿ ಅದ್ದಿ ತೆಗೆಯಿರಿ. ಭತ್ತಕ್ಕೆ ಈಗ ಹೊಳೆಯುವ ಬಂಗಾರದ ಬಣ್ಣ ಬಂದು ಸುಂದರವಾಗಿ ತೋರುತ್ತದೆ. ನಂತರ ಅವನ್ನು ಒಣಗಿಸಿ.

ಈಗ ನಿಮಗೆ ಬೇಕಾದ ಆಭರಣಗಳನ್ನು ಉದಾ: ಸರ, ಓಲೆ, ಝುಮಕಿ, ಬಳೆ, ಮೂಗುತಿ, ಉಂಗುರ ಇತ್ಯಾದಿ ಮಾಡಬಹುದು. ಬಣ್ಣ ಹಚ್ಚದ ಭತ್ತಗಳಿಂದಲೂ ಮಾಡಬಹುದು. ಅದೂ ಸುಂದರ.

**ಸರ**

ನಿಮಗೆ ಬೇಕಾದ ಆಕೃತಿಯ ರಟ್ಟು ತೆಗೆದುಕೊಂಡು ಅದಕ್ಕೆ ಬಣ್ಣ ಹಚ್ಚಿ ಇಲ್ಲವೇ ಬಣ್ಣದ ಹಾಳೆ ಹಚ್ಚಿ. ನಂತರ ನಿಮಗೆ ಬೇಕಾದಂತೆ ಸರದ ಆಕೃತಿ ರಚಿಸಿಕೊಳ್ಳಿ. ಅದರ ಗುಂಟ ಫೆವಿಕಾಲ್ ಹಚ್ಚಿ ಜರದ ಎಳೆ ಅಂಟಿಸಿ. ನಂತರ ಗುಂಡಿಗಳನ್ನು ಸ್ವಲ್ಪ ದೂರ ದೂರಕ್ಕೆ ಜರದ ಎಳೆಯ ಮೇಲೆ ಅಂಟಿಸಿ. ಈಗ ಆ ಗುಂಡಿಗೆ ಫೆವಿಕಾಲ್ ಹಚ್ಚಿ ಅದರಲ್ಲಿ ದುಂಡಗೆ ಭತ್ತ ಅಂಟಿಸಿ. ನಡುವೆ ಕೆಂಪು ಟಿಕಳಿ ಹಚ್ಚಿ. ಅಥವಾ ಸಣ್ಣ ಮುತ್ತನ್ನು ಹಚ್ಚಿರಿ. ಹೀಗೆ ಪ್ರತಿಯೊಂದು ಗುಂಡಿಗೂ ಭತ್ತ ಅಂಟಿಸಿ.

ನಡುವೆ ಪದಕ (ಲಾಕೆಟ್) ಫೋಟೋದಲ್ಲಿ ತೋರಿಸಿದಂತೆ ಅಥವಾ ನಿಮಗೆ ಬೇಕಾದ ರೀತಿಯಲ್ಲಿ ಗುಂಡಿ ಹಚ್ಚಿ ಅವುಗಳಿಗೆ ಭತ್ತ ಅಂಟಿಸಿ. ಗುಂಡಿಗೂ ಸುತ್ತಲೂ [illegible] ಜರ ಅಂಟಿಸಿ.

ಈಗ ಪದಕ (ಲಾಕೆಟ್) ದಿಂದ ಸರದ ಸುಂದರತೆ ಹೆಚ್ಚುವುದು. ಸರದ ಮೇಲಿನ ಜರದ ಎಳೆಗಳೆರಡರಲ್ಲೂ ಗುಚ್ಛ ಕಟ್ಟಿ.

**ಬಳೆ**

(1) ಮೂರು ಕಾಜಿನ ಅಥವಾ ಪ್ಲಾಸ್ಟಿಕ್ ಬಳೆಗಳನ್ನು ಫೆವಿಕಾಲಿನಿಂದ ಒಂದಕ್ಕೊಂದು ಜೋಡಿಸಿ. ಒಂದು ದಪ್ಪ ಬಳೆ ಮಾಡಿಕೊಳ್ಳಿ.





ಚಿತ್ರ : [illegible]

ನಂತರ ಭತ್ತಗಳನ್ನು ನೇರಾ ಅಥವಾ ಸ್ವಲ್ಪ ಓರೆಯಾಗಿ (ಚಿತ್ರ ನೋಡಿ) ಅಂಟಿಸುತ್ತ ಹೋಗಿ. ನಡುವೆ ಬಿಳಿಯ ಮುತ್ತು ಹಚ್ಚಿರಿ. ಮುತ್ತಿನ ಬಳೆ ಆಗುವುದು.

(2) ಇನ್ನೊಂದು ವಿಧದಲ್ಲಿ ದಪ್ಪ ಬಳೆಗೆ ಹೂವಿನಾಕೃತಿಯಲ್ಲಿ ಅಂಟಿಸಿ. ನಡುವೆ ಟಿಕಳಿ ಹಚ್ಚಿ.

**ಓಲೆ**

ಸ್ವಲ್ಪ ದೊಡ್ಡ ಗುಂಡಿಗಳನ್ನು ತೆಗೆದುಕೊಂಡು ಫೆವಿಕಾಲ್ ಹಚ್ಚಿ. ಸುತ್ತಲೂ ಭತ್ತ ಹಚ್ಚಿ ನಡುವೆ ಇನ್ನೊಂದು ಸಾಲು ಭತ್ತ ಹಚ್ಚಿ. ಮಧ್ಯದಲ್ಲಿ ಒಂದು ದೊಡ್ಡ ಮುತ್ತು ಅಥವಾ ಸುಂದರವಾದ ಮಣಿ ಹಚ್ಚಿರಿ. ಈಗ ಓಲೆ ತಯಾರಾಯಿತು. ಮೊದಲೇ ಗುಂಡಿಗೆ ಹಿಂದೆ ಸ್ವಲ್ಪ ದೊಡ್ಡ ತೂತು ಮಾಡಿ. ಅದರಲ್ಲಿ ದಪ್ಪ ಕಡ್ಡಿ ಸಿಗಿಸಿದರೆ ಆಭರಣ ಸೆಟ್‌ನಲ್ಲಿಡಲು ಅನುಕೂಲ.

**ಝುಮಕಿ**

ಪ್ಲಾಸ್ಟಿಕ್‌ನ ಎರಡು ಚಿಕ್ಕ ಗಂಟೆ ತೆಗೆದುಕೊಳ್ಳಿ. ಅದಕ್ಕೆ ಸುತ್ತಲೂ ಉದ್ದವಾಗಿ ಎರಡು ಸಾಲು ಭತ್ತ ಅಂಟಿಸಿ. ಎರಡೂ ಭತ್ತಗಳ ಸಾಲಿನ ಮಧ್ಯದಲ್ಲಿ ಅತಿ ಚಿಕ್ಕ ಬಿಳಿಯ ಮಣಿ ಕೂಡಿಸಿ ಗಂಟೆಯ ಮೇಲಿನ ತೂತಿನಲ್ಲಿ ಚಿಕ್ಕ ಸರಪಳಿ ಕೂಡಿಸಿ.

**ಮೂಗುತಿ**

ಗುಂಡಿಯನ್ನು ಅರ್ಧ ಕತ್ತರಿಸಿ ಅದಕ್ಕೆ ಮೂರು ಭತ್ತ ಅಂಟಿಸಿ. ಅದಕ್ಕೆ ಕೆಳಗೆ ಅತಿ ಚಿಕ್ಕ ಮೂರು ಕೆಂಪು ಮಣಿ ಕೂಡಿಸಿ. ಮೇಲೆ ಒಂದು ಕೆಂಪು ಮಣಿ ಕೂಡಿಸಿ.

**ಉಂಗುರ**

ತಂತಿಯನ್ನು ದುಂಡಗೆ ಮಾಡಿ ಒಂದು ಗುಂಡಿ ಜೋಡಿಸಿ. ತಂತಿಗೆ ಜರದ ಎಳೆ ಸುತ್ತಿ ಗುಂಡಿಗೆ ದುಂಡಗೆ ಭತ್ತ ಹಚ್ಚಿ ಮಧ್ಯದಲ್ಲಿ ಮಣಿ ಅಥವಾ ಹರಳು ಕೂಡಿಸಿ. ಉದ್ದನೆಯ ಉಂಗುರವನ್ನೂ ಇದೇ ರೀತಿ ಮಾಡಬಹುದು (ಚಿತ್ರ ನೋಡಿ).

ಇವೆಲ್ಲ ಆಭರಣಗಳನ್ನೂ ಒಂದು ಚೌಕ ರಟ್ಟಿನ ಡಬ್ಬಿಯಲ್ಲಿ ಹೊಂದಿಸಿ ನಿಮ್ಮ ಶೋಕೇಸ್‌ನಲ್ಲಿಡಿ. ಶೃಂಗಾರಕ್ಕೊಂದು ಶೋಭೆ.

ವಿವಾಹದ ಸಂದರ್ಭಗಳಲ್ಲಿನ ಅಲಂಕಾರದ ಸಾಮಾನುಗಳಲ್ಲಿ, ಗೌರಿಪೂಜೆ, ಗಣಪತಿ ಪೂಜೆ ಇತ್ಯಾದಿ ಹಬ್ಬಗಳ ಸಂದರ್ಭಗಳಲ್ಲಿನ ಅಲಂಕಾರದ ಸಾಮಾನುಗಳಲ್ಲಿ ಈ ಆಭರಣ [illegible] ಬಹುದು.

— ವಿಶಾಲಾಕ್ಷಿ ಡಿ. ದೇಶಪಾಂಡೆ
ಶಿರಹಟ್ಟಿ–582 120.

( 13 ನೇ ಪುಟದಿಂದ )

ಕೊಂಡಿ ಕಳಚುತ್ತದೆ. ಅತಿ ಚಿಕ್ಕ ವಯಸ್ಸಿಗೇ ವಿವಾಹಕ್ಕೆ ಧುಮುಕುತ್ತಾರೆ. ಹೆಚ್ಚು ಹುಡುಗಿಯರು ಹೈಸ್ಕೂಲಿನಿಂದ ಹೊರಬರುವಷ್ಟರಲ್ಲಿ ಮದುವೆಯಾಗಿ ಬಿಡ್ತಾರೆ. ಇಲ್ಲಿ ತಂದೆ-ತಾಯಿಯರ ಒಪ್ಪಿಗೆ ಇದ್ದರೆ 14 ಕ್ಕೇ ಕಾನೂನು ರೀತಿಯಲ್ಲಿ ವಿವಾಹವಾಗಬಹುದು. ಎಳೆ ವಯಸ್ಸಿನ ಮದುವೆಗಳು ಬಹಳ ಬೇಗ ಮುರಿದು ಬೀಳುತ್ವೆ. ಆಲ್‌ಬರ್ಟಾದಲ್ಲಿ ವಿಚ್ಛೇದನದ ಸಂಖ್ಯೆ ಶೇಖಡಾ ನಲವತ್ತು.

**ನೇಮಿಚಂದ್ರ :** ಅವರ ವಿದ್ಯಾಭ್ಯಾಸದ ಗತಿ ?

**ಡಾ॥ ನಳಿನಿ :** ಹದಿನಾರರವರೆಗೂ ವಿದ್ಯಾಭ್ಯಾಸ ಕಡ್ಡಾಯ. ಪ್ರತಿಯೊಬ್ಬರೂ ಶಾಲೆಗೆ ಹೋಗಬೇಕು. 16 ಆದೊಡನೆ ಬಿಡುವವರೇ ಹೆಚ್ಚು. ಮದುವೆ ಮಾಡಿಕೊಳ್ತಾರೆ, ಮಕ್ಕಳಾಗುತ್ತವೆ, ಮದುವೆ ಮುರಿಯುತ್ತದೆ. ಮಕ್ಕಳೊಡನೆ ಸಿಕ್ಕಿಬಿದ್ದ ಹೆಣ್ಣಿಗೆ ಆರ್ಥಿಕ ಭದ್ರತೆ ಇಲ್ಲ. ಹೈಸ್ಕೂಲ್ ವಿದ್ಯಾಭ್ಯಾಸಕ್ಕೆ ಎಂಥಾ ಕೆಲಸ ಸಿಕ್ಕೀತು ಹೇಳಿ ?

**ನೇಮಿಚಂದ್ರ :** ಸ್ತ್ರೀ ಸಂಘ-ಸಂಸ್ಥೆಗಳು ಈ ದಿಕ್ಕಿನಲ್ಲಿ ಯಾವ ಪ್ರಯತ್ನವನ್ನೂ ಮಾಡಿಲ್ಲವೆ ?

**ಡಾ॥ ನಳಿನಿ :** ಬಹಳಷ್ಟು ಪ್ರಯತ್ನ ನಡೀತಾ ಇದೆ. ಹೈಸ್ಕೂಲು ಹಂತದ ಹುಡುಗಿಯರಿಗೆ ತಿಳಿ ಹೇಳುತ್ತೇವೆ. ಓದು-ಉತ್ತಮ ಉದ್ಯೋಗದ ಅಗತ್ಯವನ್ನು ತಿಳಿಸಿ ಹೇಳ್ತೇವೆ. ಪ್ರೀತಿ ಪ್ರೇಮ ಹದಿಹರಯದಲ್ಲಿ ರಮ್ಯವಾಗಿ ಕಾಣುತ್ತೆ. ಅಷ್ಟೆಲ್ಲಾ ಕುಟುಂಬ ಯೋಜನಾ ವಿಧಾನಗಳ ನಡುವೆಯೂ ಬಸಿರು–ಗುಟ್ಟಾದ ಗರ್ಭಪಾತ ನಡೆಯುತ್ತಲೇ ಸಾಗಿದೆ.

**ನೇಮಿಚಂದ್ರ :** ತಂದೆ-ತಾಯಿಗಳು ಮಕ್ಕಳ ವಿದ್ಯಾಭ್ಯಾಸಕ್ಕೆ ಹೆಚ್ಚು ಒತ್ತು ಕೊಡೋದಿಲ್ಲವೆ ?

**ಡಾ॥ ನಳಿನಿ :** ಹದಿನಾರು ದಾಟಿದ ಮೇಲೆ ಅವರ ನಿಯಂತ್ರಣ ಹೆಚ್ಚೇನೂ ಇರೋಲ್ಲ.

**ನೇಮಿಚಂದ್ರ :** ಇಂಥಾ ವಾತಾವರಣದಲ್ಲಿ ಇಲ್ಲಿಂದ ಹೋದ ಭಾರತೀಯರ ಬದುಕು ಯಾವರೀತಿ ಮಾರ್ಪಾಡು ಹೊಂದಿದೆ ?

**ಡಾ॥ ನಳಿನಿ :** ಇಲ್ಲಿಂದ ಹೋದ ನಮ್ಮಂಥಹ ಭಾರತೀಯರು, ಮೊದಲ ಪೀಳಿಗೆಯವರು. ನಮಗೆ ಭಾರತೀಯ ನೆಲದ ಕೊಂಡಿಗಳಿದ್ದವು. ಭಾರತದಲ್ಲಿ ಹುಟ್ಟಿ ಬೆಳೆದು ಅಲ್ಲಿಗೆ ಹೋದವರು. ಭಾರತೀಯ ಕುಟುಂಬಗಳು ಒಟ್ಟಿಗೆ ಸೇರಿ, ಹಬ್ಬ ಹರಿದಿನಗಳ ಆಚರಿಸುವ ಭಾರತೀಯ ಸಂಸ್ಕೃತಿ–ಪರಂಪರೆಯ ಉಳಿಸಿಕೊಳ್ಳುವ ಯತ್ನವಿತ್ತು. ನಮ್ಮ ಮಕ್ಕಳ ಮೇಲೆ ಮಮಕಾರ–ನಿಯಂತ್ರಣ ಇನ್ನೂ ಇದೆ. ಆದರೆ ನಮ್ಮ ಮಕ್ಕಳು, ಭಾರತದ ಯಾವುದೇ ನಂಟೂ ಇಲ್ಲದೆ ಇಲ್ಲೇ ಹುಟ್ಟಿ ಬೆಳೆದವರು. ಅವರು ಖಂಡಿತಾ ಇಲ್ಲಿಯವರಾಗುತ್ತಾರೆ. ಅಷ್ಟೇ ಅಲ್ಲ, ಇಲ್ಲಿ ನೋಡಿ 16–17 ರ ನಂತರ ಮಕ್ಕಳನ್ನು ಆರ್ಥಿಕವಾಗಿ ತಂದೆ-ತಾಯಿಯರೇ ಪೂರ್ಣ ಬೆಂಬಲಿಸೋದು ಅಪರೂಪ. ಹಾಗಾಗಿ ಕೆಲಸ ಹಿಡಿದು, ಓದುವ ಹುಡುಗರೇ ಹೆಚ್ಚು. ನಾವು ನೋಡಿ, ನನ್ನ ಮಗ ಪಿ. ಎಚ್. ಡಿ. ಮಾಡಿ ಮುಗಿಸುವವರೆಗೂ ಅವನನ್ನು ಆರ್ಥಿಕವಾಗಿ ಬೆಂಬಲಿಸಿದೆವು. ಆತನಿಗೆ ದುಡಿದು ಕಲಿಯುವ ಭಾರವಿರಲಿಲ್ಲ. ಆದರೆ ನಮ್ಮ ಮಕ್ಕಳ ಜೀವನ ಕ್ರಮ ಹೆಚ್ಚು ಕೆನಡಾದವರಂತೆಯೇ ಆಗುವುದು ಖಂಡಿತಾ ಆಶ್ಚರ್ಯವಲ್ಲ.

ಇಷ್ಟು ದೂರ ಬಂದರೂ ನಮ್ಮವರು ಜಾತಿ-ಕುಲ ವರದಕ್ಷಿಣೆಗಳನ್ನು ಖಂಡಿತಾ ಬಿಟ್ಟಿಲ್ಲ. ಅಲ್ಲಿಯ ಕೆಟ್ಟದ್ದನ್ನು ಹೊತ್ತು ತಂದು, ಇಲ್ಲಿಯ ಕೆಟ್ಟದ್ದನ್ನೂ ಬಾಚಿಕೊಂಡು ಹಾಳಾದವರಿದ್ದಾರೆ.

ಅರ್ಹತೆಗೆ ಬಹಳಷ್ಟು ಆದ್ಯತೆ ಇದೆ. ಹಣದಿಂದ, ಶಿಫಾರಸ್ಸಿನಿಂದ ಸೀಟು, ಕೆಲಸ ಕೊಳ್ಳಲಾರಿರಿ.

**ನೇಮಿಚಂದ್ರ :** ಭಾರತದ ನೆಲದಿಂದ ಅಷ್ಟು ದೂರ ಉಳಿದು ಇಲ್ಲಿಯ ಒಳ್ಳೆಯ ಅಂಶಗಳನ್ನು ಉಳಿಸಿಕೊಳ್ಳಲು ಹೆಣಗ್ತೀರಾ ? ಹಾಗೆಯೇ ಇಲ್ಲಿಯ ಜಾತಿ-ವರದಕ್ಷಿಣೆಯಂಥಾ ಕೆಟ್ಟ ಪಿಡುಗುಗಳ ಇಲ್ಲಿಯೇ ಬಿಟ್ಟು ಹೋಗಿದ್ದೀರಾ ?

**ಡಾ॥ ನಳಿನಿ :** ಇಷ್ಟು ದೂರ ಬಂದರೂ, ನಮ್ಮವರು ಜಾತಿ-ಕುಲ-ವರದಕ್ಷಿಣೆಗಳನ್ನು ಖಂಡಿತಾ ಬಿಟ್ಟಿಲ್ಲ. 25 ವರ್ಷದಿಂದ ಇಲ್ಲೇ ನೆಲೆಸಿದವರೂ, ಮಗಳ ಮದುವೆಗೆ ತಮ್ಮದೇ ಜಾತಿ-ಒಳ ಪಂಗಡದ ಸಂಬಂಧ ಹುಡುಕುತ್ತಾರೆ. ಅಲ್ಲಿಯ ಕೆಟ್ಟದ್ದನ್ನು ಹೊತ್ತು ತಂದು, ಇಲ್ಲಿಯ ಕೆಟ್ಟದ್ದನ್ನೂ ಬಾಚಿಕೊಂಡು ಹಾಳಾದವರಿದ್ದಾರೆ.

**ನೇಮಿಚಂದ್ರ :** ಇಷ್ಟೆಲ್ಲ ಪ್ರತಿಕೂಲ ಪರಿಸ್ಥಿತಿಯಲ್ಲೂ ನಿಮಗೆ ವಿದೇಶದಲ್ಲಿ ಉಳಿಯುವಂತೆ ಪ್ರೇರೇಪಿಸುವ ಆಕರ್ಷಣೆಗಳೇನು ?

**ಡಾ॥ ನಳಿನಿ :** ಮೂಲತಃ ನಾವು ಒಂದು ಕಡೆ ಬೇರು ಬಿಟ್ಟ ಮೇಲೆ, ಕಿತ್ತು ನಡೆಯುವುದು ಕಷ್ಟ. ಇಲ್ಲಿಯ ಒಳ್ಳೆಯ ಅಂಶಗಳೂ ಯಥೇಚ್ಛವಾಗಿವೆ. ಇಲ್ಲಿ ನೋಡಿ ಅರ್ಹತೆಗೆ ಬಹಳಷ್ಟು ಆದ್ಯತೆ ಇದೆ. ಹಣದಿಂದ, ಶಿಫಾರಸ್ಸಿನಿಂದ ಸೀಟು ಕೆಲಸ ಕೊಳ್ಳಲಾರಿರಿ.

**ನೇಮಿಚಂದ್ರ :** ಅಂದರೆ ಡೊನೇಷನ್ ಶಾಲಾ–ಕಾಲೇಜುಗಳಿಲ್ಲ.

**ಡಾ॥ ನಳಿನಿ :** ಖಂಡಿತಾ ಇಲ್ಲ. ಇಲ್ಲಿ ಬದುಕು ಸುಲಭ. ದಿನನಿತ್ಯದ ಬದುಕಿಗೆ ಹೋರಾಡಬೇಕಿಲ್ಲ. ಬಹಳಷ್ಟು ಅನುಕೂಲಗಳಿವೆ. ನನ್ನ ದೊಡ್ಡ ಮಗ 'ಆಸ್ಟ್ರೋಫಿಸಿಕ್ಸ್'ನಲ್ಲಿ ಪಿ. ಎಚ್. ಡಿ ಮಾಡಿದ, ಎರಡನೆಯವನು ವೈದ್ಯರಂಗದಲ್ಲಿದ್ದಾನೆ. ನಾವು ಅವರಿಗೋಸ್ಕರ ಒಂದು ಕಾಸು ಖರ್ಚು ಮಾಡಬೇಕಾಗಲಿಲ್ಲ. ಇಬ್ಬರಿಗೂ ಮೆರಿಟ್ ಇತ್ತು, ಓದಿಕೊಂಡು ಬಂದರು. ವಿಶ್ವವಿದ್ಯಾಲಯಕ್ಕೆ ಸೇರಲು ಇಲ್ಲಿ ಸರಾಸರಿ ಶೇಕಡ 67 ಅಂಕಗಳಿರಬೇಕು. ವೈದ್ಯರಂಗಕ್ಕೆ 87% ಇರಲೇಬೇಕು. ನಮ್ಮ ಪ್ರೊಫೆಸರ್ ಮಗಳಿಗೆ 85% ಬಂದರೂ, ಸೀಟ್ ಸಿಗಲಿಲ್ಲ. ರಿಯಾಯಿತಿ ಇರೋದು ಇಲ್ಲಿಯ ನೇಟಿವ್ ಇಂಡಿಯನ್ಸ್‌ಗೆ ಮಾತ್ರ. ಅವರಿಗೂ ಕನಿಷ್ಠ ಅಂಕಗಳು ಬಂದಿರಲೇ ಬೇಕು. ಭ್ರಷ್ಟಾಚಾರ ತೀರಾ ಕಡಿಮೆ. ಹಾಗಾಗಿ ದಿನದ ಬದುಕು ಸುಖವಾಗಿದೆ.

**ನೇಮಿಚಂದ್ರ :** ಇಷ್ಟು ಅವಕಾಶಗಳಿದ್ದರೂ ಹುಡುಗಿಯರು ಹೆಚ್ಚಿನ ವಿದ್ಯಾಭ್ಯಾಸಕ್ಕೆ ನುಗ್ಗೋಲ್ಲವೆ ?

**ಡಾ॥ ನಳಿನಿ :** ಇಲ್ಲಿ ಬದುಕು ಬಹಳ ವೇಗವಾಗಿ ಮುನ್ನುಗ್ಗುತ್ತದೆ. ಹೆಣ್ಣು ಇವುಗಳ ಫಲವಾಗಿ 'ಬಸಿರು-ಗರ್ಭಪಾತ' ಇಲ್ಲ 'ಮಕ್ಕಳು'–ಈ ಸುಳಿಯಲ್ಲಿ ಸಿಕ್ಕಿಬೀಳ್ತಾಳೆ. ವಿವಾಹೇತರ ಮಗು ಎಂಬ ಸಾಮಾಜಿಕ ಕಳಂಕವೇನೂ ಇಲ್ಲ ನಿಜ. ಆದರೆ ಮಕ್ಕಳು ದೊಡ್ಡವರಾಗುವವರೆಗೂ ಅವಳನ್ನು ಕಟ್ಟಿ ಹಾಕಿದಂತೆಯೇ. ಆಕೆಯ ಯೌವನದ ವಿದ್ಯಾಭ್ಯಾಸದ ಕಾಲ ಹೀಗೇ ಮುಗಿದು ಹೋಗುತ್ತದೆ. ಮತ್ತೆ 25 ಕ್ಕೋ-30 ಕ್ಕೋ ಕೆಲಸ ಹುಡುಕಿ ಹೊರಟಾಗ ತಡವಾಗಿರುತ್ತದೆ. ಬರೀ 17–18ರ ಹುಡುಗಿಯರು, ಕೆಲಸ-ಆರ್ಥಿಕ ಬೆಂಬಲವಿಲ್ಲದೆ ಮಗು ಹೆರುತ್ತಾರೆ. ಸರ್ಕಾರ 'ವೆಲ್‌ಫೇರ್' ಅಂತ ಹಣ ಕೊಡುತ್ತದೆ. ತಲೆಯ ಮೇಲೊಂದು ಸೂರು, ಒಂದು ಹೊತ್ತಿನ ಊಟಕ್ಕೆ ತೊಂದರೆ ಇಲ್ಲ. ಆದರೆ ಈ ಸುಳಿಯಿಂದ ಹೊರಬರುವ ಅವಕಾಶಗಳೇ ಆಕೆಗಿರೋಲ್ಲ. ವಿದ್ಯಾಭ್ಯಾಸವಿಲ್ಲದೆ, ತಂದೆ-ತಾಯಿಗಳ ಬೆಂಬಲವಿಲ್ಲದೆ ಮಗು ಕಟ್ಟಿಕೊಂಡು ಒದ್ದಾಡ್ತಾರೆ. ಮಗುವನ್ನು ಬಿಟ್ಟು ಕೆಲಸಕ್ಕೆ ಹೋಗುವುದೂ ಕಷ್ಟ. ಕೆಲಸ ಹಿಡಿದರೆ 'ವೆಲ್‌ಫೇರ್' ನಿಂತು ಹೋಗುತ್ತದೆ.

**ನೇಮಿಚಂದ್ರ** : ಏಕೆ ಬೇಬಿ ಸಿಟ್ಟಿಂಗ್ ವ್ಯವಸ್ಥೆ ಬಹಳ ಇರಬೇಕಲ್ಲ ?

**ಡಾ॥ ನಳಿನಿ** : ಇದೆ. ಆದರೆ 'ಡೇ ಕೇರ್ ಸೆಂಟರ್'ಗಳು ಬಹಳ ದುಬಾರಿ. ತಿಂಗಳಿಗೆ 300 ರಿಂದ 500 ಡಾಲರ್ ! ಓರ್ವ ಸಾಮಾನ್ಯ ಗುಮಾಸ್ತ ಕೆಲಸಕ್ಕೆ ಸಂಬಳ 1700–2000 ಡಾಲರ್ ಇರುತ್ತೆ. ಅಷ್ಟರಲ್ಲಿ 300–500 ಕೊಡುವುದ್ದೇಗೆ ?

**ನೇಮಿಚಂದ್ರ** : ಒಟ್ಟಿನಲ್ಲಿ ಸ್ತ್ರೀಯು ಹೆರುವ ಕ್ರಿಯೆ, ಆಕೆಗೆ ಮುಳುವಾಗಿದೆ. ಬಹುಶಃ ಇದೇ ಕಾರಣಕ್ಕೆ ಆಕೆ ಹೆಚ್ಚು ಜಾಗರೂಕವಾಗುವುದು ಅವಶ್ಯಕ.

**ಡಾ॥ ನಳಿನಿ** : ನಿಜ, ಆದರೂ ಇಲ್ಲಿಯ ಹುಡುಗಿಯರ ಮನೋಭಾವವೂ ಹಾಗೇ ಇದೆ. ಯಾರಾದರೂ ಹೈಸ್ಕೂಲ್ ಹುಡುಗೀನ ಕೇಳಿ 'ನೀ ಮುಂದೆ ಏನಾಗ್ತೀಯಮ್ಮಾ ?' ಅಂದರೆ **I want to be a mother** ಅನ್ನುತ್ತಾಳೆ, ಬದುಕಿನ ಸಹಜ ಕ್ರಿಯೆಗಳೇ ದೊಡ್ಡ ಸಾಧನೆ ಎಂಬಂತೆ. ಹೆಚ್ಚು ಅಂದರೆ 'ನಾನು ನರ್ಸ್ ಆಗ್ತೀನಿ, ಟೀಚರ್ ಆಗ್ತೀನಿ' ಅನ್ನೋದುಂಟು. ಅವರಲ್ಲಿ ಮಹತ್ವಾಕಾಂಕ್ಷೆ ತುಂಬಬೇಕಿದೆ.

**ನೇಮಿಚಂದ್ರ** : ಈ ದಿಕ್ಕಿನಲ್ಲಿ ಸ್ತ್ರೀ ಚಳುವಳಿ ಏನು ಮಾಡ್ತಾ ಇದೆ ?

**ಡಾ॥ ನಳಿನಿ** : ಇಲ್ಲಿ ಸ್ತ್ರೀ ಚಳುವಳಿ ತಪ್ಪು ಹೆಜ್ಜೆಯಲ್ಲಿ ಆರಂಭವಾಯಿತು. 'ಹೆಂಗಸರು ಮನೆಯಿಂದಾಚೆ ಬರಬೇಕು. ಮಕ್ಕಳನ್ನು ಹೆರಬಾರದು' ಎಂಬ ತೀರಾ ವಿಪರೀತದ ವಾದದಿಂದ ಶುರುವಾಯಿತು. ಸ್ತ್ರೀವಾದವನ್ನು ಸಾಮಾಜಿಕ ಚೌಕಟ್ಟಿನೊಳಗೇ ಒತ್ತಿ ಹೇಳಬೇಕಿತ್ತು. ಸಮಾನ ಉದ್ಯೋಗದ ಅವಕಾಶ, ಸಮಾನ ಸಂಬಳ ಎಂದೆಲ್ಲ ದುಡಿದಿದ್ದರೆ ಯಶಸ್ವಿಯಾಗುತ್ತಿತ್ತು. ಅದು ಕೇವಲ ಪುರುಷ ವಿರೋಧಿ ಚಳುವಳಿಯಾಗಿ ಸೋತಿತು.

**ನೇಮಿಚಂದ್ರ** : ಸ್ತ್ರೀ ಚಳುವಳಿ ಈಗ ಯಾವ ರೂಪ ಪಡೆದಿದೆ ?

**ಡಾ॥ ನಳಿನಿ** : ಒಂದು ರೀತಿ ತಟಸ್ಥವಾಗಿದೆ. ಸಾಲದಕ್ಕೆ ಅಮೆರಿಕೆಯಲ್ಲಿ ಕೆಲವು 'ನಿಜವಾದ ಮಹಿಳೆಯರು' ಎಂಬ ಗುಂಪುಗಳೂ ಆರಂಭವಾಗಿವೆ. 'ಹೆಣ್ಣಿನ ನಿಜವಾದ ಕರ್ತವ್ಯ ಕುಟುಂಬವನ್ನು ನೋಡಿಕೊಳ್ಳುವುದು, ಗಂಡ ಮಕ್ಕಳಿಗಾಗಿಯೇ ಬದುಕುವುದು. ಗಂಡ ಬಂದೊಡನೆ ಆತನ ಬೂಟ್ಸ್ ತೆಗೆದು, ಮುಗುಳ್ನಗುತ್ತಾ ಪಾನೀಯ ನೀಡಿ,' ಅಂತಾ ಬೋಧಿಸುವ ಗುಂಪುಗಳಿವೆ. ತಮಾಷೆ ಅಂದರೆ ಇದನ್ನೆಲ್ಲ ಪ್ರಾರಂಭಿಸಿದ ಫಿಲಿಪ್ ಶಾಫಲೆ ದೇಶದುದ್ದಕ್ಕೂ ಭಾಷಣ ಬಿಗಿಯುವುದರಲ್ಲಿ ಎಷ್ಟು ತೊಡಗಿದ್ದಾಳೆ ಅಂದರೆ. ಆಕೆ ಬೋಧಿಸುವಂತೆ ಆಕಯ ಕುಟುಂಬಕ್ಕೆ ಎಷ್ಟು ಸಮಯ ನೀಡ್ತಾಳೆ, ಆಕೆಯೇ ಹೇಳಬೇಕು. ಆದರೂ ಈ ಚಳುವಳಿ ಶಕ್ತವಾಗಿದೆ, ಸರ್ಕಾರದಿಂದ ಸಾಕಷ್ಟು ಹಣ ಅವರಿಗೆ ದೊರೆಯುತ್ತೆ. ಈ ಬಗೆಯ ಹುಚ್ಚು ವಾದಗಳಲ್ಲಿ ನಿಜವಾದ ಸ್ತ್ರೀವಾದ ಸೊರಗ್ತಾ ಇದೆ. ಎಷ್ಟೊಂದು ಸ್ತ್ರೀ ಸಮಸ್ಯೆಗಳಿವೆ. ಸಮಾನ ಉದ್ಯೋಗಾವಕಾಶಕ್ಕೆ, ಸಮಾನ ಸಂಬಳಕ್ಕೆ ಹೋರಾಡಬೇಕಿದೆ. ಇಲ್ಲಿ ನರ್ಸಿಂಗ್, ಟೀಚಿಂಗ್ ನಂಥಾ ಸ್ತ್ರೀ ಪ್ರಧಾನ ಕೆಲಸಗಳಿಗೆ ಸಂಬಳ ಕಡಮೆ. ಹೆಂಗಸರ ಮೇಲಿನ ದೌರ್ಜನ್ಯಗಳೂ ಬಹಳಷ್ಟು ಇದೆ. ಇಲ್ಲಿ ಸರ್ಕಾರ ಎಷ್ಟೋ 'ರಕ್ಷಣಾಗೃಹ'ಗಳನ್ನು ಒದಗಿಸಿದರೂ ಗಂಡನಿಂದ ಬಡಿಸಿಕೊಂಡು ನರಳುವ ಹೆಂಗಸರು ಯಥೇಚ್ಛವಾಗಿದ್ದಾರೆ.

**ನೇಮಿಚಂದ್ರ** : ಕಾನೂನು ಇವರ ಮೇಲೆ ಯಾವ ಕ್ರಮವನ್ನೂ ತೆಗೆದುಕೊಳ್ಳುವುದಿಲ್ಲವೆ ?

**ಡಾ॥ ನಳಿನಿ** : ಕಾನೂನು ಖಂಡಿತಾ ಕ್ರಮ ತೆಗೆದುಕೊಳ್ಳುತ್ತದೆ. ಆದರೆ ಕಾನೂನು ಕ್ರಮ ತೆಗೆದುಕೊಳ್ಳಲು ಯಾರಾದರೂ ದೂರು ನೀಡಬೇಕು. ಒಂದು ಒಳ್ಳೆಯ ಅಂಶವೆಂದರೆ ಯಾರು ಬೇಕಾದರೂ ಇಲ್ಲಿ ದೂರು ನೀಡಬಹುದು.. ನಮ್ಮ ಪಕ್ಕದ ಮನೆಯಾತ ಪತ್ನಿಯ ಬಡಿಯುತ್ತಿದ್ದರೆ, ನಾನು ದೂರು ನೀಡಬಹುದು. ದ್ವಿಪತ್ನಿತ್ವದ ಕೇಸಿನಲ್ಲೂ ಹೆಂಡತಿಯೇ

> ಇಲ್ಲಿ ಸ್ತ್ರೀ ಚಳವಳಿ ತಪ್ಪು ಹೆಜ್ಜೆಯಲ್ಲಿ ಆರಂಭವಾಯಿತು. 'ಹೆಂಗಸರು ಮನೆಯಿಂದಾಚೆ ಬರಬೇಕು', 'ಮಕ್ಕಳನ್ನು ಹೆರಬಾರದು' ಎಂಬ ತೀರಾ ವಿಪರೀತ ವಾದದಿಂದ ಶುರುವಾಯಿತು.

ದೂರು ಕೊಡಬೇಕೆಂದಿಲ್ಲ. ಯಾರು ಬೇಕಾದರೂ ಕೇಸ್ ಫೈಲ್ ಮಾಡಬಹುದು. ನಾನು ನನ್ನ ಹೆಸರಲ್ಲೇ ದೂರು ಕೊಡಲು ಇಚ್ಛಿಸದಿದ್ದರೆ, ಒಂದು ಫೋನ್ ಮೂಲಕ ತಿಳಿಸಬಹುದು. ಪೋಲೀಸ್ ಬಂದು, ಪುರಾವೆಗಳು ಸಿಕ್ಕರೆ ಅವರೇ ಕೇಸ್ ಫೈಲ್ ಮಾಡುತ್ತಾರೆ.

**ನೇಮಿಚಂದ್ರ** : ಇದಂತೂ ತುಂಬಾ ಉತ್ತಮ ಸುಧಾರಣೆ. ನಿಮ್ಮಲ್ಲಿ ಕಾನೂನಿನ ಭ್ರಷ್ಟಾಚಾರಗಳಿಲ್ಲವೆ ?

**ಡಾ॥ ನಳಿನಿ** : ಜನ ಸಾಮಾನ್ಯರ ನಿತ್ಯ ಬದುಕಿನಲ್ಲಿ ಭ್ರಷ್ಟಾಚಾರ ಇಲ್ಲವೇ ಇಲ್ಲ ಅನ್ನಬಹುದು. ಶಾಲೆಗೆ ಸೇರಿಸಲು, ಕೆಲಸ ಗಳಿಸಲು, ಲಂಚ ಕೊಡಬೇಕಿಲ್ಲ. ಮಕ್ಕಳಿಗೆ ನೀವು ಪುಸ್ತಕ ಕೂಡಾ ಕೊಂಡು ಕೊಡಬೇಕಿಲ್ಲ. ಪೇಪರ್‌ಗಳನ್ನು—ಫೈಲ್‌ಗಳನ್ನು ತಳ್ಳಲು ಲಂಚ ಬೇಕಿಲ್ಲ. ನಾವು ಮೊನ್ನೆ ಇಲ್ಲಿ ಮನೆ ಕೊಂಡಾಗ, ಇಡೀ ಕಾಗದ ಪತ್ರಗಳು ವಾರದಲ್ಲಿ ಸಹಿಯಾಗಿ ನನ್ನ ಕೈ ಸೇರಿದವು. ತೆರಿಗೆ ವಾಪಸ್ಸಿಗೆ ಓಡಾಡಬೇಕಿಲ್ಲ. ನಿಯತ್ತಾಗಿ ಅಂಚೆಯಲ್ಲಿ, ನೀವು ತೆರಿಗೆ ಕಚೇರಿ ತಿರುಗದೆ, ಅತ್ತ ಮುಖ ಕೂಡಾ ಹಾಕದೆಯೇ, ನಿಮ್ಮ ಕೈಗೆ ಚೆಕ್ ತಲುಪಿರುತ್ತದೆ. ಇಲ್ಲಿ ಶಾಲೆಗಳ-ಆಸ್ಪತ್ರೆಗಳ ವ್ಯವಸ್ಥೆ ಅದ್ಭುತವಾಗಿದೆ.

**ನೇಮಿಚಂದ್ರ** : ಕಾರ್ ಶೆಡ್ಡಿನಲ್ಲಿ ನಡಸೋ ಶಾಲೆಗಳಿವೆ, ನಮ್ಮ ಬೆಂಗಳೂರಿನಲ್ಲಿ.

**ಡಾ॥ ನಳಿನಿ** : ಇಲ್ಲಿ ಅದು ಸಾಧ್ಯವೇ ಇಲ್ಲ—ಪ್ರತಿ ಶಾಲೆಯಲ್ಲಿ ಆಟದ ಜಾಗ ಇರಬೇಕು, ಗ್ರಂಥಾಲಯ ಇರಬೇಕು, 'ಜಿಮ್' ಇರಬೇಕು. 'ಡೇ ಕೇರ್ ಸೆಂಟರ್' ಆದರೂ ಅಷ್ಟೆ, ಲೈಸೆನ್ಸ್ ತಗೋಬೇಕು. ಸಾಕಷ್ಟು ಶೌಚದ ವ್ಯವಸ್ಥೆ ಇರಬೇಕು, ಸುರಕ್ಷಿತವಾಗಿರಬೇಕು, ಆಡಲು ಜಾಗ ಇರಬೇಕು, ಸಂಪರ್ಕಿಸಲು ಹತ್ತಿರ ವೈದ್ಯರು ಇರಬೇಕು.

**ನೇಮಿಚಂದ್ರ** : ಅಂತೂ ಅವರ ಸಂಸ್ಕೃತಿಯಿಂದ ನಾವು ಕಲಿಯಬೇಕಾದ್ದು ಬಹಳಷ್ಟಿದೆ. ನಮ್ಮ ಸಂಸ್ಕೃತಿಯ ಒಳ್ಳೆಯ ಅಂಶಗಳನ್ನು ಉಳಿಸಿಕೊಳ್ಳಬೇಕಾದ್ದೂ ಇದೆ.

**ಡಾ॥ ನಳಿನಿ** : ಖಂಡಿತಾ. ಭಾರತದಲ್ಲಿ ನೋಡಿ. ಕುಟುಂಬ ವ್ಯವಸ್ಥೆ ಇನ್ನೂ ಗಟ್ಟಿಯಾಗಿದೆ. ಮಹಿಳೆ ಒಬ್ಬಂಟಿಗಳಾಗಿ ನರಳಬೇಕಿಲ್ಲ. ಒಂದಿಷ್ಟು ಅಪ್ಪ-ಅಮ್ಮ, ಅತ್ತೆ-ಮಾವ, ಅಕ್ಕನೋ-ತಂಗಿಯೋ ಸಮಯಕ್ಕೆ ಒದಗಿ ಬರುವುದಿದೆ. ಗಂಡಂದಿರೂ ಮನೆಗೆಲಸದಲ್ಲಿ ಇತ್ತೀಚೆಗೆ ನೆರವಾಗುತ್ತಿದ್ದಾರೆ. ನಮ್ಮ ಪೀಳಿಗೆಯ ನಾವು ವಿದೇಶಕ್ಕೆ ಹೋದಾಗ ಪತಿಯ ನೆರವನ್ನು ನಿರೀಕ್ಷಿಸುವಷ್ಟು, ಹಕ್ಕಿನಂತೆ ಪಡೆಯುವಷ್ಟು ಜಾಗೃತರಾಗಿರಲಿಲ್ಲ. ಮನೆ-ಮಕ್ಕಳು ಹೆಂಗಸರ ಜವಾಬ್ದಾರಿ ಎಂದು ಒಪ್ಪಿಕೊಂಡು ಹೊರಗೂ-ಒಳಗೂ ದುಡಿದೆವು. ವಿದೇಶಕ್ಕೆ ತೆರಳಿ, ಅಮ್ಮ-ಅತ್ತೆಯರ ನೆರವೂ, ನೆರಳೂ ಇಲ್ಲದಾಗಿತ್ತು. ಈಗಿನ ಹುಡುಗಿಯರು ಹೆಚ್ಚು 'ಅಸರ್‌ಟಿವ್' ಆಗಿದ್ದಾರೆ. ಇದು ನಿಜಕ್ಕೂ ಸಂತೋಷದ ವಿಷಯ.

**ನೇಮಿಚಂದ್ರ** : ನಿಮ್ಮ ಅನಿಸಿಕೆ-ಅನುಭವಗಳ 'ವನಿತಾ'ದೊಡನೆ ಹಂಚಿಕೊಂಡಿರಿ, ಧನ್ಯವಾದಗಳು. ನಮಸ್ತೆ.

**ಡಾ॥ ನಳಿನಿ** : ನಮಸ್ತೆ.

**

# ಕೇಶಾಲಂಕಾರ







## ವಧುವಿನ ಕೇಶಾಲಂಕಾರ

ಚಿತ್ರ (1) ರಲ್ಲಿ ತೋರಿಸಿರುವಂತೆ ಮುಂಭಾಗದ ಕೂದಲನ್ನು ಪಿನ್ ಮಾಡಿ.

ನಂತರ ಪಾರ್ಶ್ವದ ಎರಡೂ ಕಡೆಯ ಕೂದಲು ವಿರುದ್ಧ ದಿಕ್ಕಿಗೆ ಬರುವಂತೆ ಪಿನ್ ಮಾಡಿ ಉಳಿದ ಕೂದಲನ್ನು ಹಾಗೆಯೇ ಬಿಡಿ.

ಕೆಳ ಭಾಗದ ಕೂದಲನ್ನು ಮೇಲ್ಮುಖವಾಗಿ ಸುತ್ತುತ್ತಾ ಬಂದು ಪಿನ್ ಮಾಡಿ. ನಂತರ ಉಳಿದ ಪಾರ್ಶ್ವದ ಕೂದಲನ್ನು ಎರಡೂ ಕಡೆಯ ಕಿವಿಯ ಪಕ್ಕದಲ್ಲಿ ಬರುವಂತೆ ಪಿನ್ ಮಾಡಿ. (ಚಿತ್ರ 2) ನಂತರ ಮುತ್ತುಗಳಿಂದ ಅಲಂಕರಿಸಿ (ಚಿತ್ರ 3).

—ಗಾಯತ್ರಿ ಎಸ್. ಕುಮಾರ್

—ಜಯಶ್ರೀ ಶ್ರೀಧರ್

ಚಿತ್ರಗಳು : ಡಿ. ಸಿ. ನಾಗೇಶ್

# ಹುಟ್ಟಿದ ಹಬ್ಬ



**ಅಪೂರ್ವ: 20-5-1991**
ತಾಯಿ: ವಿಜಯಲಕ್ಷ್ಮಿ ಎಸ್. ರಾವ್, ಬೆಳಗಾಂವ



**ಅಮೃತವರ್ಷಿಣಿ: 13-5-1991**
ತಾಯಿ: ಭಾರತಿಶಂಕರ್ (ನ್ಯೂದಿಲ್ಲಿ)



**ಬಿ. ಅಭಿಷೇಕ್: 14-5-1991**
ತಾಯಿ: ಅನಿತಾ ಬದರೀನಾಥ್, ಕೋಲಾರ



**ಸಾಹಿತ್ಯ: 11-5-1991**
ತಾಯಿ: ರೂಪ ಲೋಕೇಶ್‌ಕುಮಾರ್, ದಾವಣಗೆರೆ



**ಪೂಜಾ ಆರಾಧ್ಯ: 9-5-1991**
ತಾಯಿ: ಲತಾಕುಮಾರ್, ಮೈಸೂರು



**ಬಿ. ರಾಕೇಶ್: 20-5-1991**
ತಾಯಿ: ರಾಧಿಕಾ ರಾಘವೇಂದ್ರ ನಾಯಕ, ಬೆಳಗಾಂವ



**ರೋಷನ್: 7-5-1991**
ತಾಯಿ: ಸಂಧ್ಯಾ ರವಿ, ಡೊಂಬಿವಲಿ



**ರಚಿತ್: 23-5-1991**
ತಾಯಿ: ಪಾವನಾ ರಾಜಾರಾವ್, ಧರ್ಮಸ್ಥಳ

# ಮದುವೆ ಸೀರೆ



—ಮಧುಮತಿ ಪಾಟೀಲ

ಅತ್ತೆಯ ಕಾಗದ ಕೈಲಿ ಹಿಡಿದು ದುಗುಡದ ಮುಖ ಹೊತ್ತು ಕುಳಿತಿದ್ದಳು ಉಮಾ, ಪತಿ ರಮೇಶ ಆಫೀಸಿನಿಂದ ಬರುವ ಹೊತ್ತಿಗೆ. ಬಂದ ತಕ್ಷಣ ಅವನ ಕೈಗೆ ಕಾಗದ ಕೊಟ್ಟಳು. ಅದರಲ್ಲಿದ್ದು ಇಷ್ಟೆ ಅವಳ ಮೈದುನ ಶ್ರೀರಾಮನ ಮದುವೆ ನಿಶ್ಚಯವಾಗಿದ್ದು. ಇನ್ನು ಹದಿನೈದು ದಿನಕ್ಕೆ ಮದುವೆ. 8 ದಿನ ಮುಂಚಿತವಾಗಿ ಉಮಾ ಮಕ್ಕಳು ಬರಬೇಕು, ಸಹಾಯ ಮಾಡಲು. ಅವಳ ಓರಗಿತ್ತಿ ಕೆಲಸದಲ್ಲಿದ್ದರೂ 15 ದಿನ ರಜಹಾಕಿ ದಾವಣಗೆರೆಯಿಂದ ಬರುತ್ತಿದ್ದಾಳೆ. ತಮ್ಮ ಹೆಣ್ಣು ಮಕ್ಕಳೂ 4 ದಿನ ಮುಂಚಿತವಾಗಿ ಬರುತ್ತಿದ್ದಾರೆ. ಅವರು ಬರುವಷ್ಟರಲ್ಲಿ ತಿಂಡಿಯ ಕೆಲಸ ಮುಗಿಸ ಬೇಕು, ಇತ್ಯಾದಿ.

"ಇದರಲ್ಲಿ ಅಂಥದ್ದೇನಿದೇಂತ ನೀನು ಹೀಗೆ ಮುಖ ಮಾಡಿದ್ದೀಯಾ ಉಮಾ" ಎಂದ ರಮೇಶ.

"ನೋಡಿ, ನನ್ನ ಮದುವೆ ಆದ ಹೊಸತರಲ್ಲಾದುದನ್ನು ಮರೆತುಬಿಟ್ರಾ. ನನಗೇನೂ ನನ್ನ ಅತ್ತೆ ಊರು ಹಳ್ಳಿ ಅಂತ ಬೇಸರವಿಲ್ಲ, ಇರಬಾರದೂಂ ತಾನೂ ಇಲ್ಲ. ಆಗ ಅವರೇನಾದ್ರೂ ನಮಗೆ ತಿಳಿಸಿಕೊಟ್ಟಿದ್ರೆ ನಾವು ಹೊಸಬ್ರು ಅಂತಂದ್ಕೊಂಡು ತಾವೇ ಹೊಂದ್ಕೊಂಡಿದ್ರೆ ನಮ್ಗೆ ಹೀಗೆ ಮದ್ವೆಯಾಗಿ ಹತ್ತು ವರ್ಷ ಆದ್ರೂ ಆ ಹಳ್ಳಿಗೆ ಹೋಗೋದಕ್ಕೆ ಬೇಜಾರಾಗ್ತಿರಲಿಲ್ಲ. ಆಗಿಂದು ನೆನೆಸ್ಕೊಂಡ್ರೆ ನನಗಂತೂ ನೇರವಾಗಿ ಮದ್ವೆಗೇ ಧಾರವಾಡಕ್ಕೆ ಹೋಗೋಣ ಅನಿಸುತ್ತೆ."

"ಹಾಗಾಗೋದಿಲ್ಲ ಉಮಾ. ಇದು ಕೊನೆ ಮದ್ವೆ. ನೀವಿಬ್ಬರೂ ಓರಗಿತ್ತಿಯರು ಬಂದ ಮೇಲೆ ಮಾಡೋ ಮೊದಲನೆ ಮದ್ವೆ. ನೀವು ಓಡಾಡಿ ಮದ್ವೆ ನಡೆಸಿಕೊಡ್ಲಿದ್ರೆ ಜೀವನಪರ್ಯಂತ ನೀವೇ ಮಾತು ಕೇಳಬೇಕಾಗುತ್ತೆ. ಅಮ್ಮಂಗೂ ಅಷ್ಟು ಹುಷಾರಿರೋದಿಲ್ಲ. ಕಿವಿ ಬಾಯಿ ನಂದಲ್ಲ ಅಂದ್ಕೊಂಡು ಮದ್ವೆ ಮುಗ್ಸಿಕೊಂಡು ಬರೋದು" ಉಮಾ ಮಾತಾಡದೆ ಕಾಫಿ ತರಲು ಒಳಗೆದ್ದು ಹೋದಳು.

ತನ್ನ ಹಾಗೂ ಅಣ್ಣ ಸುರೇಶನ ಮದುವೆ ನೆನಪಾಯಿತು ರಮೇಶನಿಗೆ. ಸುರೇಶನ ಮದುವೆಯಾಗಿ ಎರಡು ದಿನಕ್ಕೆ ತನ್ನ ಮದುವೆಯಾಗಿತ್ತು. ಅಣ್ಣ ಸುರೇಶ ದಾವಣಗೆರೆಯಲ್ಲಿ ಬ್ಯಾಂಕಲ್ಲಿದ್ದ ತಾನು ಬೆಂಗಳೂರಲ್ಲಿ. ತಮ್ಮ ಮದರಾಸಿನಲ್ಲಿದ್ದ. ಇಬ್ಬರು ಅಕ್ಕಂದಿರೂ ದೊಡ್ಡವರು. ಮಾಲತಿ ಮದ್ರಾಸಿನಲ್ಲಿದ್ದರೆ ಸುಮತಿ ಬೆಂಗಳೂರಲ್ಲಿದ್ದರು. ಇಬ್ಬರೂ ಓದಿದವರಾಗಿದ್ದು ದೊಡ್ಡ ಮಕ್ಕಳಿದ್ದರು. ಆದರೂ ತಾಯಿಯಂತೆ ಒಂದು ರೀತಿಯ ಸ್ವಭಾವದವರು. ಸುರೇಶನ ಹೆಂಡತಿಯೂ ಕೆಲಸದಲ್ಲಿದ್ದವಳು. ಆದರೆ ಉಮಾ ಓದಿದ್ದರೂ ಕೆಲಸದಲ್ಲಿರಲಿಲ್ಲ. ತನಗೂ ಅಂಥ ಹೆಂಡತಿಯೇ ಬೇಕೆಂದು ತಾಯಿ ಅಕ್ಕಂದಿರ ಮನಸ್ಸಿನ ವಿರುದ್ಧ ಉಮಳ ಕೈ ಹಿಡಿದಿದ್ದ. ತನ್ನ ಮೇಲಿನ ಅಸಹನೆಯನ್ನು ಉಮಳ ಮೇಲೆ ತೀರಿಸಿಕೊಳ್ಳುತ್ತಿದ್ದರು. ತಾಯಿ ಹಾಗೂ ಅಕ್ಕಂದಿರು ಮದುವೆಯಾದ ಎರಡು ದಿನಕ್ಕೆ ತಮ್ಮ ಊರು ಧಾರವಾಡದ ಹತ್ತಿರದ ಹಳ್ಳಿಗೆ ಹೋದಾಗ ಉಮಳ ತವರು ಮನೆಯವರು ಕೊಟ್ಟ ಸಾಮಾನುಗಳನ್ನು ಹೀಯಾಳಿಸಿ ಉಮಳ ಕಣ್ಣಲ್ಲಿ ನೀರು ತರಿಸಿದ್ದರು. ರೂಢಿಯಿರದಿದ್ದ ಉಮಳಿಗೆ 4 ದಿನಕ್ಕೇ ಮದುಮಗಳೆಂದು ನೋಡದೆ ಬಾವಿಯಿಂದ ನೀರು ತರಲು ಹಚ್ಚಿದ್ದರು. ಉಮಳ ತವರು ಬೆಂಗಳೂರಾದರೂ ಅವಳ ಅಣ್ಣ ಧಾರವಾಡದಲ್ಲಿ ಕೆಲಸದಲ್ಲಿದ್ದ. ಉಮ ಅಲ್ಲಿ ಹೋದಾಗಲೆಲ್ಲ, ಪತಿಯ ಜತೆ ಇದ್ದರೆ ಮಾತ್ರ ಒಂದೆರಡು ದಿನ ಹಳ್ಳಿಗೆ ಹೋಗಿ ಬರುತ್ತಿದ್ದಳು. ರಮೇಶನಿಗೆ ಬರುವದು ಆಗದಿದ್ದರೆ ತಾನೊಬ್ಬಳೆ ಇಬ್ಬರು ಮಕ್ಕಳ ಸಂಗಡ ಬೆಳಿಗ್ಗೆ ಹೋಗಿ ಸಂಜೆ ಬಂದು ಬಿಡುತ್ತಿದ್ದಳು. ಅದಕ್ಕೂ ಅವರೆಲ್ಲ ಅತ್ತೆ ಮನೆ ಅಂದ್ರೆ ಉಮಳಿಗೆ ಬೇಡ ಎಂದುಕೊಂಡು ಮಾತಾಡದೆ ಬಿಡುತ್ತಿರಲಿಲ್ಲ. ಆದರೆ ಸುರೇಶನ ಹೆಂಡತಿ ಸುಮಾ ಹಾಗಲ್ಲ. ಯಾರೇನೆಂದರೂ, ಅದಕ್ಕೆ ಎದುರು ವಾದಿಸಿ, ಸುಮ್ಮನಾಗಿಸುತ್ತಿದ್ದಳು. ಆದರೆ ಉಮಾ ದೊಡ್ಡವರಿಗೆ ಹೇಗೆ ತಿರುಗಿ ಮಾತಾಡುವದಪ್ಪ ಎಂದು ಹೆದರುತ್ತಿದ್ದಳು.

ಮುಂದೆ ಎರಡು ದಿನಕ್ಕೆ ಉಮಾ, ರಮೇಶ, ಮಕ್ಕಳು ಹಳ್ಳಿ ತಲುಪಿದರು. ಎರಡು ದಿನಕ್ಕೆ ಸುಮಾ, ಸುರೇಶ ಬಂದರು. ಚಕ್ಕುಲಿ, ಉಂಡೆ, ಅವಲಕ್ಕಿಗಳ ಕಾರಖಾನೆ ಶುರುವಾಯಿತು. ಹೊರಗಿನ ಕೆಲಸಕ್ಕೆ ಇಬ್ಬರು ಹೆಣ್ಣಾಳಿದ್ದರು. ಸುಮಾ ಉಮಾರ ಕೆಲಸವೆಂದರೆ ತರಕಾರಿ ಹೆಚ್ಚಿಕೊಡುವದು. ಬಡಿಸುವುದು. ಎಲೆ ತೆಗೆಯುವದು. ಅಷ್ಟೆ. ಅದೂ ಬಡಿಸುವಾಗ ಅತ್ತೆ ಸುಬ್ಬಮ್ಮನನ್ನು ಎಲ್ಲದಕ್ಕೂ ಕೇಳಬೇಕು. ಅವರು ಯಾರಿಗೆ ಮೊಸರು ಹಾಕಲು ಹೇಳುವರೋ ಅವರಿಗಷ್ಟೇ ಹಾಕಬೇಕು. ಮಕ್ಕಳಿಗೆ ಹಾಲು ಇದ್ದರೆ ಅವರನ್ನು ಕೇಳಿ ಎಷ್ಟು ತೆಗೆದುಕೊಡುತ್ತಾರೋ ಅಷ್ಟರಲ್ಲೇ ನಾಲ್ವರಿಗೂ ಹಂಚಬೇಕು. ಸೊಸೆಯರಿಗೆ ಇದು ಅಪರಿಚಿತ ಜಾಗ. ಅಪರತ್ತ ಗಮನ ಹರಿಸಲೂ ಬಿಡುವಿರಲಿಲ್ಲ. ಅಥವಾ ಅವರಿಗೆಲ್ಲ ಸಾಮಾನುಗಳ ಸ್ಥಳ ತೋರಿಸಿ ಎಲ್ಲ ಕೆಲಸ ವಹಿಸಿ ಅವರಿಗೇ ಜವಾಬ್ದಾರಿ ಹೊರಿಸಲೂ ಅವರಿಗೆ ಮನಸ್ಸಿಲ್ಲ. ಮದುವೆ ನಾಲ್ಕು ದಿನ ಇರುವಾಗ ಮಾಲತಿ, ಸುಮತಿ, ಶ್ರೀರಾಮ ಒಟ್ಟಿಗೆ ಬಂದಿಳಿದಾಗ. ಅಡಿಗೆಯವರನ್ನು ಕರೆತಂದರು. ಆದರೆ ಸುಬ್ಬಮ್ಮನವರ ಗಮನ ಪೂರ್ಣ ಮದುಮಗ ಹಾಗೂ ಹೆಣ್ಣು ಮಕ್ಕಳ ಮೇಲೆ ಹೋಯಿತು. ಅವರಿಗೆ ಉಪಚರಿಸುವುದರಲ್ಲಿ ಇತರ ಗಂಡು ಮಕ್ಕಳು ಹಾಗೂ ಸೊಸೆಯರಿಗೆ ತಿಂಡಿ ಉಳಿಯದಿದ್ದುದೂ ಅವರ ಗಮನಕ್ಕೆ ಬರುತ್ತಿರಲಿಲ್ಲ. ಎಷ್ಟೋಸಾರಿ ಸುಮಾ ಉಮಾ ತಮ್ಮ ಮಕ್ಕಳು ಹಸಿವೆಯೆಂದಾಗ ಬೀಗ ಹಾಕಿರುವ ಉಗ್ರಾಣವನ್ನು ನೋಡಿ ಮಕ್ಕಳಿಗೆ ಅಂಗಡಿಯಿಂದ ಏನಾದರೂ ತರಿಸಿ ತಿನ್ನಿಸುತ್ತಿದ್ದರು.

ಛತ್ರಕ್ಕೆ ಹೊರಡುವ ದಿನವಂತೂ ಉಮಾ ರಮೇಶ, ಗಾಡಿಗೆ ಎಲ್ಲ ಸಾಮಾನು ಹಾಕಿಸುವದರಲ್ಲಿ ಮಗ್ನರಾಗಿದ್ದರು. ಮದುವೆ ಧಾರವಾಡದಲ್ಲಿ. ಏನೇನೂ ಮರೆಯುವ ಹಾಗಿರಲಿಲ್ಲ. ಮಗ ಸೊಸೆಯರ ಊಟ ಆಗಿಲ್ಲ ಎಂಬುದನ್ನು ಮರೆತು ಸುಬ್ಬಮ್ಮ ಅಡುಗೆಯನ್ನು ತಾವು ಸುಮನ

ಸಹಾಯದಿಂದ ಎಲ್ಲರಿಗೂ ಬಡಿಸಿದರು. ಊಟ ಆದ ತಕ್ಷಣ ಸುಮ, ಸುರೇಶ ತಮ್ಮ ಜತೆ ಬಸ್ಸಿನಲ್ಲಿ ಬರುವವರನ್ನು ಕರೆಯಲು ಹೋದರು. ಸುಬ್ಬಮ್ಮ ಉಳಿದುದನ್ನು ಕೆಲಸದವರಾದ ನಾಗವ್ವ ಎಲ್ಲವ್ವರಿಗೆ ಕೊಟ್ಟು ಕಳುಹಿಸಿದರು.

"ಊಟ ಬಡಿಸಮ್ಮ" ಎನ್ನುತ್ತ ಒಳಗೆ ಬಂದ ರಮೇಶ. ಸುಬ್ಬಮ್ಮ "ಯಾಕೋ ಊಟ ಆಗಿಲ್ಲವೇ" ಎನ್ನುತ್ತ ಅವನ ಹಿಂದೇ ಬಂದ ಉಮಳಿಗೆ "ಏನೇ ನೀನವನಿಗೆ ಬಡಿಸಲಿಲ್ಲವೆ" ಎಂದರು.

"ನಂದಷ್ಟೆ ಅಲ್ಲ ಅವಳದೂ ಆಗಿಲ್ಲ. ನಾವಿಬ್ರೂ ಬಸ್ಸಿಗೆ ಸಾಮಾನು ಹಾಕ್ತಾ ಇದ್ವಿ ಅಂತ ಮರೆತು ಬಿಟ್ಯಾ."

"ಅಯ್ಯೋ ನಂಗೇನು ಗೊತ್ತು ಒಂದ್ಮಾತು ಉಮ ಬಂದು ಹೇಳ್ಬಾರ್ದ" ಎಂದರು. "ನಾನು ಅಡಿಗೆ ನಾಗವ್ವ ಎಲ್ಲವ್ವರಿಗೆ ಕೊಟ್ಬೆ" ಎಂದರು.

"ಅಲ್ಲಮ್ಮ. ಉಮಾಗೂ ನಂಗೂ ಅಲ್ಲಿ ಕೈ ತುಂಬ ಕೆಲ್ಸ. ನೀನಾದ್ರೂ ಮರೀತಿಯಾಂತ ನನಗೆ ಹೇಗೆ ಗೊತ್ತಾಗಬೇಕು. ನಿನ್ನೆ ಮಾಲತಿ ಕಾಫಿ ಕುಡಿದೇ ದೇವಸ್ಥಾನಕ್ಕೆ ಹೋದಳೂಂತ ಎತ್ತಿಟ್ಟು ಅವಳು 'ಶಂಕ್ರಣ್ಣನ ಮನೇಲಿ ಕುಡಿದು ಬಂದೀದಿನಿ ಬೇಡಾಂದ್ರೂ' ಬಲವಂತ ಮಾಡಿ ಬಿಸಿ ಮಾಡಿ ಕೊಡಲಿಲ್ಲವೆ. ಮಗಳ್ನ ಮರೀದೇ ಇದ್ದವಳು ನನ್ನ ಮರೀತಿಯಾಂತ ನನಗ್ಹೇಗೆ ಅನಿಸಬೇಕು".

ಸುಬ್ಬಮ್ಮ ಸುಮ್ಮನಿದ್ದರು. ಆದರೆ ಮಾಲತಿ "ಯಾಕಪ್ಪ. ನಿಮ್ಮ ಮದುವೆಯಾದಾಗಲಿಂದ ನೀವಂತೂ ಚೆನ್ನಾಗಿ ಮಾತಾಡಿಸಲ್ಲ. ಇನ್ನು ಅಮ್ಮಂಗೆ ನಮ್ಮ ಮೇಲೆ ಪ್ರೀತಿ ಇರೋದು ನೋಡಿ ಕಣ್ಣು ಕಿಸರಾಯ್ತು."

"ನೋಡು ಮಾಲತಿ. ಅಮ್ಮಂಗೆ ನಿಮ್ಮೇಲೆ ಪ್ರೀತಿಂತ ನಂಗೆ ಹೊಟ್ಟೆ ಕಿಚ್ಚಿಲ್ಲ. ಆದ್ರೆ ಅರ್ಧದಷ್ಟಾದ್ರೂ ನಮ್ಮೇಲೆ, ಸೊಸೆಯಂದ್ರ ಮೇಲೆ ಇದ್ರೆ ಎಷ್ಟೋ ಸಮಾಧಾನ"

ಅಷ್ಟರಲ್ಲಿ ಉಮಾ ಉಪ್ಪಿಟ್ಟು ತಗೊಂಡು ಬಂದಳು. ಸುಮಾ, ಸುರೇಶ ಕೂಡ ಬಂದರು. "ಬೇಗ ಎಲ್ಲ ರೆಡಿಯಾಗಿ. ಎಲ್ಲರೂ ರೆಡಿಯಾಗಿದಾರೆ. ಇನ್ನೇನು ಎಲ್ರೂ ಬರ್ತಾರೆ. ಈಗಾಗ್ಲೆ ನಾಲ್ಕು ಗಂಟೆ. ಆರು ಗಂಟೆಗೆಲ್ಲಾ ಛತ್ರದಲ್ಲಿರಬೇಕು" ಎಂದ ಸುರೇಶ.

ಸುಬ್ಬಮ್ಮ "ನೋಡ ಮಾಲತಿ ನಾನು ಸೀರೆ, ವಸ್ತ್ರ ಇಟ್ಟಿದ್ದ ಟ್ರಂಕಿನ ಕೀಲಿಕೈ ನಿನ್ನ ಹತ್ರ ಇಟ್ಕೊ. ನಾ ನಾಂದಿಗೆ ಕೂತಾಗ ನನಗೇನ ಬೇಕೂ ತಂದಕೊಡು" ಅಂದು ಕೀಲಿಕೈ ಅವಳ ಕೈಲಿಟ್ಟರು. ಅದನ್ನು ನೋಡಿ ಸುಮ, ಉಮಾ ಮುಖ ನೋಡಿಕೊಂಡರು. ಸುಬ್ಬಮ್ಮ ಗಂಡು ಹೆಣ್ಣು ಮಕ್ಕಳ ಹತ್ತಿರ ಧಾರವಾಡ ಕನ್ನಡದಲ್ಲಿ ಮಾತನಾಡಿದರೆ, ಗಂಡು ಮಕ್ಕಳು ಸೊಸೆಯರ ಹತ್ತಿರ ಬೆಂಗಳೂರ ಕನ್ನಡದಲ್ಲಿ ಮಾತಾಡುತ್ತಿದ್ದರು.

ಎಲ್ಲರೂ ಛತ್ರ ಸೇರಿಯಾಯಿತು. ಮದುವೆಯ ಕಾರ್ಯಕ್ರಮಗಳು ಶುರುವಾದವು. ಸುಮಾ, ಉಮಾ ಮೂಕ ಪ್ರೇಕ್ಷಕಿಯರು. ಕಾರು ಬಾರೆಲ್ಲ ಮಾಲತಿ, ಸುಮತಿಯರದು.

ಮೈದುನ ಶ್ರೀರಾಮನ ಪತ್ನಿಯಾಗುವವಳು ಹಾಸನದವಳು. ಇವರ ಬಯಕೆಯಂತೆ ಮದುವೆ ಧಾರವಾಡದಲ್ಲಿ ನಡೆದಿತ್ತು. ವಧು ಸುಗುಣ ಕೂಡ ಪಿ.ಜೆ.ಟಿ.ಯಲ್ಲಿ ಕೆಲಸ ಮಾಡುತ್ತಿದ್ದಳು.

ಅಂತೂ ಮದುವೆ ಮುಗಿದು ಹಳ್ಳಿಗೆ ಹೊರಟು ನಿಂತರು. ಬೀಗರ ಪೈಕಿ ಒಂದಿಬ್ಬರು ಮಾತ್ರ ವಧುವಿನ ಜತೆ ಬಂದಿದ್ದರು. ಮರುದಿನವೇ ಹಳ್ಳಿಯಲ್ಲಿ ನಡೆಯುವ ಸತ್ಯನಾರಾಯಣ ಪೂಜೆ ಮುಗಿಸಿಕೊಂಡು ಹೊರಡುವವರಿದ್ದರು. ಉಮಾ ಸುಮಾರು ಅಂದೇ ಹೊರಡುವವರಿದ್ದರು.

ಪೂಜೆಯ ದಿನವಂತೂ ಗಲಾಟೆಯೋ ಗಲಾಟೆ. ಊರ ಜನರಿಗೆಲ್ಲ ಊಟಕ್ಕೆ ಹೇಳಿದ್ದರು. ಅಡಿಗೆಯವರೇನೋ ಇದ್ದರು. ಆದರೆ ಬಡಿಸುವರು ಎಲೆ ತೆಗೆಯುವದರಲ್ಲಿ ಸುಸ್ತಾದರು. ಸುಮತಿ, ಮಾಲತಿಯರಿಗಂತೂ ಮನೆಯ ಹೆಣ್ಣು ಮಕ್ಕಳಾಗಿ ಹೊಸ ಸೊಸೆಯೆದುರು ಕೆಲಸ ಮಾಡಲು ಮನಸ್ಸಿಲ್ಲ.

ಏನಾದರೂ ಆಗಲಿ ಎಂದು ತಮ್ಮ ಊಟವಾದ ತಕ್ಷಣ ಸುಮಾ ಬಟ್ಟೆ ತೆಗೆದಿರಿಸಿಕೊಳ್ಳಲು ಕುಳಿತಳು. ಸುಮಾ ದಾವಣಗೆರೆಯಾದರೆ, ಉಮಾ ಬೆಂಗಳೂರಿಗೆ ಹೊರಡಬೇಕು. ರಮೇಶ ಮೊದಲೇ ರಿಜರ್ವೇಶನ್ ಮಾಡಿಸಿದ್ದ. ಅವನು ಮಾತ್ರ ಎರಡು ದಿನ ಬಿಟ್ಟು ಬರುವವನಿದ್ದ. ಎಲ್ಲರ ಊಟವಾದ ನಂತರ ಸುಬ್ಬಮ್ಮ ಎಲ್ಲರಿಗೂ ಉಡುಗೊರೆ ನೀಡಲು ಕುಳಿತರು.

ಮೊದಲು ಹೆಣ್ಣು ಮಕ್ಕಳಿಗೆ ಇಬ್ಬರಿಗೂ ಒಂದೇ ರೀತಿಯ ಒಳ್ಳೇ ರೇಶ್ಮೆ ಸೀರೆ. ತಮ್ಮ ತಂಗಿಯರಿಗೆ ಹಾಗೂ ಸುಮಾ, ಸುಗುಣರಿಗೆ ಬೆಲೆ ಬಾಳುವ ಪಾಲಿಸ್ಟರ ಸೀರೆಗಳು. ನಂತರ ಉಮಾಳ ಹತ್ತಿರ ಬಂದರು. ಸ್ವಲ್ಪ ದೂರ ನಾಗವ್ವ, ಎಲ್ಲವ್ವ ಕುಳಿತರು.

"ನೀನ್ಹೇಗಿದ್ದರೂ ಮನೆಲಿರುವವಳು. ಹೀ ಹೀ" ಎಂದು ದೇಶಾವರಿ ನಗು ನಗುತ್ತ ಉಮಾಗೆ ಒಳ್ಳೆಯ ಕಾಟನ್ ಸೀರೆಯನ್ನಿತ್ತರು. ನಂತರ ನಾಗವ್ವ ಎಲ್ಲವ್ವರಿಗೂ ಅಂಥದ್ದೇ ಸೀರೆಯನ್ನಿತ್ತಿದ್ದು ಎಲ್ಲರ ಗಮನಕ್ಕೆ ಬಂತು. ಸುಮತಿ ಮಾಲತಿಯರ ಮುಖಗಳಲ್ಲಿನ ಕುಹಕ ಉಮಾಗೆ ಸ್ಪಷ್ಟವಾಗಿ ಗೋಚರವಾಯಿತು. ನವವಧು ಸುಗುಣಳೂ ಮೊದಲು ಬೆರಗಾದಂತೆ ಕಂಡರೂ, ಉಮಳ ಬಗ್ಗೆ ತಾತ್ಸಾರ ವ್ಯಕ್ತವಾಯಿತು.

ಉಮಾ ತಟ್ಟನೆ ಒಳಗೆದ್ದು ಹೋದಳು. 'ಅಂದ್ರೆ ಅತ್ತೆಗೆ ತಾನು ಎಲ್ಲವ್ವ, ನಾಗವ್ವರ ಸರಿಸಮನಾದೆನೆ. ಒಂದೇ ವ್ಯತ್ಯಾಸವೆಂದರೆ ಅವರು ಒಳಗೆ ಬಂದು ಕೆಲಸ ಮಾಡುವ ಹಾಗಿಲ್ಲ. ತಾನು ಮಾಡಬಹುದು.'

ಅಷ್ಟರಲ್ಲೇ ಹೊರಡುವ ವೇಳೆಯಾಯಿತೆಂದು ರಮೇಶ ಅವಸರಿಸತೊಡಗಿದ. ಧಾರವಾಡದವರೆಗೆ ಹೋಗಲು ಗಾಡಿ ಗೊತ್ತು ಮಾಡಿದ್ದ.

ಸುಮಾ, ಉಮಾ ನಗುತ್ತಲೇ ಎಲ್ಲರಿಗೂ ನಮಸ್ಕರಿಸಿ ದೇವರ ಮುಂದಿದ್ದ ಕುಂಕುಮ ಹಚ್ಚಿಕೊಂಡು ಹೊರಟರು. ಅವರನ್ನು ಕಳುಹಿಸಲು ಎಲ್ಲರೂ ಆಗಲೇ ಹೊರಗಡೆ ನಿಂತಿದ್ದರು.

ಸುಮಾ, ಸುರೇಶ, ಉಮಾ, ಮಕ್ಕಳು ಗಾಡಿ ಹತ್ತಿದ್ದರು. ಅವರಿಗೆ ಕೈಬೀಸಿ ಒಳಗೆ ನಡೆದರು, ಸುಬ್ಬಮ್ಮ ಹಾಗೂ ಇತರರು.

ಸುಗುಣ ಏಕೋ ದೇವರ ಕೋಣೆಗೆ ಹೋದವಳು ಅಲ್ಲಿಂದಲೇ ಅತ್ತೆಯನ್ನು ಕೂಗಿದಳು. ಅವಳು ಕೂಗಿದ ರೀತಿಗೆ ಸುಬ್ಬಮ್ಮ, ಸುಮತಿ, ಮಾಲತಿ ಕೋಣೆಗೆ ಬಂದರು.

ದೇವರ ಮುಂದೆ ಮಣೆಯ ಮೇಲೆ ಸುಮ, ಉಮರಿಗೆ ಕೊಟ್ಟ ಸೀರೆಗಳು ನಗುತ್ತಿದ್ದವು. ರವಿಕೆ ಕಣಗಳು ಮಾತ್ರ ಇರಲಿಲ್ಲ.

"ನನಗಾದ ಅವಮಾನ ಸಹಿಸಲಾರೆ" ಎಂದು ಉಮಳ ಸೀರೆ ಕೂಗಿ ಹೇಳುತ್ತಿದ್ದರೆ, "ನನ್ನ ಜತೆಗಾತಿಗೆ ಸಿಕ್ಕದ ಗೌರವ ನನಗೂ ಬೇಡ" ಎಂದು ಸುಮಳ ಸೀರೆ ಸಾರಿ ಹೇಳುವಂತಿತ್ತು. **

# ಒಂದು ಬಾಲ್‌ಗೆ 286 ರನ್

ನೀತಿ ನಿಯಮಗಳು ವಿವಾದವನ್ನೆಬ್ಬಿಸುತ್ತವೆಯೆ? ಹೌದು. ಕ್ರಿಕೆಟ್ ಕ್ರೀಡೆಯ ವಿಶ್ವಕಪ್ ಸ್ಪರ್ಧೆಯಲ್ಲಿ 1 ಬಾಲ್‌ಗೆ 22 ರನ್ ಮಾಡಬೇಕಾದ ಪರಿಸ್ಥಿತಿ ಬಂದಾಗ ವಿಶ್ವದಾದ್ಯಂತ ಈ ಕುರಿತು ಚರ್ಚೆ ನಡೆಯಿತು. ಕ್ರೀಡಾ ವರದಿಗಾರರು, ಆಸಕ್ತ ಪತ್ರಕರ್ತರು ಬರೆದ ಅಂಕಣಗಟ್ಟಲೆ ಆಕ್ಷೇಪಣಾ ಲೇಖನಗಳು ರೀಮುಗಟ್ಟಲೆ ಮುದ್ರಣಾ ಕಾಗದದಲ್ಲಿ ಅಚ್ಚಾದವು. ಬಾನುಲಿ ದೂರದರ್ಶನಗಳು ಹಲವು ಗಂಟೆಗಳ ಕಾಲ ಇದಕ್ಕಾಗಿ ಮೀಸಲಾಯಿತು. ಇಬ್ಬರು ಸೇರಿದ ಜಾಗದಲ್ಲಿ ಮಾತುಕತೆಯ ಮುಖ್ಯಾಂಶ ಇದೇ ಆಗಿತ್ತು. "ಇದೆಂಥ ಅನಿಷ್ಟ ನಿಯಮ. ಒಂದು ಬಾಲ್‌ನಲ್ಲಿ 22 ರನ್ ಸಾಧ್ಯವೆ? ಇದೂ ಒಂದು ನಿಯಮವೆ? ಚೆನ್ನಾಗಿ ಆಡುತ್ತಿದ್ದು, ಕೈಯಲ್ಲಿ ವಿಕೆಟ್‌ಗಳಿದ್ದೂ, ಭರ್ತಿ ಎರಡು ಓವರ್ ಇರುವಾಗ ಅದರಲ್ಲೂ ಗೆಲ್ಲುವ ಭರವಸೆ ಖಚಿತವಾಗಿರುವಾಗ ಈ ನಿಯಮ ಎಷ್ಟರ ಮಟ್ಟಿಗೆ ನ್ಯಾಯ?" ಎಂಬ ಪ್ರಶ್ನೆಯನ್ನೇ ಎಲ್ಲರೂ ಕೇಳುತ್ತಿದ್ದರು.

ಆದರೆ ಒಂದೇ ಬಾಲ್‌ನಲ್ಲಿ ಹಲವು ರನ್ ಮಾಡಿದ ದಾಖಲೆಗಳಿವೆ ಎಂದರೆ ನೀವು ನಂಬುತ್ತೀರಾ? ನಂಬಲೇ ಬೇಕು. ಬ್ಯಾಟ್ಸ್‌ಮನ್ ಒಬ್ಬ ಒಂದೇ ಬಾಲ್‌ಗೆ 286 ರನ್‌ಗಳನ್ನು ತೆಗೆದ. ಲಿಯರಿ ಕಾನ್‌ಸ್ಟೆಂಟೈನ್ ಎಂಬ ವೆಸ್ಟ್ ಇಂಡಿಯನ್ ಒಬ್ಬ ಒಂದು ಹೊಡೆತಕ್ಕೆ 23 ರನ್‌ಗಳನ್ನು ತೆಗೆದ.

ಕ್ರಿಕೆಟ್ ಪಂದ್ಯದಲ್ಲಿ ಗಿನ್ನೆಸ್ ದಾಖಲೆ ಸೇರಿದ ಈ 286 ರನ್‌ಗಳ ವಿಷಯ ರೋಚಕವಾಗಿದೆ. ಪಶ್ಚಿಮ ಆಸ್ಟ್ರೇಲಿಯದಲ್ಲಿ 1903 ರ ವರ್ಷದಲ್ಲಿ ವಿಕ್ಟೋರಿಯಾ ಮತ್ತು ಬನ್‌ಬರಿಯ ಸ್ಕ್ರಾಚ್ ತಂಡಗಳಿಗೆ ನಡೆದ ಸ್ಪರ್ಧೆ ನಡೆದಿತ್ತು. ಆಗ ಬ್ಯಾಟ್ಸ್‌ಮನ್ ಹೊಡೆತಕ್ಕೆ ಚಿಮ್ಮಿದ ಚೆಂಡು ದೊಡ್ಡ "ಮಹಾಗನಿ" (ಬರ್‍ರಾ) ಮರದ ಟೊಂಗೆಗಳಲ್ಲಿ ಎಲ್ಲೋ ಸಿಕ್ಕಿಕೊಂಡಿತು. ಹತ್ತಿರದ ಮನೆಯವರು ಚೆಂಡು ಕಾಣೆಯಾಯಿತು ಎಂದರು. ಆದರೆ ಅಂಪೈಯರ್ 'ಅದು ಎಲ್ಲೂ ಹೋಗಿಲ್ಲ, ಟೊಂಗೆಯಲ್ಲಿ ಸಿಕ್ಕಿಕೊಂಡಿದ್ದು, ಇಲ್ಲಿಂದ ಕಾಣುತ್ತದೆ' ಎಂದು ಹೇಳಿದ.

ಬನ್‌ಬರಿಯ ಆಟಗಾರರು ಆ ಮರ ಕಡಿಯಲು ಬಯಸಿದರಾದರೂ ಯಾರೂ ಮುಂದೆ ಬರಲಿಲ್ಲ. ಅಷ್ಟರಲ್ಲಿ ಯಾರೋ ಒಬ್ಬರು ರೈಫಲ್ ಒಂದನ್ನು ತಂದಿತ್ತರು. ಹಲವು ಬಾರಿ ಗುರಿ ಹಿಡಿದು ಗುಂಡು ಹಾರಿಸಿದ ಮೇಲೆ ಕೊನೆಗೊಂದು ಬಾರಿ ಚೆಂಡು ಕೆಳಗೆ ಬಿದ್ದಿತು. ಆದರೆ ಇಷ್ಟೆಲ್ಲ ಆಗುವಾಗ ಬ್ಯಾಟ್ಸ್‌ಮನ್ 286 ರನ್‌ಗಳನ್ನು ಯಶಸ್ವಿಯಾಗಿ ಮುಗಿಸಿದ.

ಹೀಗೆ ಒಂದೇ ಬಾಲಿಗೆ 23 ರನ್ ಮಾಡಿದ, 10 ರನ್ ಮಾಡಿದ, 11 ರನ್ ಮಾಡಿದ ದಾಖಲೆಗಳೂ ಇವೆ. **

# "ನೃತ್ಯಾಂಜಲಿ"

— ಯು.ವಿ.ತಾರಿಣಿರಾವ್



ಶ್ರೀಯುತ ರವಿದಾತಾರ್ ರವರ ಪ್ರತಿಭಾವಂತ ಶಿಷ್ಯೆಯರಾದ ಕು॥ ಉಷಾ, ಕು॥ ಸೀಮಾ.

ಶಿವಮೊಗ್ಗೆಯಲ್ಲಿ ಮಲೆನಾಡಿನ ಜೀವ ಜಲದ ಮಡಿಲಲ್ಲಿ ಪ್ರಖ್ಯಾತ ಸಾಹಿತಿಗಳು ಕಲಾಜೀವಿಗಳು, ಬುದ್ಧಿಜೀವಿಗಳು ಹುಟ್ಟಿ ಬೆಳೆದಿದ್ದಾರೆ. ಸಿಹಿಯಾದ ತುಂಗೆಯಲ್ಲಿ ಸೊಗಸಾದ ಲಯವೂ ಇದೆ. ಇತ್ತೀಚಿನ ಕೆಲವಾರು ವರ್ಷಗಳಲ್ಲಿ "ಭಾರತಿ ಕಲಾ ನಿಕೇತನ" ದಿಂದ ಕೆಲವು ಪ್ರತಿಭೆಗಳ ರಂಗಾರೋಹಣ ಕಾರ್ಯಕ್ರಮಗಳು ನಡೆದಿವೆ. ಇಂಥ ನೃತ್ಯ ಪ್ರತಿಭಾ ಶಿಲ್ಪ ಕಡೆದು ರೂವಾರಿಗಳು "ಭಾರತಿ ಕಲಾ ನಿಕೇತನದ" ಪ್ರಾಚಾರ್ಯರಾದ ರವಿದಾತಾರ್.

21. 8. 91 ರಂದು ಗುಂಡಿ ಮಹದೇವಪ್ಪನವರ ಕಲ್ಯಾಣ ಮಂಟಪ ದಾವಣಗೆರೆಯಲ್ಲಿ ವರ್ಣರಂಜಿತ ನಾಟ್ಯ ಸಂಜೆಯಲ್ಲಿ ಕು॥ ನಂದಿನಿ ರಾಮಣ್ಣನವರ ನೃತ್ಯ ಕಾರ್ಯಕ್ರಮ ನೆರವೇರಿತು. ಇವರ ಕಾರ್ಯಕ್ರಮದಲ್ಲಿ ಸಂಗೀತದ ಅಧಿಪಾತ್ರಿ ಶ್ರೀಮತಿ ಗಂಗೂಬಾಯಿ ಹಾನಗಲ್ ಉಪಸ್ಥಿತರಾಗಿದ್ದರು. 13. 12. 86 ರಲ್ಲಿ ಕು॥ ಲಕ್ಷ್ಮೀಭಾಯ ತರೀಕೆರೆಯಲ್ಲಿ ಅದ್ಭುತವಾಗಿ ನರ್ತಿಸಿ ಚಿನ್ನದ ಪದಕ ಪಡೆದಾಗ ಕೇವಲ ಹದಿನಾರು ವರ್ಷದ ಬಾಲೆ. 28. 12. 86 ರಂದು ಪ್ರತಿಭಾರಂಗ ರಾಷ್ಟ್ರ ಪ್ರಶಸ್ತಿ ವಿಜೇತ ಖ್ಯಾತ ನಿರ್ದೇಶಕರಾದ ಶ್ರೀ ಲಕ್ಷ್ಮೀನಾರಾಯಣ್ ರವರ ಕೈಯಿಂದ ನೆನಪಿನ ಕಾಣಿಕೆ ನೀಡಿ ಗೌರವಿಸಿತು. 1987 ಧರ್ಮಸ್ಥಳದ ಉಜಿರೆಯಲ್ಲಿ ರಾಜ್ಯಮಟ್ಟದ ಮಕ್ಕಳ ವಿಭಾಗದಲ್ಲಿ ಸನ್ಮಾನಿತಳಾದಳು. ಧರ್ಮಾಧಿಕಾರಿ ಶ್ರೀ ವೀರೇಂದ್ರ



ಹೆಗ್ಗಡೆಯವರು ಈ ಎಳೆ ಪ್ರತಿಭೆಯನ್ನು ಗಮನಿಸಿ ತುಂಬು ಮನಸ್ಸಿನ ಆಶೀರ್ವಾದ ಮಾಡಿ ಗೌರವಿಸಿ

ತಮ್ಮ ಶಿಷ್ಯೆ ಶೋಭಳೊಡನೆ ನೃತ್ಯದಲ್ಲಿ ತಲ್ಲೀನರಾದ ರವಿ ದಾತಾರ್.



ದ್ದಾರೆ. ಈಚೆಗೆ ಮೂರು ವರ್ಷದ ಸಂಗೀತ ನೃತ್ಯ ಅಕಾಡೆಮಿ ವಿದ್ಯಾರ್ಥಿ ವೇತನ ಸಿಕ್ಕಿದೆ. ಕು|| ಸೀಮಾಳ ಅದ್ಭುತ ರಂಗಾರೋಹಣವನ್ನು ಅನೇಕ ಪತ್ರಿಕೆಗಳು ಪ್ರಶಂಸಿಸಿವೆ.

ಇಂಥ ಸುಂದರ ನಾಟ್ಯ ಬಾಲೆಯರನ್ನು ರೂಪಿಸಿದ ಕೀರ್ತಿ ಶ್ರೀಯುತ ರವಿದಾತಾರ್ ರವರದು. ನೀಳ, ಪ್ರಮಾಣಬದ್ಧ ನಾಟ್ಯಕ್ಕೆ ಕಡೆದಂತಹ ಅಂಗಸೌಷ್ಠವದ ಈ ವ್ಯಕ್ತಿ ನಿಗರ್ವಿ, ಸ್ನೇಹಜೀವಿ, ಸಂಘಜೀವಿ, ಸರಳವಾದ ಸಂಪನ್ನ ಸುಸಂಸ್ಕೃತ ಬುದ್ಧಿಜೀವಿ.

ಭರತನಾಟ್ಯ ಶಾಸ್ತ್ರ ಗಂಡಿನದೂ ಅಲ್ಲ, ಹೆಣ್ಣಿನದೂ ಅಲ್ಲ. ಇಬ್ಬರದೂ. ಸಾಕ್ಷಾತ್ ನಟರಾಜ ಅರ್ಧನಾರೀಶ್ವರನಲ್ಲವೆ. ಶ್ರೀ ರವಿದಾತಾರ್‌ರ ಗುರುಕುಲ ಪದ್ಧತಿಯೂ ವಿಶಿಷ್ಟವೆನಿಸುತ್ತದೆ. ವರ್ಷಕ್ಕೆರಡು ಬಾರಿ ಏಪ್ರಿಲ್, ಮೇ, ಮತ್ತೆ ಅಕ್ಟೋಬರ್ ತಿಂಗಳಲ್ಲಿ ಇಂಥ ನೃತ್ಯ ಶಿಬಿರಗಳು ನಡೆಯುತ್ತವೆ. ಈ ಗುರುಕುಲದಲ್ಲಿ ಜೂನಿಯರ್, ಸೀನಿಯರ್ ಎರಡು ತಂಡವಾಗಿ ವಿದ್ಯಾರ್ಥಿನಿಯರು ಶಿಕ್ಷಣ ಪಡೆಯುತ್ತಾರೆ. ಇಂಥ ಶಿಬಿರಕ್ಕೆ ಭದ್ರಾವತಿ, ತರೀಕೆರೆ, ಚಿಕ್ಕಮಗಳೂರು, ಚಳ್ಳಕೆರೆ ಎಲ್ಲೆಲ್ಲಿಂದಲೋ ವಿದ್ಯಾರ್ಥಿನಿಯರು ಬರುತ್ತಾರೆ ತಮ್ಮೆಲ್ಲ ಯೋಚನೆ ಮರೆತು ನೃತ್ಯದಲ್ಲಿ ತೊಡಗುವ ರೀತಿ ರೋಚಕವಾದದು.

ಇಂಥ ದಿನಗಳಲ್ಲಿ ಈ ತರಹ ಕಾರ್ಯಕ್ರಮಕ್ಕೆ ತೊಡಗಿ ನೃತ್ಯಕ್ಕೆಂದು ಅರ್ಪಿಸಿಕೊಂಡವರು ಬಹಳ ವಿರಳ. ಶ್ರೀಯುತ ರವಿ ದಾತಾರ್ ರವರ ಭೇಟಿಯಾಗುವ ಇಚ್ಛೆಯಿಂದ ಹೊರಟಾಗ ಬಸವನಗುಡಿಯ ಅವರ ಮನೆ ಹುಡುಕುವುದೇನೂ ಕಷ್ಟವೆನಿಸಲಿಲ್ಲ. "ತಕಿಟ, ಧಿಮಿ. ತಕಿಟ ಧಿಮಿಗಳು, ತಾಳ ಲಯಬದ್ಧವಾದ ಅಡವುಗಳು, ಸುಸ್ವರ ಗಂಭೀರ ಕಂಠದಿಂದಲೇ 'ಸರಸ್ವತಿ ಸದನ' ತಿಳಿದು ಬಿಟ್ಟಿತು.

ನೃತ್ಯ ಕಲಿಯುತ್ತಿದ್ದ ಹುಡುಗಿಯರು ಪೊಚ್ಚಿಟ್ಟ ದೀಪದೆದುರು ಧ್ಯಾನಮಗ್ನರಾಗಿ ಪಾಠ ಹೇಳಿಕೊಡುತ್ತಿದ್ದ ಯುವ ಉತ್ಸಾಹಿ ಗುರುಗಳು. ಸೊಗಸಾದ ನೋಟಕ್ಕೆ ಕಾರಣವಾದ ಆ ಘಟನೆ ಸಂಜೆಯನ್ನು ಸುಂದರವಾಗಿಸಿತ್ತು. ಒಂದು ಬದಿಗೆ ಶ್ರೀಮತಿ ನಿರ್ಮಲ ರವಿ ದಾತಾರ್ ಕುಳಿತಿದ್ದರು.

ಶಿವಮೊಗ್ಗೆಯ ಸಾಂಸ್ಕೃತಿಕ ಕ್ಷೇತ್ರದಲ್ಲಿ ಶ್ರೀ ರವಿದಾತಾರ್ ಚಿರಪರಿಚಿತರು. ಶ್ರೀಮತಿ ನಿರ್ಮಲ ರವಿದಾತಾರ್ ಬಿ. ಎಸ್. ಸಿ. ಪದವೀಧರರು. ದಂಪತಿಗಳಿಂದ ಸಗುಮುಖದ ಆಹ್ವಾನ. ವನಿತಾ ಪರವಾಗಿ ಒಂದೆರಡು ಪ್ರಶ್ನೆ ಕೇಳಬೇಕೆಂಬಾಸೆ ಉಕ್ಕಿತು.

"ನಿಮಗೆ ನೃತ್ಯದಲ್ಲಿ ಆಸಕ್ತಿ ಹುಟ್ಟಲು ಏನು ಕಾರಣ ?" ದಂಪತಿಗಳನ್ನು ಪ್ರಶ್ನಿಸಿದಾಗ, ಪರಸ್ಪರ ಮುಖ ನೋಡಿಕೊಂಡರು. ಉತ್ತರಿಸಿದ್ದು ರವಿದಾತಾರ್.

"ನೋಡಿ ಮೇಡಂ, ನಮ್ಮ ಮನೆಯೊಂದು ನೃತ್ಯ ಕಲಾಶಾಲೆ ಎನ್ನಬಹುದು. ಬಾಲ್ಯದಿಂದಲೂ ನಮ್ಮ ತಾಯಿ ಹಾಗೆ ಅಡಿಪಾಯ ಹಾಕಿದ್ದಾರೆ.

"ಕಲೆ, ಸಾಹಿತ್ಯಗಳ ಅಭಿರುಚಿ ಬೆಳೆಸಿದ ನನ್ನ ಗುರು ಎನ್ನಬಹುದು. ಹೌದು ನನ್ನ ತಾಯಿ ಸ್ನೇಹಪ್ರಭ ದಾತಾರ್ ನನ್ನ ನೃತ್ಯದ ಮೊದಲ ಗುರು. ಆದರೆ ನನ್ನ ಅಕ್ಕ ಉಷಾದಾತರ್ ನನಗೆ ಶಾಸ್ತ್ರೀಯ ರೀತಿಯಿಂದ ನೃತ್ಯ ಕಲಿಸಿದ್ದಾರೆಂದು



ಚಿತ್ರದಲ್ಲಿ ಗಾಯಕಿ ಶ್ರೀಮತಿ ವಿಜಯ ಯಜ್ಞನಾರಾಯಣ ತಮ್ಮ ನೃತ್ಯ ತಂಡದೊಂದಿಗೆ

ಹೇಳಲು ಹೆಮ್ಮೆ ಎನಿಸುತ್ತದೆ. ಬೆಂಗಳೂರಿನಲ್ಲಿ 73 ರಲ್ಲಿ ಎಂ. ಎ. ಮಾಡಿದೆ. ಅಲ್ಲಿ ನನಗೆ ದೊರಕಿದ ಗುರುಗಳು ಪು. ತಿ. ನ.; ಸಾ. ಶಿ. ಮರುಳಯ್ಯ ಮತ್ತು ಹೆಸರಾಂತ ಸಾಹಿತಿಗಳು. ಈ ಕಾಲೇಜು ದಿನಗಳಲ್ಲಿ ನಮ್ಮದೊಂದು ನಾಟಕ ತಂಡವಿತ್ತು. ಬಹುಮಾನಗಳೆಲ್ಲಾ ನಮ್ಮ ತಂಡದವರ ಪಾಲೇ. ಒಳ್ಳೆಯ ಕಂಪೆನಿಯಲ್ಲಿ ಕೆಲಸ ಸಿಕ್ಕಿತು. ಆದರೆ ಅದೇನೋ ನನ್ನಲ್ಲಿ ಹಿಂದೆಯೇ ಅತೃಪ್ತಿ



ಜಿಲ್ಲೆಯ ಅತ್ಯುತ್ತಮ ಶ್ರೇಷ್ಠ ನೃತ್ಯ ನಿರ್ದೇಶಕ ಪುರಸ್ಕಿ ಪಡೆಯುತ್ತಿರುವ ಸನ್ನಿವೇಶ. ಸಚಿವ ಜೆ. ಹೆಚ್. ಪಟೇಲ್‌ರಿಂದ ನಡುವೆ ಶ್ರೀಯುತ ರವಳಪ್ಪ ಇದ್ದಾರೆ.

ಮೂಡಿತು. ನನ್ನಲ್ಲಿರುವ ನೃತ್ಯಕಲೆ ನನ್ನ ನೆಲದಲ್ಲಿ ಅನ್ನಕೊಡಬಾರದೇನು ? ಸರಿ ಆತ್ಮ ಪ್ರೇರಣೆ ಸಾಕ್ಷಿಯಂತೆ ಕೆಲಸ ಬಿಟ್ಟುಬಿಟ್ಟೆ."

"ನಿಮ್ಮ ಗುರುಗಳ ಬಗ್ಗೆ ಒಂದೆರಡು ಮಾತುಗಳನ್ನು ಹೇಳ್ತೀರ."

"ಅಗತ್ಯವಾಗಿ. ಅಕ್ಕ ಗುರುಗಳಾದ ಉಷಾ ದಾತಾರ್ ರಾಷ್ಟ್ರೀಯ ಮಟ್ಟದಲ್ಲಿ ಖ್ಯಾತ ನೃತ್ಯ ಕಲಾವಿದೆ. ಹನ್ನೆರಡನೆಯ ವಯಸ್ಸಿನಿಂದಲೇ ಅಕ್ಕನೊಟ್ಟಿಗೆ ಕಾರ್ಯಕ್ರಮಗಳಲ್ಲಿ ಭಾಗವಹಿಸುತ್ತಿದ್ದ. 1956 ರಲ್ಲಿ ಗುರು ಉಷಾದಾತಾರ್‌ರ "ಭಾರತ ಕಲಾನಿಕೇತನ" ಜನ್ಮ ತಳೆಯಿತು. ಅದರಲ್ಲಿ ನಾನೂ ನನ್ನ ಸಹೋದರಿ ಗೀತಾದಾತಾರ್ ಅವರ ಮೊಟ್ಟಮೊದಲ ಶಿಷ್ಯರಾಗಿದ್ದವು. ಅವರ ಸಹನರ್ತಕ, ಗಾಯಕ, ಹಾಗೂ ಕಾರ್ಯದರ್ಶಿಯಾಗಿದ್ದೆ. ಇಂದಿಗೂ ನನಗಿಬ್ಬರೂ ಗುರುಗಳು ಎಂದರೆ ತಪ್ಪಿಲ್ಲ."

"ನಿಮ್ಮ ಕಲಾಶಾಲೆ, ಶಿಷ್ಯ ಬಳಗದ ಬಗ್ಗೆ ತಿಳಿಸ್ತೀರ."

"ಸ್ವತಂತ್ರವಾಗಿ ಕಲಾಶಾಲೆ ನಡೆಸುವಂತೆ ಗುರುಗಳ ಪ್ರೋತ್ಸಾಹ, ಅನುಮತಿ ಸಿಕ್ಕಿತು. ಎಲ್ಲಿ ನಡೆಸುವುದೆಂದು ಚಿಂತಿಸಿದಾಗ ಶಿವಮೊಗ್ಗದ ನೆನಪಾಯ್ತು. ನೋಡಿ, ನಾವು ಮುಂಚೆ ಇದ್ದಿದ್ದು ಅರಸೀಕೆರೆಯಲ್ಲಿ. ವಿದ್ಯಾಭ್ಯಾಸ ಪೂರೈಸಿದ್ದು ಬೆಂಗಳೂರಲ್ಲಿ. ವಾಸ್ತವವಾಗಿ ನಾವುಗಳೆಲ್ಲ ಅಲ್ಲಿಯವರಾಗಿ ಬಿಟ್ಟಿದ್ದೆವು. ನಿರ್ಮಲಳ ತಾಯಿ ಡಾ॥ ವಿ. ಡಿ. ಸರಸ್ವತಿ ಯವರ ಮನೆ ಬಸವನಗುಡಿಯಲ್ಲಿತ್ತು. ಶಿವಮೊಗ್ಗೆಯ ಈ ನೆಲ ಮೊದಲಿನಿಂದಲೂ ನನ್ನ ಸೆಳೆದ ಭೂಮಿ. ಈ ನೆಲ ಜಲಕ್ಕೆ ಅಂಥ ವಿಶೇಷ ಗುಣವಿದೆ. ಹೀಗಾಗಿ ನವೆಂಬರ್ 16, 1984 ರಲ್ಲಿ ಈ ನೃತ್ಯಶಾಲೆ ಶುರುವಾಯ್ತು. ನನ್ನ ತಾಯಿ ಸ್ನೇಹಪ್ರಭದಾತಾರ್, ನೃತ್ಯ ಗುರು ಅಕ್ಕ ಉಷಾದಾತಾರ್ ಈ ನೃತ್ಯಶಾಲೆ ಉದ್ಘಾಟಿಸಿದರು.

"ಇನ್ನು ಶಿಷ್ಯ ಬಳಗದ ಬಗ್ಗೆ ನನ್ನ ಶಿಷ್ಯೆಯರಲ್ಲಿ ಅನೇಕ ಮಂದಿ ಉತ್ತಮ ಕಲಾವಿದರೆಂದು ತೋರಿಸಿ ಕೊಟ್ಟಿದ್ದಾರೆ. ರ್‍ಯಾಂಕುಗಳು, ಫಸ್ಟ್‌ಕ್ಲಾಸ್ ಬಂದಿವೆ. ಇಲ್ಲಿಯವರೆಗೆ ಉತ್ತಮ ಫಲಿತಾಂಶ ನಮಗಿದೆ. 22-5-88 ರ ಭಾನುವಾರ ನನ್ನ ಮೂವರು ವಿದ್ಯಾರ್ಥಿನಿಯರು ಅಖಿಲ ಕರ್ನಾಟಕ ಪತ್ರಕರ್ತರ ಸಮಾವೇಶದಲ್ಲಿ ರಂಗಪ್ರವೇಶ ಮಾಡಿದರು. ಕು॥ ನಂದಿನಿ ರಾಮಣ್ಣ. ಕು॥ ಪದ್ಮಶ್ರೀ ಡಾ॥ ಮಾಧವಮೂರ್ತಿ ಪತ್ರಿಕೆಗಳಲ್ಲಿ ಪ್ರಶಂಸೆ ಗಳಿಸಿದರು."

"ನಿಮ್ಮ ಪತ್ನಿ ಯಾವರೀತಿ ಸಹಕಾರ ನೀಡುತ್ತಿದ್ದಾರೆ ?"

"ಅವಳಿಲ್ಲದಿದ್ದರೆ ನಾನೆಲ್ಲಿ ನೋಡಿ. ಬೆಂಗಳೂರಿನಿಂದ ಬರುವ ನನ್ನ ವಾದ್ಯ ಬಂಧುಗಳು ಶಿಷ್ಯರನ್ನು, ಜೊತೆಗೆ ನನ್ನನ್ನು ಆಕೆಯೇ ಸಂಭಾಳಿಸುವುದು."

ನಿರ್ಮಲವಾದ ನಗು ಹೊಮ್ಮಿತು ನಿರ್ಮಲ ದಾತಾರ್ ತುಟಿಗಳಲ್ಲಿ. ಪತಿಗೆ ತಕ್ಕ ಪತ್ನಿ. ಬೆಳ್ಳಗಿನ ಮೈ ಬಣ್ಣ, ಅಗಲ ಕೆಂಪು ದುಂಡು ಕುಂಕುಮ ಧರಿಸಿದ ಸೌಜನ್ಯ ಶೀಲೆ, ಮೂವರು ಮುದ್ದಾದ ಗಂಡು ಮಕ್ಕಳಿದ್ದಾರೆ.

"ನೃತ್ಯ ಪಟುಗಳ ವರ್ಣಾಲಂಕಾರ, ವಸ್ತ್ರಾಲಂಕಾರ ಎಲ್ಲವೂ ನನ್ನದೆ. ಅವರ ಬಟ್ಟೆಗಳಿಗೆಲ್ಲ ಡಿಸೈನ್‌ಗಳು ನಾನೇ ರೂಪಿಸಿ ಹೊಲಿಸುವುದು. ಶಿಬಿರ ಇದ್ದಾಗ ಬರುವ ಹೆಣ್ಣು ಮಕ್ಕಳಿಗೆ, ದಿನಾ ಬರುವ ಮಕ್ಕಳಿಗೆ ನಾನಿದ್ದರೆ ಸಾಕು. ಇವರೆಲ್ಲ ನಮ್ಮ ಮಕ್ಕಳೇ. ಈ ಊರಲ್ಲಿ ಹೊರಗೆ ಎಲ್ಲಾದರೂ ಕಾರ್ಯಕ್ರಮ ನಡೆದರೆ ನಾನಿದ್ದೇ ಇರಬೇಕು" ಎಂದರು ನಿರ್ಮಲಾ.

ಅವರ ಮನೆ ಸಾಧಾರಣ. ಮನೆಯಲ್ಲಿ ಅದೊಂದು ಕಲಾದೇಗುಲವೆಂದು ನೋಡುತ್ತಿದ್ದಂತೆ ಅರಿವಾಗುತ್ತದೆ. ದೊಡ್ಡ ವಿಸ್ತಾರವಾದ ಮನೆ ಅವರೆಲ್ಲರ ಚಟುವಟಿಕೆಗೆ ಕೇಂದ್ರವಾಗಿದೆ. ಇಲ್ಲಿಯ ಸಂಘ, ಸಂಸ್ಥೆಗಳು, ಅವರನ್ನು ಗುರುತಿಸಿ ಸನ್ಮಾನಿಸಿದೆ. ಹಾಗೆ ಮೊತ್ತಮೊದಲು ಸನ್ಮಾನಿಸಿದ್ದು ಪ್ರತಿಭಾರಂಗ.

ಮಲ್ನಾಡ್ ಜೇಸೀಸ್ ಹಾಗೂ ಭರತ ಕಲಾನಿಕೇತನ ನೃತ್ಯಶಾಲೆಯ ಸಂಯುಕ್ತಾಶ್ರಯದಲ್ಲಿ 25-7-85 ರಿಂದ ಹದಿಮೂರು ದಿನಗಳ ಕಾಲ ಲಲಿತ ಕಲೆಗಳ ರಸಗ್ರಹಣ ಶಿಬಿರ ನಡೆಯಿತು. ಇಂಥ ಬೃಹತ್ ಕಾರ್ಯಾಗಾರ ಬೇರೆಲ್ಲೂ ನಡೆದಿಲ್ಲ. ಇವುಗಳಲ್ಲಿ ಯಕ್ಷಗಾನ, ನಾಟಕ, ನೃತ್ಯ, ವರ್ಣಾಲಂಕಾರಗಳ ಬಗ್ಗೆ ಕಾರ್ಯಕ್ರಮ ನಡೆದವು.

"ಗುರುಕುಲ ಮಾದರಿಯಲ್ಲಿ ನೃತ್ಯ ಕಲಿಸುವಿರೆಂದು ತಿಳಿಯಿತು. ಪ್ರತಿಕ್ರಿಯೆ ಹೇಗಿದೆ. ಇಲ್ಲಿಯವರೆಗೆ ನಿಮ್ಮ ಕಾರ್ಯಕ್ರಮ ಎಷ್ಟು ನಡೆದಿವೆ ?"

"ಪ್ರತಿಕ್ರಿಯೆ ಬಹಳ ಪ್ರೋತ್ಸಾಹಕರವಾಗಿದೆ. ಇಲ್ಲಿಯ ಜನ ಸುಸಂಸ್ಕೃತರು. ಸದ್ಯಕ್ಕೆ ನನ್ನಲ್ಲಿ ನೃತ್ಯ ಕಲಿಯುತ್ತಿರುವವರು ಐವತ್ತಾರು ವಿದ್ಯಾರ್ಥಿಗಳಿದ್ದಾರೆ. ಆರು ನೂರಕ್ಕೂ ಮೇಲ್ಪಟ್ಟು ನನ್ನ ಶಿಷ್ಯರಿದ್ದಾರೆ. ಅಮೆರಿಕೆಯ ಚೆಸ್ಟರ್‌ನಲ್ಲಿ ನನ್ನೊಬ್ಬ ವಿದ್ಯಾರ್ಥಿನಿ ಇದ್ದಾಳೆ."

"ನೃತ್ಯದ ಬಗ್ಗೆ ಒಂದೆರಡು ವಿಷಯ ಹೇಳ್ತೀರ."

"ಭರತನಾಟ್ಯವು ಬಹುಪ್ರಾಚೀನವಾದ ಕಲೆ. ಎಷ್ಟು ತಿಳಿಸಿದರೂ ಕಮ್ಮಿ. ಇತ್ತೀಚೆಗೆ ಇದರಲ್ಲೂ ಕಲಬೆರಕೆಯಾಗುತ್ತಿದೆ. ಹಾಗಾಗ ಕೂಡದು. ಭರತನಾಟ್ಯಕ್ಕೆ ಸಂಗೀತ ರಾಗಲಯ ಹಿಮ್ಮೇಳದ ವಾದ್ಯ, ಶಿಲ್ಪಕಲೆಯ ರೂಪಲಾವಣ್ಯಗಳಿಂದ ಉತ್ತಮ ಸಂಸ್ಕಾರ ಅಭಿರುಚಿ ಬೆಳೆಯುತ್ತದೆ. ಆರಾಧನ ಭಾವ ಜಾಗೃತವಾಗುತ್ತದೆ. ನೃತ್ಯ ಭಾವ ಪ್ರತಿಯೊಬ್ಬರ ಜೀವನದಲ್ಲಿ ಮಿಡಿಯುತ್ತಿರುತ್ತದೆ."

"ನಿಮ್ಮ ಇತರ ಕಾರ್ಯಕ್ರಮಗಳ ಬಗ್ಗೆ ನಿಮಗಿರುವ ಒಲವುಗಳ ಬಗ್ಗೆ ಎರಡು ಮಾತು ಹೇಳಿ."

"ಇಲ್ಲಿಯವರೆಗೆ ಎಂಬತ್ತೈದು ಕಾರ್ಯಕ್ರಮ ಕೊಟ್ಟಿದ್ದೇನೆ. ನೃತ್ಯರೂಪಕ ರಚಿಸಿ ನಿರ್ದೇಶಿಸಿದ್ದೇನೆ. ರೂಪಕಗಳನ್ನು ರಂಗದ ಮೇಲೆ ತೊಡಗಿಸಲು ಬಹಳ ಖುಷಿ ಎನಿಸುತ್ತದೆ. ಮಾಡಬೇಕಾದಂಥ ಕಾರ್ಯಗಳು ಬಹಳ ಇವೆ. ಈ ನೃತ್ಯ ಜಗತ್ತಿನಲ್ಲಿ ನಾನೊಂದು ಬಿಂದು ಮಾತ್ರ. ಇಲ್ಲಿಯವರೆಗೆ ಮುಖ್ಯವಾಗಿ ಪ್ರಕೃತಿ ಪುರುಷ, ನಾದಬಿಂದು, ಕಾಡಿನ ಒಡವೆಗಳು, ಕನಕ ಪುರಂದರ, ರಾಘವೇಂದ್ರ ವೈಭವ. ಕೆಳದಿಯ ವೈಭವ ರೂಪಕ ನಿರ್ದೇಶಿಸಿ, ರಚಿಸಿ ಸಂತೋಷಪಟ್ಟಿದ್ದಿದೆ. "ನಾದಬಿಂದು"ವಿನಲ್ಲಿ ವೈಶ್ಯ ಮಹಿಳಾ ಸಂಘದ ಮಹಿಳೆಯರು—ಅಂದರೆ ಗೃಹಿಣಿಯರು—ನಡೆಸಿದ ಕಾರ್ಯಕ್ರಮ. ಕಾಡಿನ ಒಡವೆಗಳು. ಮಕ್ಕಳಿಂದ ಮಾಡಿಸಿದ್ದು. ಕೆಳದಿಯ ವೈಭವ ನಮ್ಮ ಶಿವಪ್ಪ ನಾಯಕರ ಅರಮನೆ ಬಳಸಿಕೊಂಡಂಥ ಕಾರ್ಯಕ್ರಮ. ಈ ಉತ್ಸಾಹಿ ಯುವಕರು ನನ್ನೆದುರು ತಾವೇ ರಚಿಸಿದ. ಚಿತ್ರಗಳನ್ನೊಳಗೊಂಡ ಹಸ್ತ ಪ್ರತಿಗಳನ್ನು ಹರಡಿದರು. ಆ ಫೈಲುಗಳ ರಾಶಿ ಕಂಡರೆ ಬೆರಗಾಗುತ್ತದೆ. ನೋಡಿ, ಸಂಗೀತ ಸಾಹಿತ್ಯ ನನ್ನ ಮೆಚ್ಚುಗೆಯ ಹವ್ಯಾಸ. ನನ್ನಲ್ಲಿ ಸಾಹಿತ್ಯದ ಒಳ್ಳೆಯ ಸಂಗ್ರಹವಿದೆ. ದಲಿತ ಸಾಹಿತ್ಯ ಬಳಸಿಕೊಂಡು ನೃತ್ಯರೂಪಕ ತರುವ ಇಚ್ಛೆ ಇದೆ. ನಮ್ಮಲ್ಲಿ ವಿಶಾಲ ರಂಗಭೂಮಿಯ ಅಭಾವವಿದೆ. ನಮ್ಮ ಪುರಾತನ ಸಂಸ್ಕೃತಿಯ ನೆಲದಲ್ಲಿ ಬೇರುಬಿಟ್ಟ ನೃತ್ಯ ಸಂಗೀತವನ್ನು ಪ್ರತಿಯೊಬ್ಬ ಮಹಿಳೆ ಪ್ರೋತ್ಸಾಹಿಸಿದರೆ ಈ ಕಲೆ ಉಳಿಯುತ್ತದೆ, ಬೆಳೆಯುತ್ತದೆ, ಮೊದಲೇ ಒಳ್ಳೆಯ ಗುರುವನ್ನು ಆಯ್ಕೆ ಮಾಡಿಕೊಳ್ಳಬೇಕು. ಪದೇ ಪದೇ ಬದಲಾಯಿಸಬಾರದು. ಇದು ಗುರು ಪರಂಪರೆ ಉಳಿದುಕೊಳ್ಳಲು ಸಹಕಾರಿ."

"ತೃಪ್ತಿತರುವಂಥ ಒಳ್ಳೆಯ ಶಿಷ್ಯರು ಸಿಕ್ಕಿದ್ದಾರೆಯೆ ?"

"ಎಲ್ಲರೂ ಒಳ್ಳೆಯ ಶಿಷ್ಯೆಯರೆ. ಆದರೆ ಅಂಥ ತೃಪ್ತಿ ಇನ್ನೂ ನನಗೆ ಸಿಕ್ಕಿಲ್ಲ. ಸಿಕ್ಕಿದರೆ ನನ್ನಂಥ ಭಾಗ್ಯಶಾಲಿ ಬೇರಾರೂ ಇಲ್ಲವೆಂದುಕೊಳ್ಳುತ್ತೇನೆ. ಹಾಗೊಂದು ವೇಳೆ ಸಿಕ್ಕುವ ಹಾಗಿದ್ದರೆ ದತ್ತಕಗೊಂಡು ನನ್ನ ಕಲೆ ಸಂಪೂರ್ಣವಾಗಿ ಧಾರೆಯೆರೆದು ಬಿಡುತ್ತೇನೆ"

"ನಿಮ್ಮ ಯಾವುದಾದರೂ ರೋಚಕ ಅನುಭವ ಹೇಳ್ತೀರ."

"ಎಷ್ಟೋ ಹೊರ ಸ್ಥಳಗಳಲ್ಲಿ ನಾವು ಕಾರ್ಯಕ್ರಮ ಕೊಟ್ಟಿದ್ದೇವೆ. ಬಾದಾಮಿ, ಹಂಪಿ, ಹೀಗೆಲ್ಲ. ಇರಲಿ. ಒಂದು ಅನುಭವ ಹೇಳ್ತೀನಿ. ನ್ಯಾಷನಲ್ ಲೆವಲ್‌ನಲ್ಲಿ '88 ರಲ್ಲಿ ಉತ್ತರಪ್ರದೇಶದಲ್ಲಿ ಶರದೃತುವಿನ ಶರದೋತ್ಸವದಲ್ಲಿ ನನ್ನ ಗುರು ಉಷಾದಾತಾರ್ ಮುಂದೆ ನಡೆದ ನನ್ನ ನಟುವಾಂಗಕ್ಕೆ ಸಿಕ್ಕ ಪ್ರಶಂಸೆ ಎನ್ನಬಹುದು."

"ಕೊನೆಯ ಪ್ರಶ್ನೆ...ನಿಮ್ಮ ಮಕ್ಕಳಿಗೆ ನೃತ್ಯ ಹೇಳಿಕೊಡ್ತಿದ್ದೀರ."

"ದೊಡ್ಡವರಿಗಿಬ್ಬರಿಗೆ ಅಂಥ ಆಸಕ್ತಿ ಇಲ್ಲ. ಆದರೆ ಚಿಕ್ಕವನಿಗೆ ಇದೆ ಅನ್ನಿಸುತ್ತೆ. ಅವನಿಗಿನ್ನೂ 7 ವರ್ಷ ಮಾತ್ರ. ಮಾ॥ ಸುಹಾಸ್‌ದಾತಾರ್ ನನ್ನೊಟ್ಟಿಗೆ ನಟುವಾಂಗದಲ್ಲಿ ಭಾಗವಹಿಸುತ್ತಿದ್ದಾನೆ. ಮುಂದೆ ನೋಡಬೇಕು."

ಇವರ ಸಹೋದರ ರಾಜುದಾತಾರ್ ಬಹಳ ಒಳ್ಳೆಯ ಹಾಡುಗಾರ. ಈಗಾಗಲೇ ಇವರ ಕಾರ್ಯಕ್ರಮ ಟಿ. ವಿ. ಯಲ್ಲಿ ಬಂದಿದೆ. ತಂಗಿ ಗೀತಾದಾತಾರ್ ರವೀಂದ್ರನಗರದಲ್ಲಿ ನೃತ್ಯಶಾಲೆ ನಡೆಸುತ್ತಿದ್ದಾರೆ. ಶ್ರೀ ರವಿದಾತಾರ್ ಅವರ ಕಂಠಸಿರಿ ಬಹಳ ಸೊಗಸಾಗಿದೆ. ಸೊಗಸಾದ ಭಾಷಾಜ್ಞಾನವಿದೆ. ಇಂಥ ಉತ್ಸಾಹಿ ಯುವ ಶಕ್ತಿಯನ್ನು ಇಂದಿನ ಸಮಾಜ ಹೆಚ್ಚು ಹೆಚ್ಚು ಗುರುತಿಸಲೆಂದು ಹಾರೈಸುತ್ತಾ ಮನೆ ಸೇರಿದಾಗ ನೃತ್ಯೋತ್ಸವದಲ್ಲಿ ಭಾಗವಹಿಸಿದಂತಿತ್ತು.

*****

## ವನಿತಾ

**ಕಥೆಗೊಂದು ಚಿತ್ರ ವಿಭಾಗಕ್ಕೆ ಬರುತ್ತಿರುವ ಕಥೆಗಳು ಅನೇಕವು ಉತ್ತಮವಿದ್ದರೂ—ಪ್ರಕಟಿಸಲಾಗಿರುವ ಚಿತ್ರಕ್ಕೆ ಪೂರ್ತಿಯಾಗಿ ಪೂರಕನಾಗಿರುವುದಿಲ್ಲ. ಹೀಗಾಗಿ ಒಳ್ಳೆಯ ಕಥೆಗಳನ್ನು ತಿರಸ್ಕರಿಸುವುದು ಅನಿವಾರ್ಯವಾಗಿದೆ. ಓದುಗರು ದಯವಿಟ್ಟು ಚಿತ್ರವನ್ನು ಸರಿಯಾಗಿ ವೀಕ್ಷಿಸಿ ಇತರ ಪೂರ್ತಿ ವಿವರಗಳನ್ನು ಗಮನಿಸಿ ಕಥೆ ರಚಿಸಬೇಕು. ಇದ್ದದ್ದುರಲ್ಲಿ ಚಿತ್ರಕ್ಕೆ ಹತ್ತಿರವಾದಂಥ ಕಥೆಗಳನ್ನು ಆಯ್ಕೆಮಾಡಿ ಪ್ರಕಟಿಸುತ್ತಿದ್ದೇವೆ. ಇನ್ನು ಹಾಳೆಯ ಒಂದೇ ಮಗ್ಗಲಲ್ಲಿ ಬರೆಯಬೇಕೆಂದು ಪ್ರತಿಸಾರಿ ಎಚ್ಚರಿಸಿದರೂ, ಹಾಳೆಯ ಎರಡೂ ಮಗ್ಗಲುಗಳಲ್ಲಿ ಕೆಲವರು ಬರೆಯುತ್ತಿದ್ದಾರೆ. ಕೆಲವು ಕಥೆಗಳ ಜತೆ ಬರೆದವರ ಹೆಸರು–ವಿಳಾಸ ಕೂಡ ಇರುವುದಿಲ್ಲ. ಇಂಥ ಕಥೆಗಳನ್ನು ಗಮನಿಸಲಾಗುವುದಿಲ್ಲ ಎಂದು ಈ ಮೂಲಕ ಸ್ಪಷ್ಟಪಡಿಸುತ್ತಿದ್ದೇವೆ.**

# ವನಿತಾ ಪದ ಸಂಪದ

ರೂ. 250 ಬಹುಮಾನ!

**45**

## ನಿಬಂಧನೆಗಳು

ಮಹಿಳೆಯರ ಸ್ಮರಣ ಶಕ್ತಿಗೆ ಹೊಸ ಹರಿತವನ್ನೊದಗಿಸಿ, ಸೀಮಿತ ಚೌಕಟ್ಟಿನಲ್ಲಿ ಬೇರೆ ಬೇರೆ ವಿಷಯಗಳ ಕಿರು ಪರಿಚಯ ನೀಡುವ **ವನಿತಾ ಪದಸಂಪದ** ಶಬ್ದ ಸಂಪತ್ತಿಗೆ ಒಂದು ಪರೀಕ್ಷೆ ಕೂಡ. ಮನರಂಜನೆಯೊಂದಿಗೆ ಮನೋವಿಕಾಸಕ್ಕೂ ಸಹಾಯಕವಾಗಿರುವ, ಮಹಿಳೆಯರು ಮಾತ್ರ ಪಾಲ್ಗೊಳ್ಳಲು ಅವಕಾಶವಿರುವ ವಿಶಿಷ್ಟ ಸ್ಪರ್ಧೆ.

ಆಧಾರಗಳನ್ನು ಅನುಸರಿಸಿ ನಿಮ್ಮ ಉತ್ತರಗಳನ್ನು ಪಕ್ಕದ **ವನಿತಾ ಪದಸಂಪದ** ಚೌಕದಲ್ಲಿ ಭರ್ತಿ ಮಾಡಿ 1992ರ ಮೇ 25 ನೇ ದಿನಾಂಕದೊಳಗೆ "ವನಿತಾ ಪದಸಂಪದ, ಚಂದಮಾಮ ಬಿಲ್ಡಿಂಗ್ಸ್, ಮದರಾಸು–600 026" ಈ ವಿಳಾಸಕ್ಕೆ ಕಳುಹಿಸಿರಿ. ಉತ್ತರ **ವನಿತಾ ಪದಸಂಪದ** ಚೌಕದಲ್ಲಿರಬೇಕಾದುದು ಅವಶ್ಯ. ಸರಿಯಾದ ಉತ್ತರಕ್ಕೆ ಬಹುಮಾನ.

ಲಕೋಟೆಯಲ್ಲಿ "ವನಿತಾ ಪದಸಂಪದ" ಚೌಕದ ಹೊರತು ಬೇರೇನೂ ಇರಕೂಡದು. ಒಂದು ಲಕೋಟೆಯಲ್ಲಿ ಒಂದೇ ಪ್ರವೇಶಿಕೆ ಇರಬೇಕು. ಚೌಕಗಳಲ್ಲಿರುವ ಅಕ್ಷರಗಳು ಸ್ಪಷ್ಟವಾಗಿ ತಿಳಿಯುವಂತಿದ್ದು ಚಿತ್ತುಗಳೂ, ತಿದ್ದುಪಡಿಗಳೂ ಇರಬಾರದು. ಇದರ ಸರಿಯಾದ ಉತ್ತರವನ್ನು 1992ರ ಜೂಲೈ 'ವನಿತಾ' ದಲ್ಲಿ ಪ್ರಕಟಿಸಲಾಗುತ್ತದೆ. ನಮ್ಮಲ್ಲಿರುವ ಉತ್ತರಗಳಿಗೆ ಸರಿಹೊಂದುವ ಉತ್ತರ ಕಳಿಸಿದವರಿಗೆ ರೂ. 250/– ಬಹುಮಾನ ನೀಡಲಾಗುತ್ತದೆ. ಸರಿಯಾದ ಉತ್ತರ ಕಳುಹಿಸಿದವರ ಸಂಖ್ಯೆ ಒಂದಕ್ಕಿಂತ ಹೆಚ್ಚಾಗಿದ್ದರೆ ಬಹುಮಾನದ ಹಣವನ್ನು ಹಂಚಲಾಗುತ್ತದೆ. ಹಾಗೂ ಬೇರೆ ಯಾವುದೇ ರೀತಿಯ ತೀರ್ಮಾನವನ್ನು ತೆಗೆದುಕೊಳ್ಳುವ ಅಧಿಕಾರ ಸಂಪಾದಕ ವರ್ಗಕ್ಕಿದ್ದು ಈ ವಿಷಯದಲ್ಲಿ ಪತ್ರ ವ್ಯವಹಾರಕ್ಕೆ ಅವಕಾಶವಿಲ್ಲ. 'ವನಿತಾ'ದಲ್ಲಿ ಕೆಲಸ ಮಾಡುವವರಾಗಲಿ ಅವರಿಗೆ ಸಂಬಂಧಿಸಿದವರಾಗಲಿ ಇದರಲ್ಲಿ ಭಾಗವಹಿಸುವಂತಿಲ್ಲ.

### ಎಡದಿಂದ ಬಲಕ್ಕೆ

1. ಏಕತತ್ತ್ವವಾದ ಬೋಧಿಸಿದ ಮಹಾಪುರುಷ–ಈ ತಿಂಗಳಿನಲ್ಲಿ ಈತನ ಜಯಂತಿ (3)
4. ಈ ತಿಂಗಳಿನಲ್ಲಿಯೇ ಜಯಂತಿ ಆಚರಿಸಿಕೊಳ್ಳುತ್ತಿರುವ ವಿಭೂತಿ ಪುರುಷ (3)
6. ಮದುವೆಯಾಗದಿದ್ದರೂ – ಅಪರೂಪದ ಪ್ರೀತಿ–ಪ್ರೇಮಗಳಿಗೆ ಕಾರಣರಾದ ಜೋಡಿ (5)
8. ಬಲಾಢ್ಯ ಪ್ರಾಣಿಗೆ ಕೊಬ್ಬು ಏರಿದೆ (4)
9. ಒಂಬತ್ತನೆಯ ಈ ವಿಶ್ವ ಹೊಸದು (4)
10. ಭವಿಷ್ಯವನ್ನು ಅಂಗೈಯಲ್ಲಿ ತೋರುವ ಮುಲಾಮು (3)
12. ಸಂಡೆಗೆ ಬರುವ ಹಪ್ಪಳದ ಸ್ನೇಹಿತ (3)
14. ಒದ್ದೆ ಮಾಡಲು ಜ್ಞಾಪಿಸು (3)
16. ಆಹುತಿ ನೀಡಿದ ದಾನವ (2)
17. ಮರ್ಯಾದೆಯ ಮಾಪನ (2)
18. ಇಳಿಯ ಬೆಳಿಯ ಬಣ್ಣ (3)
22. ದೀನರಿಗೂ ಸಿಗುವ ಚಟ್ನಿಯ ಸುವಾಸನೆ (3)
24. ಹರಿಯನ್ನು ಸೆಳೆದುಕೊಂಡ ಗುಂಗು (3)
26. ಬೀದಿ ಬೀದಿ ಅಲೆಯುವ ಸ್ಥಿತಿ (4)
28. ಆರಂಭ–ಕೊನೆಯದಲ್ಲದ ವೇಳೆ (4)
29. ಪಟವನ್ನು ಕಟ್ಟಿ ನಡೆಸುವ ದೋಣಿ (5)
30. ಮುಕುಂದನಿಗಾಗಿ ಒತ್ತು (3)
31. ವೃಕ್ಷದ ನಡುವೆ ಕುಳಿತ ನೀರಿನಲ್ಲಿನ ಪ್ರಾಣಿ (3)

### ಮೇಲಿನಿಂದ ಕೆಳಕ್ಕೆ :

2. ಎಣ್ಣೆಯಲ್ಲಿ ಬೇಯಿಸಿದ ತಿನಿಸು (5)
3. ಈ ವಿಶಿಷ್ಟಾದ್ವೈತ ಪ್ರತಿಪಾದಕರ ಜಯಂತಿಯೂ ಈ ತಿಂಗಳೇ (4)
5. ಪರಸ್ಪರ ಕುಳಿತು ಮಾಡುವ ಆಲೋಚನೆ (5)
6. ಹಿಂದೆ ಸಿಂಹಾಸನ ಏರಿ ಕುಳಿತವ (2)
7. ಹೊಸದಾದ್ದೆಲ್ಲವನ್ನು ತಿರುಗಿಸಿಕೊಂಡ ಕಾಡು (2)
10. ಅಂತೆಯೆ ಕೊನೆಗೊಂಡ ಮುಕ್ತಾಯ (2)
11. ನರಬಲಿ ಕೊಟ್ಟರೂ ಸಂಭ್ರಮ ಪಡು (2)
12. ತನುವಿಗೆ ಬಂದ ಅನುಮಾನ (3)
13. ಬರು ಬರುತ್ತಾ ಪರಚು (3)
14. ನೆನ್ನೆಯ ಜ್ಞಾಪಕ (3)
15. ಪುಷ್ಪಕ್ಕೆ ಬಂದ ಒಳ್ಳೆಯ ಚಿತ್ತ (3)
19. ದೇಶವನ್ನು ಕಾಯುವ ಜವಾನನ ಹೆಸರು ಮುದ್ದಿನ ದಶರಥ ಪುತ್ರ (5)
20. ವಾನರನಲ್ಲಿ ನರನಿಗಿಲ್ಲದ ಅಂಗ (2)
21. ನಲಿಯಿರಿ–ಈ ಪ್ರಾಣಿ ಸಿಗುತ್ತದೆ (2)
23. ಬಹು ದಿನಗಳದು (5)
25. ಸುಬ್ರಹ್ಮಣ್ಯನನ್ನು ಪೂಜಿಸುವವರು ವರ್ಷಕ್ಕೊಮ್ಮೆ ಸಲ್ಲಿಸುವ ಸೇವೆ (4)
27. ಕವನವನ್ನು ರಾಗವಾಗಿ ಆಲಾಪಿಸಿದ್ದು ತಿರುಗಿದೆ (2)
28. ಮರುಗುತ್ತಿದ್ದಾಗ ಜನಿಸಿದ ಶಿಶು (2)




ವನಿತಾ ಪದಸಂಪದ 45

ಹೆಸರು ..............................................................................

ವಿಳಾಸ..............................................................................

..............................................................................

ದಿ. 19-2-92 ರಿಂದ ದಿ. 25-2-92 ರ ವರೆಗೆ ಕರ್ಕಿಯಲ್ಲಿ ಉತ್ತರ ಕನ್ನಡ ಜಿಲ್ಲೆಯ 'ನೆಹರೂ ಯುವ ಕೇಂದ್ರ' ದವರ ನಿರ್ದೇಶನದಲ್ಲಿ ಕರ್ಕಿಯ ಮಹಿಳಾ ಮಂಡಳಿಯವರು, ಚೆನ್ನಕೇಶವ ಯುವಕ ಮಂಡಳಿ ಕರ್ಕಿಯ ಮಂಡಲ ಪಂಚಾಯ್ತಿ, ಜೇಸಿಕ್ಲಬ್ ಹೊನ್ನಾವರ ಇವರ ಸಹಕಾರದಿಂದ ಯುವ ಮುಂದಾಳತ್ವ ತರಬೇತಿ ಶಿಬಿರವನ್ನು ನಡೆಸಿದರು.





6-3-92 ರಂದು ಹಗರಿಬೊಮ್ಮನಹಳ್ಳಿ ಯ
ಸರಸ್ವತಿ ಶಿಶು ಮಂದಿರದಲ್ಲಿ ಸರಸ್ವತಿ
ಪೂಜೆಯನ್ನು ಮಾಡಲಾಯಿತು.



ಬಳ್ಳಾರಿ ನಗರದ ಕ್ರಾಫ್ಟನ್ಸ್ ಲೇಡೀಸ್ ಕ್ಲಬ್‌ನವರು ದಿ. 7-3-92 ರಂದು ತಮ್ಮ ಕ್ಲಬ್‌ನ 64 ನೇ ವಾರ್ಷಿಕೋತ್ಸವವನ್ನು ಆಚರಿಸಿದರು.








ಇನ್ನರ್ ವ್ಹೀಲ್ ಕ್ಲಬ್ ಹಾವೇರಿ, ರೋಟರಿ ಕ್ಲಬ್ ಹಾವೇರಿ ಹಾಗೂ ಇತರ ಸೇವಾ ಸಂಸ್ಥೆಗಳ ಸಹಾಯದಿಂದ ದಿ. 29-3-92 ರಂದು ಉಚಿತ ನೇತ್ರ ಚಿಕಿತ್ಸಾ ಶಿಬಿರವನ್ನು ನಡೆಸಿದರು.



ದಿ. 24-2-92 ರಂದು ಕುಮಟಾದ ಸಹಕಾರಿ ಮಹಿಳಾ ಮಂಡಲ ಬಾಲವಾಡಿ ಮಕ್ಕಳಿಗಾಗಿ ಛದ್ಮವೇಷ ಸ್ಪರ್ಧೆ ಏರ್ಪಡಿಸಿತ್ತು.



ಬೆಂಗಳೂರಿನ ಕೆಂಗೇರಿ ಉಪನಗರದ ಶಕ್ತಿ ಮಹಿಳಾ ಸ್ವಾವಲಂಬನ ಕೇಂದ್ರವು ದಿ. 18-3-92 ರಂದು ತನ್ನ ನಾಲ್ಕನೆ ವಾರ್ಷಿಕೋತ್ಸವವನ್ನು ಆಚರಿಸಿತು.




## 'ಕಥೆಗೊಂದು ಚಿತ್ರ' ಶೀರ್ಷಿಕೆಯಲ್ಲಿ ಆಯ್ಕೆಯಾದ ಕಥೆಗಳು

### ಪೇಚು

'ಪೋಸ್ಟ್'

ಕಾಲೇಜಿಗೆ ಹೊರಡಲು ತಯಾರಾಗುತ್ತ ಬೇಗಬೇಗನೆ ಷೂಲೇಸ್ ಬಿಗಿಯುತ್ತಿದ್ದ ನನ್ನಗಮನ ಬಾಗಿಲ ಸಂದಿಯಿಂದ ವರಾಂಡದೊಳಗೆ ಬಿದ್ದಿದ್ದ ತಿಳಿನೀಲಿ ಬಣ್ಣದ ಕವರಿನತ್ತ ಹರಿಯಿತು.

ಸರಕ್ಕನೆದ್ದು ಕವರನ್ನು ಎತ್ತಿಕೊಂಡು ಒಡೆಯಲು ದ್ಯುಕ್ತನಾದೆ. ಘಮ್ಮೆನ್ನುವ ಸುಗಂಧ ಮೂಗಿ ಗಡರಿತು. ಸುಖದಿಂದ ಹಾಗೇ ಜೂಗರಿಸುವಂ ತಾಯ್ತು. ಮತ್ತೊಮ್ಮೆ ಆಘ್ರಾಣಿಸಿ, ಈ ಪರಿಮಳ ಯುಕ್ತವಾದ ಸುಂದರ ಲಕೋಟೆಯನ್ನು ಕಳಿಸಿದವ ರಾರೆಂದು ಕವರಿನ ಹಿಂದೆ ಮುಂದೆ ತಿರುಗಿಸಿ ನೋಡಿದೆ.

'ಸೌಮ್ಯ'—ಮುದ್ದಾದ ದುಂಡು ಅಕ್ಷರಗಳು !

ಹುಬ್ಬುಗಳು ಅಚ್ಚರಿಯಿಂದ ಮೇಲೇರಿದವು ! ಆತುರಾತುರವಾಗಿ ಕವರ್ ಒಡೆದು ಕಾಗದವನ್ನು ಬಿಡಿಸಿ ನೋಡಿದೆ. ತಿಳಿನೀಲಿ ಬಣ್ಣದ ನವಿರಾದ ಕಾಗದ ! ಅಂಚಿನಲ್ಲಿ ಅಂದವಾಗಿ ಕುಂಚದಿಂದ ಬಿಡಿಸಿದ ಹೂಗೊಂಚಲು. ಕಾಗದ ಬರೆದ ಸುಂದರಿಯ ಕಲಾತ್ಮಕ ಅಭಿರುಚಿಯ ದ್ಯೋತಕ !

'ಸನ್ಮಾನ್ಯ ಶ್ರೀ...'

ಗೌರವಪೂರ್ಣ ಸಂಬೋಧನೆ... ವಿಧೇಯ ಬರವಣಿಗೆ ಪತ್ರ. ಮುಂದ ಮುಂದಕ್ಕೆ ಓದುತ್ತ ಹೋದಂತೆ ಕಳೆದ ತಿಂಗಳು ಬೆಂಗಳೂರಿನಲ್ಲಿ ನಡೆದ ಸಾಹಿತ್ಯದ ವಿಚಾರಸಂಕಿರಣದ ಸವಿನೆನಪು ಬಿಚ್ಚಿಕೊಂಡಿತು.

ಅಂದಿನ ವಿಚಾರ ಸಂಕಿರಣದಲ್ಲಿ ನಾನೊಂದು ಪ್ರಬಂಧ ಮಂಡಿಸುವವನಿದ್ದೆ. ಜನಪ್ರಿಯ ಲೇಖಕ ನಾದ ನಾನು ನನ್ನ ಮಟ್ಟಿಗೆ ಉತ್ತಮವಾದ ಭಾಷಣ ಸಿದ್ಧಪಡಿಸಿಕೊಂಡು, ನನ್ನ ಯೌವ್ವನೋ- ತ್ಸಾಹ—ಸುಂದರ ರೂಪಕ್ಕೆ ತಕ್ಕಂತೆ ಸ್ಮಾರ್ಟಾಗಿ ಡ್ರೆಸ್ ಮಾಡಿಕೊಂಡು ವೇದಿಕೆ ಹತ್ತಿ ಭಾಷಣ ಮಾಡಿದ್ದೆ.

ಪ್ರೇಕ್ಷಕರಿಂದ ನಡುನಡುವೆ ಚಪ್ಪಾಳೆಗಳು... ವೇದಿಕೆಯ ಬಲ ಭಾಗದಲ್ಲಿ ಕುಳಿತಿದ್ದ ಕನ್ನಡ ಎಂ. ಎ. ವಿದ್ಯಾರ್ಥಿನಿಯರ ಸಮೂಹವಂತೂ ಸೆಷನ್ ಮುಗಿದೊಡನೆ ನನ್ನನ್ನು ಸುತ್ತುವರಿದರು.

'ಸಾರ್ ನಿಮ್ಮ ಆಟೋಗ್ರಾಫ್...'

ಹತ್ತಾರು ಸುಂದರ ತರುಣಿಯರು ಹಸ್ತಾಕ್ಷರದ ಪುಸ್ತಕಗಳನ್ನು ನನ್ನತ್ತ ಚಾಚಿದಾಗಲೇ ನಾನವಳನ್ನು ಕಂಡಿದ್ದು !

ಓಹ್ ! ನನ್ನ ಹೃದಯದ ಬಡಿತ ಒಂದರೆ ಗಳಿಗೆ ನಿಂತೇಬಿಟ್ಟಿತು. ಅಬ್ಬಾ ಎಂಥ ಸೌಂದರ್ಯ ! ಆಕರ್ಷಕ ಮುಖದಲ್ಲರಳಿದ್ದ ಬಟ್ಟಲು ಕಂಗಳು ! ಎವೆಯಿಕ್ಕದೆ ಅವಳನ್ನೇ ದಿಟ್ಟಿಸಿದೆ. ಅವಳ ಪಕ್ಕ ದಲ್ಲಿದ್ದ ಮೊಡವೆ ಮುಖದ ಕರಿ ಹುಡುಗಿಯ ಜೊತೆಗೆ ಕಿಸಕ್ಕನೆ ನಕ್ಕಾಗಲಂತೂ ಬೆಳದಿಂಗಳು ಸುರಿದಂತಾಯಿತು !

ಇದೇ ಸಮಯ ಎಂದು ನಾನು ಆ ವಿದ್ಯಾರ್ಥಿ ನಿಯರೊಡನೆ ಮಾತಾಡುತ್ತ ಸಾಹಿತ್ಯಾಭಿರುಚಿ

ಯುಳ್ಳ ಇಬ್ಬರು ಹುಡುಗಿಯರ ವಿಳಾಸಗಳನ್ನು ನನ್ನ ಡೈರಿಯಲ್ಲಿ ಬರೆಸಿಕೊಂಡು, ಆ ಚೆಲುವೆಯತ್ತ 'ನಿಮ್ಮ ಅಡ್ರೆಸ್' ಎಂದು ಡೈರಿ ಚಾಚಿದೆ.

ಡೈರಿ ವಾಪಸ್ ಬಂದಾಗ ಅವಳ ಹೆಸರನ್ನು ಕಣ್ತುಂಬ ತುಂಬಿಕೊಂಡೆ. 'ಸೌಮ್ಯ' ಎಂಥ ಸುಂದರ ಹೆಸರು!

ಊರಿಗೆ ಬಂದವನೆ ಅವಳಿಗೆ ನನ್ನ ಸಾಹಿತ್ಯಾಸಕ್ತಿ, ಬರವಣಿಗೆ ಕುರಿತು, ಜೊತೆಗೆ ಅವಳ ವಿಷಯಗಳನ್ನೂ ಕೇಳಿ ದೊಡ್ಡ ಪತ್ರ ಬರೆದೆ.

ಓಹ್!...ಅದಕ್ಕೆ ಅವಳ ಉತ್ತರ ಬಂದಿದೆ, ತಿಂಗಳು ತಡವಾಗಿ. ಅದನ್ನು ಹಾಗೇ ತಬ್ಬಿಕೊಂಡು ನನ್ನ ರೂಮಿಗೆ ಓಡಿ ಹೋಗಿ ಸಾವಿರಸಲ ಮುದ್ದಿಕ್ಕಿದೆ.

ಪ್ರೀತಿ ಹಾಸಿ ಪುಟಗಟ್ಟಲೆ ವಾರೋಲೆ ಬರೆದೆ.

ಪತ್ರಗಳು ಅತ್ತಿಂದಿತ್ತ...ಇತ್ತಿಂದತ್ತ...ಪ್ರೀತಿ-ಪ್ರೇಮ-ವಿರಹ...ಕಡೆಗೆ ಮದುವೆಯ ನಿರ್ಧಾರ.

ಅಪ್ಪನಿಗೆ ಈ ವಿಷಯ ಹೇಳಿದಾಗ ಸಿಕ್ಕಾಪಟ್ಟೆ ಕೂಗಾಡಿದರು...ಜಾತಿ ಬಿಟ್ಟು ಪ್ರೇಮ ವಿವಾಹವಾಗುತ್ತಾನಂತೆ...ಅಂತೂ ಕೊನೆಗೆ ಒಪ್ಪಿದರು.

ನನಗೆ ಸ್ವರ್ಗಕ್ಕೆರಡೇ ಗೇಣು!

ಮದುವೆಯ ನಿಶ್ಚಿತಾರ್ಥಕ್ಕೆ ನಾನು ಅಪ್ಪನೊಡನೆ ಬೆಂಗಳೂರಿಗೆ ಹೊರಟೆ. ಸ್ಟೇಶನ್‌ಗೆ ಅವಳು ತನ್ನ ತಂದೆ-ತಾಯಿಯೊಡನೆ ಬಂದಿರುವುದಾಗಿ ತಿಳಿಸಿದ್ದಳು. ಅವಳನ್ನು ಕಾಣುವ ಮುಹೂರ್ತ...ಹೃದಯ ಢವಢವ!

ರೈಲು ಸ್ಟೇಷನ್‌ನಲ್ಲಿ ನಿಂತಿತು.

'ಹಲೋ'—ಅವಳು ನನ್ನ ಸಮೀಪ ಬಂದು ನಕ್ಕು ಕೈಬೀಸಿದಳು. ನನಗೆ ಬವಳಿ ಬಂದಂತಾಯ್ತು! ಆ ಸುಂದರಿ?—ಈ ಕುರೂಪಿ?... ಅವಳ ಕಡುಗಪ್ಪು ಬಣ್ಣದ ಮೊಡವೆ ಮುಖವನ್ನು ಕಂಡು ತತ್ತರಿಸಿ ಪೆಚ್ಚಾಗಿದ್ದೆ! ನನ್ನ ಮಗ್ಗುಲಲ್ಲಿ ನಿಂತಿದ್ದ ತಂದೆಯವರ ಮುಖವೂ ಇಂಗುತಿಂದ ಮಂಗನಂತಾಗಿತ್ತು!

ನನ್ನ ತಲೆ ಗಿರಿಗಿರಿ ಸುತ್ತಲಾರಂಭಿಸಿತು. ನನ್ನ ಸುತ್ತಲೂ ಹೆಣ್ಣುಗಳ ಚಿತ್ರಗಳು ಗಹಗಹಿಸಿ ನಗುತ್ತಿರುವಂತೆ ಭಾಸವಾಯಿತು.

ಆ ಸುಂದರ ಬೆಡಗಿ, ನನಗೆ ಇವಳ ವಿಳಾಸ ಕೊಟ್ಟು ಬೇಸ್ತು ಬೀಳಿಸಿರಬೇಕೇ?

**— ವೈ. ಕೆ. ಸಂಧ್ಯಾ ಶರ್ಮ**



## ಸುರತ್ಕಲ್ ಜೇಸಿರೇಟ್ಸ್ ಅಧ್ಯಕ್ಷೆ ಯಮುನಾ ಪಿ. ರಾವ್



ಇತ್ತೀಚೆಗೆ ನಾಗಪುರದಲ್ಲಿ ನಡೆದ ಭಾರತೀಯ ಜೂನಿಯರ್ ಚೇಂಬರ್‌ನ ರಾಷ್ಟ್ರೀಯ ಅಧಿವೇಶನದಲ್ಲಿ ಪ್ರಥಮಬಾರಿಗೆ ಸುರತ್ಕಲ್ ಜೂನಿಯರ್ ಚೇಂಬರ್‌ನ ಜೇಸಿರೇಟ್ ವಿಭಾಗಕ್ಕೆ 2 ರಾಷ್ಟ್ರೀಯ ಪುರಸ್ಕಾರ ಲಭಿಸಿತ್ತು. ದಕ್ಷಿಣ ಕನ್ನಡ ಜಿಲ್ಲೆಯಲ್ಲೇ ಜೇಸಿರೇಟ್ಸ್ ವಿಭಾಗಕ್ಕೆ ರಾಷ್ಟ್ರೀಯ ಪುರಸ್ಕಾರ ಲಭಿಸಿದ್ದು ಇದು ಪ್ರಥಮಬಾರಿ ಆಗಿದೆ.

ಅತ್ಯುತ್ತಮ ಜೇಸಿರೇಟ್ ವಿಭಾಗ ಹಾಗೂ ಜೇಸಿರೇಟ್ ವಿಭಾಗದಿಂದ ನಡೆಸಲ್ಪಟ್ಟ ಅತ್ಯುತ್ತಮ ಕಾರ್ಯಕ್ರಮ ಎಂಬುದಕ್ಕಾಗಿ ಈ ಪುರಸ್ಕಾರಗಳನ್ನು ನೀಡಲಾಗಿತ್ತು. ಪುರಸ್ಕಾರಯನ್ನು ಆ ವಿಭಾಗದ ಅಧ್ಯಕ್ಷೆ ಶ್ರೀಮತಿ ಯಮುನಾ ಪಿ. ರಾವ್ ಇವರು ರಾಷ್ಟ್ರೀಯ ಅಧ್ಯಕ್ಷ ಜೇಸಿ ರಾಜಾ ಗೋವಿಂದ ಸ್ವಾಮಿಯವರಿಂದ ಪಡೆದರು.

ಅಲ್ಲದೇ ಇತ್ತೀಚೆಗೆ ಬಿಜಾಪುರದಲ್ಲಿ ನಡೆದ ಭಾರತೀಯ ಜೂನಿಯರ್ ಚೇಂಬರ್‌ನ ಕರ್ನಾಟಕ ರಾಜ್ಯ ಸಮ್ಮೇಳನದಲ್ಲೂ ಈ ವಿಭಾಗವು ರಾಜ್ಯದಲ್ಲೇ ಅತ್ಯುತ್ತಮ ಜೇಸಿರೇಟ್ಸ್ ವಿಭಾಗ ಎಂಬ ಪುರಸ್ಕಾರಯನ್ನು ರಾಜ್ಯಾಧ್ಯಕ್ಷೆ ಜೇಸಿ ಸಂಧ್ಯಾಮಧು ಅವರಿಂದ ಸ್ವೀಕರಿಸಿತ್ತು. ಜೊತೆಗೆ ಸುಳ್ಯದಲ್ಲಿ ನಡೆದ ರಾಜ್ಯ ಜೇಸಿರೇಟ್ಸ್ ಸಮ್ಮೇಳನದಲ್ಲೂ ಇದೇ ವಿಭಾಗ ಅತ್ಯುತ್ತಮ ವಿಭಾಗ ಎಂಬ ಪುರಸ್ಕಾರ ಪಡೆದಿತ್ತು.

ಶ್ರೀಮತಿ ಯಮುನಾ ಪಿ. ರಾವ್ ಈ ವಿಭಾಗದ ಅಧ್ಯಕ್ಷೆಯಾಗಿ ತಮ್ಮ 9 ತಿಂಗಳ ಅಧಿಕಾರಾವಧಿಯಲ್ಲಿ 90 ಕ್ಕಿಂತಲೂ ಹೆಚ್ಚು ಸಾರ್ವಜನಿಕರಿಗೆ ಪ್ರಯೋಜನಕಾರಿಯಾಗಿರುವ ಕಾರ್ಯಕ್ರಮಗಳನ್ನು ನಡೆಸಿದ್ದರು. ಬಹಳ ಉತ್ಸಾಹಿಯೂ, ಪ್ರತಿಭಾವಂತೆಯೂ ಆದ ಇವರು ಈ ವರ್ಷ ಜರುಗಿದ ಎಲ್ಲಾ ವಲಯ, ರಾಜ್ಯ ಹಾಗೂ ರಾಷ್ಟ್ರೀಯ ಸಮ್ಮೇಳನದಲ್ಲಿ ಭಾಗವಹಿಸಿ ಭಾಷಣ ಹಾಗೂ ರಸಪ್ರಶ್ನೆ ಸ್ಪರ್ಧೆಗಳಲ್ಲಿ ಬಹುಮಾನಿತರಾಗಿದ್ದರು. ರಾಜ್ಯ ತರಬೇತುದಾರರಾದ ಇವರಿಗೆ ಹಲವಾರು ತರಬೇತಿಗಳನ್ನು ನಡೆಸಿದ್ದಕ್ಕಾಗಿ ಕರ್ನಾಟಕ ರಾಜ್ಯ ಸಮ್ಮೇಳನದಲ್ಲಿ ಸ್ಮರಣಿಕೆಯನ್ನಿತ್ತು ಗೌರವಿಸಲಾಯಿತು. ಇತ್ತೀಚೆಗೆ ಸುರತ್ಕಲ್ ಜೂನಿಯರ್ ಚೇಂಬರ್‌ನವರು ಇವರು ಮಾಡಿದ ಅತ್ಯುತ್ತಮ ಸಾಧನೆಗೆ ಇವರನ್ನು ಸನ್ಮಾನಿಸಿದರು. ಇವರ ಪತಿ ಜೇಸಿ ಪಿ. ಪುರುಷೋತ್ತಮರಾಯರು ಭಾರತೀಯ ಜೂನಿಯರ್ ಚೇಂಬರ್ ಕರ್ನಾಟಕದ ರಾಜ್ಯ ಉಪಾಧ್ಯಕ್ಷರಾಗಿದ್ದು ಉತ್ತಮ ಸೇವೆಗೆ ಹೆಸರಾದವರು. ಕಾಟಿಪಳ್ಳದಲ್ಲಿ ಸರಕಾರಿ ಶಾಲಾ ಶಿಕ್ಷಕಿಯಾದ ಶ್ರೀಮತಿ ಯಮುನಾ ಪಿ. ರಾವ್ 2 ಗಂಡು ಮಕ್ಕಳ ತಾಯಿಯೂ ಆಗಿದ್ದಾರೆ.

**— ಶ್ರೀಮತಿ ಜಯಶ್ರೀ ಕಾಮತ**

*****

## ಮರುಹುಟ್ಟು

ಇದು ನಡೆದದ್ದು ಹೀಗೆ;

ನಾನು ಬೆಳಗ್ಗೆ ಬಸ್ ಹಿಡಿದು 9.30 ಕ್ಕೆ ನನ್ನ ಬ್ಯಾಂಕ್‌ಗೆ ಹೊರಟಿದ್ದೆ. ಅದು ಪೀಕ್ ಅವರ್ ಆದುದರಿಂದ ವಿಪರೀತ ರಷ್ ನೂಕಾಟ. ಅಂತೂ ಸಿಟಿಂಗ್ ಅಥವಾ ಸ್ಟಾಂಡಿಂಗ್ ಯಾವುದೂ ಸಿಗದೆ ತೂಗಾಡಿಕೊಂಡು ಹೋಗುವ ಸೀಟ್ ಸಿಕ್ಕಿತು. ಅದೇ ನನ್ನ ಪುಣ್ಯ ಎನ್ನಬಹುದು. ನಾನು ನನ್ನ ಷರ್ಟಿನ ಮುಂದಿನ ಜೇಬಿನಲ್ಲಿ ನನ್ನ ಪರ್ಸ್‌ನಲ್ಲಿ ಸ್ವಲ್ಪವೇ ಚಿಲ್ಲರೆ, ನನ್ನ ಭಾವಚಿತ್ರ ವಿಳಾಸವಿರುವ ಐಡೆಂಟಿಟಿ ಕಾರ್ಡ್(ಗುರುತಿನ ಚೀಟಿ) ಎಲ್ಲವನ್ನೂ ಇಟ್ಟುಕೊಂಡಿದ್ದೆ. ನನ್ನ ಕೈಗಳೆರಡೂ ಬಸ್‌ನ ಮೇಲ್ಭಾಗದ ರಾಡ್ ಹಿಡಿದುಕೊಂಡು ಇದ್ದುವು. ನಾನು ನೋಡು ನೋಡುತ್ತಾ ಇದ್ದ ಹಾಗೆಯೇ ಬಸ್ ಹತ್ತಿದ್ದ ಆಸಾಮಿಯೊಬ್ಬ ನನ್ನ ಪರ್ಸನ್ನು ಎಗರಿಸಿಕೊಂಡು ಬಸ್ ಇನ್ನೇನು ಹೊರಡಬೇಕು ಎನ್ನುವಷ್ಟರಲ್ಲಿ ಇಳಿದು ಓಡಿದ. ಓಡಿದ್ದೇ ತಡ ಎದುರಿನಿಂದ ಬರುತ್ತಿದ್ದ ಆಟೋ ಒಂದಕ್ಕೆ ಡಿಕ್ಕಿ ಹೊಡೆಯುವುದನ್ನು ಹೇಗೋ ತಪ್ಪಿಸಿಕೊಂಡು ಮುಂದೆ ಹೋಗುತ್ತಿದ್ದ ಒಂದು ಸ್ಕೂಟರ್ ಸಿಕ್ಕಿ ಹಾಕಿಕೊಂಡು ಅದರ ಹೊಡೆತಕ್ಕೆ ಫುಟ್ ಪಾತ್‌ಗೆ ಎಸೆಯಲ್ಪಟ್ಟನು. ಒಂದೆರಡು ಸಲ ಮಿಸುಕಾಡಿ ನಂತರ ಹಾಗೆಯೇ ಸ್ತಬ್ಧನಾದನು.

ಇಷ್ಟೆಲ್ಲಾ ಘಟನೆ ಒಂದೆರಡು ನಿಮಿಷಗಳಲ್ಲಿ ನಡೆದು ಹೋಗಿತ್ತು. ನಾನು ಏನಾಗುತ್ತಿದೆ, ಏನು ಮಾಡಬೇಕು ಯೋಚಿಸುವಷ್ಟರಲ್ಲಿ ನನ್ನ ಬಸ್ ಮುಂದಕ್ಕೆ ಹೊರಟೇ ಹೋಯಿತು. ನನ್ನ ಗುರುತಿನ ಕಾರ್ಡ್ ಅವನಲ್ಲಿದ್ದುದರಿಂದ ಅಪಘಾತಕ್ಕೆ ಈಡಾದವನು ನಾನೇ ಎಂದು ಜನ ಭಾವಿಸುತ್ತಾರೆ. ನನ್ನ ವಿಳಾಸ ಪೂರ್ಣವಾಗಿ ಅದರಲ್ಲಿದ್ದುದರಿಂದ ಮನೆಗೆ ಮತ್ತು ಬ್ಯಾಂಕ್‌ಗೆ ಎರಡೂ ಕಡೆಗಳಿಗೆ ಪೋಲೀಸರು ಸುದ್ದಿ ಮುಟ್ಟಿಸುತ್ತಾರೆ. ನನ್ನ ಹೆಂಡತಿ ಪಮ್ಮಿಗೆ ಅದೆಂತಹ ಆಘಾತದ ಸುದ್ದಿ? ಹೇಗೆ ಸಹಿಸಿಯಾಳು? ಇನ್ನು ಬ್ಯಾಂಕ್‌ನಲ್ಲಿ ನನ್ನ ಅಪಘಾತದ ಸುದ್ದಿಯನ್ನು ಕೇಳಿ ಎಲ್ಲರೂ ಮನೆಗೆ ದೌಡಾಯಿಸುತ್ತಾರೆ. ಪಮ್ಮಿ ಈ ಪರಿಸ್ಥಿತಿಯನ್ನು ಹೇಗೆ ನಿಭಾಯಿಸುತ್ತಾಳೆ? ಅದನ್ನು ನೆನೆಸಿಕೊಂಡಾಗ ತಲೆ ಗಿರ್ರೆಂದಿತು.

ನಾನು ಮುಂದೆ ಮಾಡುವುದನ್ನೆಲ್ಲಾ ಯೋಚಿಸಿಕೊಂಡು ನನ್ನ ಪರ್ಸನ್ನು ಹಾರಿಸಿದವನ ಹತ್ತಿರ ನನ್ನ ಗುರುತಿನ ಚೀಟಿಯನ್ನು ವಾಪಸು ತೆಗೆದುಕೊಂಡರೆ ಸಾಕು,ಮುಂದಿನದಕ್ಕೆಲ್ಲಾ ನಾನು ಕಾರಣವಾಗುವುದಿಲ್ಲ. ಆದ್ದರಿಂದ ನಾನು ಮುಂದಿನ ಸ್ಟಾಪ್‌ನಲ್ಲೇ ಇಳಿದು ಬಿಡುವುದು ಕ್ಷೇಮ ಎಂದು ತಿಳಿದು ಮುಂದಿನ ಸ್ಟಾಪ್‌ನಲ್ಲಿ ಇಳಿದೆ. ಅಷ್ಟು ಹೊತ್ತಿಗಾಗಲೇ ಅವನು ಬಿದ್ದ ಫುಟ್‌ಪಾತ್ ಜಾಗ ಖಾಲಿಯಾಗಿತ್ತು. ಸರ್ಕಲ್‌ನಲ್ಲಿದ್ದ ಪೋಲೀಸನ್ನು ಕೇಳಿದೆ. ಅವನು ಹತ್ತಿರದಲ್ಲೇ ಇದ್ದ ಆಸ್ಪತ್ರೆಯ ಕಡೆಗೆ ಕೈಮಾಡಿ ತೋರಿಸಿದ. ಆಸ್ಪತ್ರೆಗೆ ಓಡಿದೆ. ಆಸ್ಪತ್ರೆಗೆ ಸಾಗಿಸುವಷ್ಟರಲ್ಲಿ ಆತ ಮೃತಿ ಹೊಂದಿದ್ದನಂತೆ. ಹೆಣವನ್ನು ಶವಾಗಾರಕ್ಕೆ ಸಾಗಿಸುವ ಮೊದಲು ಪೋಲೀಸರಿಂದ ಮಹಜರು ನಡೆಯುತ್ತಿದ್ದಿತು. ಆಗ ನಾನು ಅಲ್ಲಿಗೆ ಪ್ರವೇಶಿಸಿದೆ. ಒಬ್ಬ ಪೋಲೀಸಿನವನು ಹೇಳುತ್ತಿದ್ದ.

ಮತ್ತೊಬ್ಬ ಬರೆದುಕೊಳ್ಳುತ್ತಿದ್ದನು. ಒಬ್ಬ ಪೋಲೀಸಿನವನು...ಮೃತ ವ್ಯಕ್ತಿಯ ಹೆಸರು !

ಮತ್ತೊಬ್ಬ—ಎಸ್. ರಾಘವೇಂದ್ರ

...ಕೆಲಸ ?

......

...ವಿಳಾಸ ?

...ನಂ. 16. 3 ನೇ ಕ್ರಾಸ್., ಚಾಮರಾಜ ಪೇಟೆ, ಬೆಂಗಳೂರು 18.

...ಮನೆ ವಿಳಾಸ.

...ನು. 204/1 16 ನೇ ಕ್ರಾಸ್, 4 ನೇ ಮುಖ್ಯ ರಸ್ತೆ, ಜಯನಗರ, ಬೆಂಗಳೂರು-11.

ನಾನು ಮೃತ ವ್ಯಕ್ತಿಯಾಗಿ ಮಾರ್ಪಾಡು ಹೊಂದಿದ್ದನ್ನು ಕೇಳಿ ನಾನೇ ಮತ್ತೊಮ್ಮೆ ಮೂರ್ಛೆ ಬೀಳುವಂತಾಯಿತು. ಇಷ್ಟರಲ್ಲಿ ನನ್ನ ಭಾವಚಿತ್ರ ಹಾಗೂ ಸತ್ತವನ ಮುಖ ಹೊಂದಾಣಿಕೆಯಾಗದೇ ಪೋಲೀಸಿನವರು ಜಿಜ್ಞಾಸೆಯಲ್ಲಿರುವಾಗಲೇ ನಾನು ಅಲ್ಲಿಗೆ ಪ್ರತ್ಯಕ್ಷವಾಗಿ ಹೋಗಿ ವಿವರಣೆ ಕೊಟ್ಟು ಅವರ ಸಮಸ್ಯೆಯನ್ನು ಪರಿಹರಿಸಿ ಮೃತರ ಲಿಸ್ಟ್ ನಲ್ಲಿದ್ದ ನನ್ನ ಹೆಸರನ್ನು ಹೊಡೆಸಿ ಹಾಕಿದೆ. ಪೋಲೀಸ್ ಇನ್‌ಸ್ಪೆಕ್ಟರ್ ನನಗೆ ಚೆನ್ನಾಗಿ ಗೊತ್ತಿತ್ತು. ಅವರು ನಗುತ್ತಾ "ಏನು ರಾಘವೇಂದ್ರ ಮರುಹುಟ್ಟು ಪಡೆದೆ" ಎಂದರು.

ಒಂದು ವೇಳೆ ನನ್ನ ಡೈರಿಯನ್ನು ಕದ್ದವನು ನನಗೆ ಗೊತ್ತಿಲ್ಲದೆ ಇನ್ನೆಲ್ಲೋ ಸತ್ತಿದ್ದರೆ ಏನಾಗುತ್ತಿತ್ತು ? ನಾನಂತೂ ಕಣ್ಣಾರೆ ನೋಡಿದ್ದರಿಂದ ಸರಿ ಹೋಯಿತು. ಇಲ್ಲದೇ ಹೋಗಿದ್ದಿದ್ದರೆ ನಾನೇ ಸತ್ತವನೆಂದು ತಿಳಿದು ನನ್ನ ಫೋಟೋವನ್ನು ಚಿರಸ್ಮರಣೆ ಅಂಕಣದಲ್ಲಿ ಛಾಪಿಸುತ್ತಿದ್ದರು. ನಾನೋ ಸುಮಾರು 7-8 ಕಡೆ, ಸಂಘ ಸಂಸ್ಥೆಗಳಲ್ಲಿ ಸಕ್ರಿಯ ಕೆಲಸಗಾರ. ಎಲ್ಲಾ ವರ್ತಮಾನ ಪತ್ರಿಕೆಗಳಲ್ಲಿ ನನ್ನ ಭಾವಚಿತ್ರ ಪ್ರಕಟಗೊಳ್ಳುತ್ತಿತೆಂದು ಯೋಚಿಸುತ್ತಾ ಯೋಚಿಸುತ್ತಾ ನನ್ನ ತಲೆ ಮತ್ತೊಮ್ಮೆ ಗಿರ್ರೆಂದು ತಿರುಗಿತು.

**— ಶಾರದಾ ಶಾಮಣ್ಣ**



## ಆ ಕಾಗದಗಳು

ಒಂದರ ಹಿಂದೊಂದರಂತೆ ಬಂದ ಆ ಕಾಗದಗಳು ನನ್ನ ನೆಮ್ಮದಿಯನ್ನೇ ಕಲಕಿಬಿಟ್ಟವು. ನಾನು ಹೆಣ್ಣಿನ ಮೇಲೆ ಇಟ್ಟಿದ್ದ ಒಳ್ಳೆಯ ಭಾವನೆಗಳೆಲ್ಲವನ್ನೂ ಹಾಳು ಮಾಡಿದ್ದವು. ಬರೆದವರೂ ಕೂಡ-ಹೆಣ್ಣುಗಳೇ !

ಹಿಂದಿನ ವಾರ ನಾನು ನೋಡಿ ಬಂದ ಸುಷಮಾ ಬಗ್ಗೆ ಬರೆದಿರುವ ಕಾಗದಗಳು ಅವು. ಆಕೆಯ ನಡತೆ ಸರಿಯಾಗಿಲ್ಲವೆಂದು ಒಂದು ಪತ್ರ ಆರುಹುತ್ತಿದ್ದರೆ, ಇನ್ನೊಂದು ಆಕೆಗೆ ಪ್ರಿಯಕರನಿರುವನೆಂದು ಸಾರುತ್ತಿತ್ತು. ಹೀಗೆ ಆಕೆಯ ಜೀವನ ಚರಿತ್ರೆಯನ್ನೆ ಬಣ್ಣಬಣ್ಣವಾಗಿ ಬಣ್ಣಿಸಿರುವ ಕಾಗದಗಳು ಅವು.

ಮನೆಗೆ ಬಂದವನೇ ಅಮ್ಮನ ಬಲವಂತಕ್ಕೆ ಮಣಿದು ತಿಂಡಿ ಸೇವಿಸಿ, ಕಾಫಿ ಕುಡಿದು ಮಲಗಿಬಿಟ್ಟೆ. ಕಣ್ಣು ಮುಚ್ಚಿದರೂ ಆ ಕಾಗದಗಳೆಲ್ಲ ನನ್ನ ಕಣ್ಣ ಮುಂದೆ ಚಕ್ರದಂತೆ ಸುತ್ತತೊಡಗಿದವು. ನಿದ್ದೆ ಯಾವಾಗ ನನ್ನನ್ನಾವರಿಸಿತೊ ನನಗೆ ತಿಳಿಯದು.

ಪತ್ರಗಳ ಬಗ್ಗೆ ಸಂಜಯನ ಜತೆ ಮಾತನಾಡಬೇಕೆನಿಸಿತು. ಕಾರಣ, ನಾವಿಬ್ಬರೂ ತುಂಬ ಸ್ನೇಹಿತರು. ಅವನ ಆಫೀಸಿಗೆ ಫೋನ್ ಮಾಡಿದೆ. ಅರ್ಧ ಗಂಟೆಯ ನಂತರ ಬಂದ.

"ಏನೋ ಸುರೇಶ, ತುಂಬ ಮಾತನಾಡುವುದಿದೆ ಅಂತ ಕರೆದೆ" ಎಂದು ಹೇಳುತ್ತ ಕುರ್ಚಿಯಲ್ಲಿ ಕುಳಿತ.

"ಮೊದ್ಲು ಕಾಫಿ ಕುಡಿ, ನಂತರ ವಿಷಯ" ಎಂದೆ.

ಕಾಫಿ ಕುಡಿದಾದ ಮೇಲೆ, ಅವನ ಮುಂದೆ ಕಾಗದಗಳನ್ನುಸರಿಸಿ "ಇವುಗಳನ್ನು ಓದು" ಎಂದೆ.

ಒಂದೆರಡು ಕಾಗದಗಳನ್ನು ಓದಿದ ಸಂಜಯ ಜೋರಾಗಿ ನಗತೊಡಗಿದ.

"ಏನೋ ನಗ್ತಾ ಇದ್ದಿಯಾ ?" ಎಂದೆ.

"ಮತ್ತೆ ಅಳಬೇಕಾ. ನೋಡಪ್ಪಾ, ಸುರೇಶ ಇವು ಸುಷಮಾಳಿಗೆ ಆಗದವರು ಬರೆದಿರುವ ಕಾಗದ. ತಲೆ ಬಿಸಿ ಮಾಡಿಕೊಳ್ಳಬೇಡಾ. ನನಗೂ ಮದುವೆ ಮುಂಚೆ ಹೀಗೆ ಕಾಗದಗಳು ಬಂದಿದ್ದವು. ನಾನು ತಲೆ ಕೆಡಿಸಿಕೊಳ್ಳಲು ಹೋಗಲಿಲ್ಲ. ಇವೆಲ್ಲ ಈಗ ಸಾಮಾನ್ಯವಾಗಿ ಹೋಗಿವೆ" ಎಂದ.

"ಅಂದ್ರೆ ಸುಳ್ಳು ಅಂತೀಯಾ ?"

"ಹೌದು. ಅಷ್ಟರ ಸುಳ್ಳು ಅಂತ ಹೇಳ್ತೀನಿ."

ಸ್ವಲ್ಪ ಹೊತ್ತು ಕುಳಿತಿದ್ದು ತನ್ನ ಆಫೀಸಿಗೆ ಮರಳಿದ.

ಸಿರೀಯಲ್ ನೋಡುತ್ತ ಕುಳಿತಿದ್ದೆ. ಫೋನ್ ಕಿರುಗುಟ್ಟಿತು. ಎತ್ತಿದೆ. ಸಂಜಯ ಆಚೆಯಿಂದ ಮಾತನಾಡುತ್ತಿದ್ದ. ನಾಳೆ ತನ್ನ ಮನೆಯಲ್ಲಿ ವಿಶೇಷ ಇರುವದಾಗಿಯೂ, ನಾನು ರಜೆ ಹಾಕಿ ತಪ್ಪದೆ ಬರಬೇಕಾಗಿಯೂ ತಿಳಿಸಿದ.

ರಜೆ ಹಾಕಿ ಸಂಜಯನ ಮನೆಯತ್ತ ಸ್ಕೂಟರ್ ಓಡಿಸಿದೆ. ನನಗಾಗಿಯೇ ಸಂಜಯ ಪತ್ನಿ ಸಮೇತನಾಗಿ ಕಾಯುತ್ತಿದ್ದ. ಬೆವರೊರೆಸಿಕೊಳ್ಳುತ್ತ ಕುಳಿತೆ. ಫ್ಯಾನ್ ಸ್ವಿಚ್ ಹಾಕಿ ಸಂಜಯನ ಪತ್ನಿ ಒಳ ಹೋದಳು.

"ಏನೋ ವಿಶೇಷ" ಎಂದೆ.

"ಅಂತದ್ದೇನೂ ಇಲ್ಲ. ಇವತ್ತು ಒಟ್ಟಿಗೆ ಊಟ ಮಾಡೋಣಾಂತಾ ಅನಿಸ್ತು. ಅದ್ಕೆ ಬರಹೇಳಿದೆ."

"ಸುಶೀಲಾ, ಜ್ಯೂಸ್ ತಗೊಂಡು ಬಾ" ಎಂದು ಕೂಗಿದ.

ವಾರಪತ್ರಿಕೆ ತಿರುಗಿಸುತ್ತ ಕುಳಿತೆ.

"ಪತ್ರಿಕೆ ನಂತರ ಓದಿದರಾಯ್ತು. ಮೊದ್ಲು ಜ್ಯೂಸ್ ಕುಡಿ." ಪಕ್ಕಕ್ಕೆ ಪತ್ರಿಕೆ ಇಟ್ಟು ತಲೆ ಎತ್ತಿದೆ. ನಂಬಲಾಗಲೇ ಇಲ್ಲ.

ಸುಷಮಾ ಜ್ಯೂಸ್ ಟ್ರೇ ಹಿಡಿದು ನಿಂತಿದ್ದಳು. ಕೈಗಳು ಮೆಲ್ಲನೆ ಅದರುತ್ತಿದ್ದವು. ಟ್ರೆಯನ್ನು ಟೀಪಾಯ ಮೇಲಿಟ್ಟವಳೇ ಓಡಿಹೋದಳು.

"ಸಂಜಯ ಏನಿದೆಲ್ಲಾ" ಎಂದೆ.

"ಹೇಳ್ತಿನಿ ಕೇಳು. ಸುಷಮಾ ನನಗೆ ಹೇಗೆ ಗೊತ್ತು ಅಂತ ತಾನೆ. ಸುಷಮಾ, ಸುಶೀಲಾಳ ಗೆಳತಿ. ಅವತ್ತು ನೀನು ಕೊಟ್ಟಿದ್ದ ಫೋಟೊ ತೋರಿಸಿದೆ. ಸುಶೀಲಾಗೆ ತುಂಬ ಸಂತೋಷವಾಯಿತು. ತುಂಬ ಒಳ್ಳೆ ಹುಡುಗಿ ಅಂತ ಹೇಳಿದ್ಲು. ಅದಕ್ಕೆ ನಾನಷ್ಟು ಧೈರ್ಯದಿಂದ ಕಾಗದದಲ್ಲಿರುವುದು ಸುಳ್ಳು ಅಂದದ್ದು" ಎಂದು ಒಳಗೆ ಹೋದ.

ಸುಷಮಾ ಟ್ರೇ ತೆಗೆದುಕೊಂಡು ಹೋಗಲು ಬಂದಳು.

"ಸುಷಮಾ ಸ್ವಲ್ಪ ಕುಳಿತುಕೋ" ಎಂದೆ. ತಲೆ ತಗ್ಗಿಸಿ ಕುಳಿತಳು.

"ಕಾಗದಗಳ ಬಗ್ಗೆ ತಿಳಿಯಿತಾ" ಎಂದೆ.

"ಹೂಂ. ನೀವು ನಂಬಿದ್ದಿರಾ ಅಂತ ಕಾಣುತ್ತೆ" ಎಂದಳು.

"ಹೌದು."

"ಈಗ."

"ಕಾಗದ ಬರೆದವರನ್ನು ಕೊಲ್ಲಬೇಕು ಅಂತ ಅನಿಸ್ತಾ ಇದೆ" ಅಂದೆ.

ಸುಷಮಾ ನನ್ನತ್ತ ನೋಡಿ ನಕ್ಕಳು. ಅದರ ಮೋಡಿಗೊಳಗಾದಂತೆ ಅವಳನ್ನೆ ನೋಡುತ್ತ ಕುಳಿತೆ. ಅವಳ ಮುಖ ನಾಚಿಗೆಯಿಂದ ಕೆಂಪೇರತೊಡಗಿತು.

**— ಫ್ರಾನ್ಸಿಸ್ ಆರ್. ಫೆರ್ನಾಂಡಿಸ್, ಹುಬ್ಬಳ್ಳಿ**



## ನಿರಾಸೆ

ಮಳೆಯು ಹನಿಯುತಿರೆ
ನಾ ನಡೆದೆ ಸಂಪಿಗೆ ಮರದಡಿಗೆ

ಕೆಂಪು ಸೂಸಿ ಚೆಲ್ಲಿತ್ತು ಎಲ್ಲೆಡೆ
ಹನಿ ಹನಿ ನೀರು ತೊಯ್ದಿಸಿತ್ತು ಮೈಯೆಲ್ಲಾ
ಸುಂಯ್ !...ಎಂದು ಬೀಸಿದ ಚಳಿಗಾಳಿ
ಮಿಡಿಯಿತು ನನ್ನಲಿ ಮೆಲುಭಾವನಾಡಿ

ಏನೋ !...ಹರ್ಷೋದ್ಗಾರ ಮನದಲಿ
ನಲ್ಲನ ಬಯಕೆಯ ತಾಪದಲಿ
ಚಳಿ ಮಾಯವಾಗಿ ಕಾವೇರಿತು ತನುವಲಿ
ಬಯಕೆ ಬೀಜ ಗಿಡವಾಗಿ ಬೆಳೆದು ಮರವಾಗಿ
ನಿಂತಿತು.

ನೆನೆನೆನೆದು ನಲ್ಲನ ಹುಚ್ಚಿನಲಿ
ಆಸೆಯು ಭುಗಿಲೆದ್ದು ನಿಂತಿತು
ಬಯಕೆ ಆಸೆಯ ಸಂಘರ್ಷದಲಿ
ತಾಳಲಾರೆ, ಭರಿಸಲಾರೆ ವಿಷಯವ ನಾ ಪಡೆದೆ

ನಲ್ಲನ ಸನಿಹಕೆಂದು ಕಾದಿದ್ದೆ
ಮಳೆಯಲ್ಲೇ ಮರದಡಿಯ
ಮನೆಯು ಹತ್ತಿರವಾಗುತಿ ರೆ
ಮಳೆಯು ದೂರವಾಗುತ್ತಿತ್ತು.

ಸೂರ್ಯ ದರ್ಶನದಿಂದ
ನನ್ನ ಆಸೆ, ಬಯಕೆಗಳೆಲ್ಲಾ ಮುದುಡಿತ್ತು
ನಲ್ಲನ ಸನಿಹಕೆ ನಾ ಹೋಗಲು
ಕಾವೆಲ್ಲಾ ತಂಪಾಗಿ, ಆಸೆಯಲ್ಲಾ ಚಿಗುಟಿತ್ತು !

**— ಹೆಚ್. ಎಸ್. ಗಿರಿಜಾಪ್ರಭು**

## ನಿಸ್ಸಹಾಯಕ

ಮಗ ಮಾಧವನಿಗಾಗಿ ಕಾದೂ ಕಾದೂ ಬೇಸತ್ತಿದ್ದ ಪಂಕಜಮ್ಮ ತುಂಬು ಬಸುರಿ ಮಗಳಿಗೆ "ಎಷ್ಟೂಂತ ಕಾಯ್ತೀಯ? ನೀನಾದ್ರೂ ಬಿಸಿ ಊಟಮಾಡು" ಎನ್ನುತ್ತಾ ಒಳನಡೆಯಲು ಎದ್ದರು. "ಹೊಸ ಆಫೀಸು, ಹೊಸ ಗೆಳೆಯರೊಡನೆ, ಅದೂ ಮೊದಲನೇ ದಿನವಾದ್ದರಿಂದ ಅವರ ಒತ್ತಾಯಕ್ಕೆಲ್ಲಾದರೂ ಹೋಗಿರಬಹುದಮ್ಮ. ಇನ್ನೈದು ನಿಮಿಷ ನೋಡೋಣ. ಬೇಗ ಬರ್ತೀನೀಂತ ಬೇರೆ ಹೇಳಿದ್ದ" ಎನ್ನುವಷ್ಟರಲ್ಲೇ ಗೇಟು ತೆರೆದು ಬಾಡಿದ ಮುಖಹೊತ್ತು, ಬಳಲಿ, ಕಾಲೆಳೆದುಕೊಂಡು ಬಂದ ಮಗನನ್ನು ನೋಡಿ ಆಫೀಸಿನ ಸುದ್ದಿ ಕೇಳಲು ವಾಕಿಂಗೂ ಹೋಗದೆ ಕಾತುರರಾಗಿ ಕುಳಿತಿದ್ದ ರಾಯರು ಏನೊಂದೂ ಮಾತನಾಡದೆ ಕೈಯಲ್ಲಿದ್ದ ಪುಸ್ತಕ ಓದುತ್ತಿರುವಂತೆ ನಟಿಸಿದ್ದರು. ಸೀದಾ ಒಳಹೋದ ಮಾಧವ ಬಟ್ಟೆ ಬದಲಾಯಿಸಿ, ಕೈಕಾಲು, ಮುಖ, ತೊಳೆದು ಅಡಿಗೆ ಕೋಣೆಯಲ್ಲಿ ಕಾಯುತ್ತಿದ್ದ ತಾಯಿಗೆ "ಊಟ ಬೇಡವಮ್ಮಾ, ತಲೆ ನೋವಿದೆ." ಎನ್ನುತ್ತಾ ಅವಳ ಉತ್ತರಕ್ಕೂ ಕಾಯದೆ ಒಂದು ಲೋಟ ಹಾಲನ್ನು ಬಗ್ಗಿಸಿಕೊಂಡು ಜೇಬಿನಲ್ಲಿದ್ದ ಸಾರಿಡಾನ್ ಮಾತ್ರೆ ನುಂಗಿ ತನ್ನ ಕೋಣೆ ಸೇರಿದ್ದ. ಬೇರೇನಾದರೂ ಹೇಳಿಯಾನೆಂದು ಕಾದಿದ್ದ ತಾಯಿ ನಿರಾಸೆಯಿಂದಲೂ, ನಿಸ್ಸಹಾಯಕರಾಗಿ ಮಗಳತ್ತ ನೋಡಿ ಕಣ್ಣೊರೆಸಿಕೊಂಡಿದ್ದರು. ಕೂಡಲೇ ಅಣ್ಣನ ಕೋಣೆಗೆ ನುಗ್ಗಿದ ಪ್ರೇಮ, "ಯಾಕಣ್ಣಾ ಒಂಥರಾ ಇದ್ದಿ? ಬಾಸ್ ಜೋರಿದ್ದಾರಾ? ಕೆಲಸ ಚೆನ್ನಾಗಿಲ್ಲವಾ? ಯಾಕಿಷ್ಟು ಹೊತ್ತಾಯ್ತು?" ಎಂದು ಪ್ರಶ್ನೆಗಳ ಸುರಿಮಳೆ ಹರಿಸುತ್ತಿರುವಾಗಲೇ ಬಾಗಿಲ ಬಳಿ ಬಂದು ನಿಂತಿದ್ದ ತಾಯಿ ತಂದೆಯರತ್ತ ನೋಡಿ ವಿಧಿ ಇಲ್ಲದೆ "ಬನ್ನೀಪ್ಪಾ, ನಿಮಗ್ಯಾಕೆ ಸುಮ್ಮನೆ ಹೇಳಿ ನೋವುಂಟು ಮಾಡುವುದು ಎಂದಿದ್ದೆ" ಎಂದು ಮೌನವಹಿಸಿದ್ದ ಮಾಧವ ಕ್ಷಣ ತಡೆದು,

"ಆಫೀಸಿನ ಕೆಲಸ ಚೆನ್ನಾಗಿದೆ. ಎಲ್ಲರೂ ಒಳ್ಳೆಯವರೇ. ಆದರೆ ನನ್ನ ದುರಾದೃಷ್ಟ. ಮಧ್ಯಾಹ್ನ ಎಂ. ಡಿ. ಯವರ ಸೆಕ್ರೆಟರಿ ಬಂದು, "ನೋಡ್ರೀ ಈಗ ನಿಮಗೆ ಕೊಟ್ಟಿರುವ ಕೆಲಸ ಟೆಂಪರರಿ. ಕೆಲಸ ಖಾಯಂ ಆಗಬೇಕಾದರೆ 20,000 ರೂ. ಕೊಡಬೇಕು. ಅದೂ ನಿಮ್ಮ ಮೆರಿಟ್ ನೋಡಿ ಇಷ್ಟು ಕಡಿಮೆ ಮಾಡಿದ್ದಾರೆ' ಎಂದರು. ಅದುವರೆಗೂ ಹುಮ್ಮಸ್ಸಿನಿಂದಿದ್ದ ನಾನು ಅವರ ಮಾತು ಕೇಳಿ ಗಾಳಿಹೋದ ಬೆಲೂನಿನಂತಾಗಿದ್ದೆ. 'ನನ್ನ ಸಂಬಳದಲ್ಲೇ ಮುರಿದುಕೊಳ್ಳಿ' ಎಂದೂ ಹೇಳಿದ್ದೆ. ಒಪ್ಪಲಿಲ್ಲ. 'ಒಂದು ವಾರದೊಳಗೆ ವ್ಯವಸ್ಥೆ ಮಾಡಿ' ಎಂದರು" ಎಂದ. ಎಲ್ಲಾ ಸಮಾಚಾರ ಹೇಳಿ ಅವರೆಲ್ಲರ ಮುಖ ನೋಡಿದ ಮಾಧವ. ಆದರೂ ಅವರು ಹೊರಹೋಗದಿರುವುದನ್ನು ಕಂಡು, "ಇಷ್ಟು ಲೇಟ್ ಯಾಕಾಯ್ತು ಎಂದು ತಾನೇ ನಿಮ್ಮ ಆತಂಕ. ಅದೂ ಹೇಳ್ತೀನಿ, ಕೇಳಿಬಿಡಿ" ಎನ್ನುತ್ತಿರುವಾಗಲೇ ಅವನ ಮುಖದಲ್ಲಿ ಉದ್ವೇಗ ಕಾಣಿಸಿತು.

"ಕೀರ್ತಿ ಮನೆಗೆ ಹೋಗಿದ್ದೆ. ಕೆಲಸ ಸಿಕ್ಕಿದ ಕೂಡಲೇ ಮದುವೆ ಇಟ್ಟುಕೊಳ್ಳೋಣವೆಂದು ಅವಳ ತಂದೆ ಒತ್ತಾಯಿಸಿದ್ದರು. 'ಅನಿವಾರ್ಯವಾಗಿ ಮದುವೆ ಮುಂದೂಡಬೇಕಾಗಿದೆ. ನನ್ನ ಕೆಲಸ ಇನ್ನೂ ಪರ್ಮನೆಂಟ್ ಆಗಬೇಕಾಗಿದೆ' ಎಂದ ಕೂಡಲೇ, ಕಾಫಿ ಕೂಡ ಕೊಡದೆ, "ನಿನ್ನ ಆದರ್ಶಕ್ಕಿಷ್ಟು ಬೆಂಕಿಹಾಕ! ಫೇಲಾದವರೂ ಹೇಗಾದರೂ ಮಾಡಿ ಕೆಲಸ ಗಿಟ್ಟಿಸಿಕೊಳ್ಳುತ್ತಾರೆ. ಯೊಗ್ಯತೆ ಇಲ್ಲದವ. ಭಾಷಣ ಬಿಗಿಯಲು ಆದೀಯ..." ಎಂದೆಲ್ಲಾ ಹಂಗಿಸಿದರು. ನನಗೂ ತಡೆಯಲಿಕ್ಕಾಗದೆ, 'ನಾನು ಆದರ್ಶಕ್ಕೆ ಜೋತು ಬಿದ್ದುದರಿಂದಲೇ ನಿಮ್ಮ ಮಗಳನ್ನು ವರದಕ್ಷಿಣೆ ಇಲ್ಲದೆ ಮದುವೆಯಾಗಲು ಒಪ್ಪಿದ್ದು. ಇಲ್ಲದಿದ್ದರೆ ನಿಮ್ಮ ಹಿರಿ ಅಳಿಯನಂತೆ ನಿಮ್ಮ ದುಡ್ಡಲ್ಲೇ ಕೆಲಸ ಗಿಟ್ಟಿಸಿಕೊಂಡು ಮೆರೆಯುತ್ತಿದ್ದೆ' ಎಂದುಬಿಟ್ಟೆನಮ್ಮ. ಅದಕ್ಕವರು 'ವರದಕ್ಷಿಣೆ ಬೇರೆ ಕೇಡು, ನಿನ್ನಂತಹ ನಿರುದ್ಯೋಗಿಗೆ ಮಗಳನ್ನ ಕೊಡುವುದೇ ಹೆಚ್ಚು. ವರದಕ್ಷಿಣೆ ಕೊಟ್ಟರೆ ಎಂತೆಂತಹವರೂ ಸಾಲುಗಟ್ಟಿ ನಿಲ್ಲುತ್ತಾರೆ' ಎಂದೆಲ್ಲಾ ಜಂಭಕೊಚ್ಚಿಕೊಂಡರು. ನನಗೂ ಕೆಲಸಕ್ಕೆಂದು ಅಲೆದು ಸಾಕಾಗಿದೆ. ನಿರುದ್ಯೋಗಿ ಎಂದರೆ ಎಲ್ಲರಿಗೂ ತಾತ್ಸಾರ. ದುಡ್ಡಿದ್ದವನೇ ದೊಡ್ಡಪ್ಪ ಎನ್ನುವ ಈ ಕಾಲದಲ್ಲಿ ನೀತಿವಂತವರಿಗೆ ಬೆಲೆ ಎಲ್ಲಿಯದು. ನಾಳೆ ಆ ದಲ್ಲಾಳಿ ಶಿವಣ್ಣನಿಗೆ ಹೇಳಿ ನನಗೂ ಯಾರಾದರೂ ವರದಕ್ಷಿಣೆ ಕೊಡುವಂತಹ ಮಾವನನ್ನು ಹುಡುಕಮ್ಮ"—ಎನ್ನುತ್ತಾ ಮುಸುಕೆಳೆದು ಮಲಗಿದ್ದ.

"ಹೇಗಿದ್ದ ಮಗ ಹೇಗಾಗಿಹೋದ!" ಎಂದು ಹಲುಬಿದ ತಂದೆ, ತಾಯಿಯರು ಊಟದ ಶಾಸ್ತ್ರ ಮಾಡಿ ಮಲಗಿದ್ದರು. ನಿದ್ರೆ ಬಾರದೆ ಹೊರಳಾಡುತ್ತಿರುವಾಗಲೇ ಮಗನ ಕೋಣೆಯಿಂದ 'ಧಬ್! ಧಬ್!' ಎಂಬ ಸದ್ದು ಕೇಳಿ ಓಡಿದ್ದರು. ಹಾಸಿಗೆಯಲ್ಲಿ ಮುಖವನ್ನು ಅತ್ತಿತ್ತ ಹೊರಳಾಡಿಸುತ್ತಾ, ಕಾಲನ್ನು ಓಡುವವನಂತೆ ಎತ್ತಿ ಹಾಕುತ್ತಿದ್ದ ಮಗನನ್ನು ಕಂಡು ಎಚ್ಚರಿಸಲೆಂದು ದೀಪ ಹಾಕಿದ್ದರು. "ಯಾಕ್ಹೀಗೆ ಒದ್ದಾಡ್ತಿದಿ? ಕೆಟ್ಟ ಕನಸಾ?" ಎಂದಾಗ ಎಚ್ಚರಾದ ಮಾಧವ ಬೆವರನ್ನೊರೆಸಿಕೊಳ್ಳುತ್ತಾ ಎದ್ದು ಕುಳಿತು, ಸಮಾಧಾನದ ಉಸಿರುಬಿಟ್ಟು. "ಅಬ್ಬಾ! ಎಂಥ ಕನಸು! ವರದಕ್ಷಿಣೆ ಕೊಡಲೊಪ್ಪಿದ ಮನೆಯ ಹುಡುಗಿ ನೋಡಿ ಹೊರಬರುತ್ತಿರುವಾಗಲೇ—ಪರಿಚಯದವರು, ಕಾಲೇಜಿನಲ್ಲಿ ನನ್ನ ವರದಕ್ಷಿಣೆ ವಿರೋಧದ ಭಾಷಣಕ್ಕೆ ಸ್ಪಂದಿಸಿದವರು, ಬಡ ಕನ್ಯಾಪಿತೃಗಳು, ಸುತ್ತ ನಿಂತು ಹಂಗಿಸಿದಂತೆ, ತಿರಸ್ಕಾರದಿಂದ-'ಹೇಳುವುದೊಂದು, ಇವನು ಮಾಡುವುದೊಂದು ಎಂದು ವ್ಯಂಗ್ಯದಿಂದ ನೋಡಿದಂತೆ, ಹಾಸ್ಯಮಾಡಿ ನಕ್ಕಂತೆ ಆಗಿ ಅವರಿಂದ ಪಾರಾಗಲು, ದಿಕ್ಕು ತೋಚದೆ ಓಡುತ್ತಿದ್ದೆ. ವರದಕ್ಷಿಣೆ ತೆಗೆದುಕೊಳ್ಳುವುದೊಂದೇ ಉಳಿದ ದಾರಿ ಎಂದು ಯೋಚಿಸಿದ್ದಕ್ಕೇ ಇಷ್ಟು ಪಾಡುಪಟ್ಟೆ. ಇನ್ನು ನಿಜವಾಗಿ ತೆಗೆದುಕೊಂಡಿದ್ದರೆ..." ಎಂದು ನಿಸ್ಸಹಾಯಕನಾಗಿ ಕುಳಿತ ಮಗನಿಗೆ— "ಕಂಗೆಡಬೇಡಪ್ಪಾ, ನಿನ್ನಪ್ಪನಿಗೂ ನಿನ್ನೆ ಟ್ಯುಟೋರಿಯಲ್ಸ್ ನಲ್ಲಿ ಕೆಲಸ ಸಿಕ್ಕಿದೆ. ಸೊಸೆಗೇಂತ ಇಟ್ಟ ಹಳೆ ಚಿನ್ನ ಬ್ಯಾಂಕಿನಲ್ಲಿಟ್ಟು ನಾಳೆ ನಿನಗೆ 20,000 ರೂ ಕೊಡುವಂತೆ ನಿನ್ನ ತಂದೆಗೆ ಹೇಳಿದ್ದೇನೆ. ಪೆನ್‌ಶನ್ ಹಣದ ಜೊತೆಗೆ, ನಿನ್ನ ಸಂಬಳದಲ್ಲಿ ಸ್ವಲ್ಪ ಹಣ ಬ್ಯಾಂಕ್‌ಗೆ ಕಟ್ಟಿ ಲೋನ್ ತೀರಿಸಿದರಾಯ್ತು." ಎನ್ನುತ್ತಾ ಧೈರ್ಯ ಹೇಳಿ ಹೊರಟರು ಪಂಕಜಮ್ಮ. ವರದಕ್ಷಿಣೆ ತೆಗೆದುಕೊಳ್ಳುವ ಬದಲು ತನ್ನ ಚಿನ್ನ ಒತ್ತೆ ಇಟ್ಟು ಹಣ ಒದಗಿಸುವ ತಾಯಿಯನ್ನು ಪಡೆಯಲು ಪುಣ್ಯಪಡೆದಿರಬೇಕು. ತಾನೇ ಧನ್ಯ ಎಂದುಕೊಂಡು ದೀಪವಾರಿಸಿ ಮಲಗಿದ್ದ ಮಾಧವ.

**— ಉರಿಮಜಲು ಕೆ. ಸುಕನ್ಯಾ**





## ರಾಜ್ಯ ಯುವ ಪ್ರಶಸ್ತಿ ವಿಜೇತೆ ಛಾಯಾ

ಶಿವಮೊಗ್ಗ ಜಿಲ್ಲೆಯ ಹೊಸನಗರದ ಡಿ. ಎಂ. ಛಾಯಾ ಅವರಿಗೆ ಈ ಬಾರಿ ರಾಜ್ಯ ಯುವ ಪ್ರಶಸ್ತಿ ದೊರೆತಿದೆ. ವೈಯುಕ್ತಿಕ ಪ್ರಶಸ್ತಿಯಲ್ಲಿ 5000 ರೂ. ನಗದು ಬಹುಮಾನ ಮತ್ತು ಪ್ರಶಸ್ತಿ ಪತ್ರ ದೊರೆತರೆ 89–90 ನೇ ಸಾಲಿಗೆ ಇವರು ಅಧ್ಯಕ್ಷರಾಗಿದ್ದ ಕಳೂರು ಯುವತಿ ಮಂಡಳಿ 25,000 ರೂ. ನಗದು ಮತ್ತು ಪ್ರಶಸ್ತಿ ಫಲಕ ಗಳಿಸಿದೆ.

ಮೂರು ವರ್ಷ ಕಳೂರು ಮಂಡಳಿ ಅಧ್ಯಕ್ಷರಾಗಿ, ನಾಲ್ಕು ವರ್ಷ ಕಾರ್ಯದರ್ಶಿಯಾಗಿ ಮಂಡಳಿಯ ಕಾರ್ಯಗಳನ್ನು ನಿರ್ವಹಿಸಿದ್ದಾರೆ. ಯುವಜನೋತ್ಸವದಲ್ಲಿ ಭಾಗವಹಿಸಿದ್ದ ಇವರು, ಪಶ್ಚಿಮ ಘಟ್ಟ ಉಳಿಸಿ, ಪರಿಸರ ಜಾಗೃತಿ, ಮಹಿಳಾ ಕ್ರೀಡಾಕೂಟ, ಕರ್ನಾಟಕ ನಾಟಕೋತ್ಸವ ಗಮಕ ವಾಚನ ಹೀಗೆ ಅನೇಕ ಕಾರ್ಯಕ್ರಮಗಳಲ್ಲಿ ಮಂಡಳಿಯಿಂದ ಪ್ರತಿನಿಧಿಸಿದ್ದಾರೆ.

ಸಾಕ್ಷರತೆ, ರೋಗಿಗಳ ಉಪಚಾರ, ಬಂದೂಕು ತರಬೇತಿ, ಯೋಗಶಿಕ್ಷಣ, ಕುಶಲ ಕಲೆ ತರಬೇತಿ, ಟ್ರೆಕ್ಕಿಂಗ್‌ಗಳಲ್ಲಿ ಮಂಡಳಿಯ ಸದಸ್ಯರನ್ನು ಸಕ್ರಿಯವಾಗಿ ದುಡಿಯಲು ಪ್ರೇರೇಪಿಸಿದ್ದಾರೆ. ಯುವತಿ ಮಂಡಲದ ಸ್ವಂತ ಕಟ್ಟಡಕ್ಕೆ ಮಂಡಲ ಪಂಚಾಯತಿಯಿಂದ 60 × 40 ಅಡಿ ಅಳತೆಯ ನಿವೇಶನ ದೊರಕಿಸಿಕೊಂಡದ್ದು ಇವರ ಸಾಧನೆ. ಈ ನಿವೇಶನದಲ್ಲಿ ಕಟ್ಟಡ ನಿರ್ಮಾಣವಾಗಬೇಕೆಂದು ಅವರು ಕಾಮಗಾರಿ ಆರಂಭಿಸಿದ್ದಾರೆ. ಮಲೆನಾಡಿನಲ್ಲಿ ಅಮೂಲ್ಯವಾದ ಪ್ರತಿಭೆಗಳಿವೆ. ಸೂಕ್ತ ಅವಕಾಶ ದೊರೆತರೆ ಬೆಳಕಿಗೆ ಬರಬಲ್ಲವು ಎಂಬುದು ಛಾಯಾ ಅನಿಸಿಕೆ.

**— ಎಲಿಜಬೆತ್ ಡಿಸೋಜಾ**

Edited & Published by B. Viswanatha Reddi for DOLTON PUBLICATIONS, MADRAS-600 026
& Printed by B. V. REDDI at Prasad Process Private Ltd., Madras-600 026